೭೫ನೇ
ಅಖಿಲಭಾರತ
ಅಮೃತಮಹೋತ್ಸವ
ಕನ್ನಡ ಸಾಹಿತ್ಯ
ಸಮ್ಮೇಳನ
ಚಿತ್ರದುರ್ಗ

# ಜೈಮಿನಿ ಭಾರತ

(ಅಶ್ವಮೇಧಿಕ ಪರ್ವ)

(ಸಂಸ್ಕೃತ ಜೈಮಿನಿ ಭಾರತದ ಕನ್ನಡ ಅನುವಾದ)

ಅನುವಾದಕರು : ಕಡಬದ ನಂಜುಂಡ ಶಾಸ್ತ್ರಿಗಳು
ಎನ್. ರಂಗನಾಥಶರ್ಮ



ಕನ್ನಡ ಸಾಹಿತ್ಯ ಪರಿಷತ್ತು
ಪಂಪಮಹಾಕವಿ ರಸ್ತೆ, ಚಾಮರಾಜಪೇಟೆ
ಬೆಂಗಳೂರು-೫೬೦ ೦೧೮

ರಾಮಕೃಷ್ಣ ಭಟ್. ಕೋಟೇಲು
28/04/11

೭೫ ನೇ ಅಖಿಲ ಭಾರತ ಅಮೃತ ಮಹೋತ್ಸವ ಕನ್ನಡ ಸಾಹಿತ್ಯ ಸಮ್ಮೇಳನ – ಚಿತ್ರದುರ್ಗ

# ಜೈಮಿನಿ ಭಾರತ

## (ಅಶ್ವಮೇಧಿಕ ಪರ್ವ)

## (ಸಂಸ್ಕೃತ ಜೈಮಿನಿ ಭಾರತದ ಕನ್ನಡ ಅನುವಾದ)

ಅನುವಾದಕರು
ಕಡಬದ ನಂಜುಂಡಶಾಸ್ತ್ರಿಗಳು
ಎನ್. ರಂಗನಾಥಶರ್ಮ



**ಕನ್ನಡ ಸಾಹಿತ್ಯ ಪರಿಷತ್ತು**
ಪಂಪಮಹಾಕವಿ ರಸ್ತೆ, ಚಾಮರಾಜಪೇಟೆ
ಬೆಂಗಳೂರು- ೫೬೦೦೧೮

**JAIMINI BHARATHA** - A Kannada Translation of the Sanskrit Jaimini Bharatha
by : **Late Kadabada Nanjunda Shastry and N. Ranganatha Sharma**
Published by : **Kannada Sahitya Parishat**
Pampa Mahakavi Road, Chamarajapet, Bangalore - 560018
Pages : xvii + 320 Price : Rs. **135=00** ; **2009**

| | |
|---|---|
| ಮುದ್ರಣದ ವರ್ಷ | : ೨೦೦೯ |
| ಪ್ರತಿಗಳು | : ೧೦೦೦ |
| ಬೆಲೆ | : ಒಂದು ನೂರ ಮೂವತ್ತೈದು ರೂಪಾಯಿಗಳು |



## ಪ್ರಕಟಣಾ ಸಮಿತಿ



ಮು[illegible] ಪುಟ ವಿನ್ಯಾಸ : ಶ್ರೀ ಮೋನಪ್ಪ

ಮುದ್ರ[illegible] [illegible].ಎಂ. ಶ್ರೀ ಅಚ್ಚುಕೂಟ ಆಫ್‌ಸೆಟ್ ಕನ್ನಡ ಸಾಹಿತ್ಯ ಪರಿಷತ್ತು
[illegible]ಪಮಹಾಕವಿ ರಸ್ತೆ, ಚಾಮರಾಜಪೇಟೆ, ಬೆಂಗಳೂರು – ೧೮

## ಅಧ್ಯಕ್ಷರ ನುಡಿ

ಬಿ.ಎಂ.ಶ್ರೀ. ಅಚ್ಚುಕೂಟ ಪ್ರಾರಂಭವಾದಾಗಿನಿಂದ ಕನ್ನಡ ಸಾಹಿತ್ಯ ಪರಿಷತ್ತು ಕನ್ನಡಿಗರಿಗೆ ಬೇಕಾಗುವ ಸಾಹಿತ್ಯವನ್ನು ಕಾಲಕಾಲಕ್ಕೆ ಕೊಡುತ್ತಾ ಬಂದಿದೆ. ಪರಿಷತ್ತು ಪುಸ್ತಕಗಳನ್ನು ಪ್ರಕಟಿಸುತ್ತಾ ಬಂದ ಈ ದೀರ್ಘ ಅವಧಿಯಲ್ಲಿ ಅಧ್ಯಕ್ಷರು ಮತ್ತು ಪ್ರಕಟಣಾ ಸಮಿತಿ ಸಹೃದಯ ಓದುಗರ ಅಭಿರುಚಿಗೆ ಸ್ಪಂದಿಸಿರುವುದಲ್ಲದೆ ಸದಭಿರುಚಿಯನ್ನು ನಿರ್ಮಾಣ ಮಾಡುವ ಕೆಲಸವನ್ನು ಎಚ್ಚರದಿಂದ ಮಾಡುತ್ತಾ ಬಂದಿದ್ದಾರೆ. ಎಲ್ಲ ಕ್ಷೇತ್ರಗಳಿಂದ ಹರಿದುಬರುವ ಜ್ಞಾನಧಾರೆಗಳನ್ನು ಹಿಡಿದುಕೊಟ್ಟು ಲೋಕಜ್ಞಾನವನ್ನು ಓದುಗರಲ್ಲಿ ತುಂಬುವ, ಅವರ ಅರಿವಿನ ದಿಗಂತಗಳನ್ನು ವಿಸ್ತರಿಸುವ, ಆತ್ಮವಿಶ್ವಾಸವನ್ನು ಹುಟ್ಟಿಸುವ ಕೆಲಸಕ್ಕೆ ಪರಿಷತ್ತು ವೇದಿಕೆಯಾಗಿದೆ. ವಿವಿಧ ಜ್ಞಾನ ಶಿಸ್ತುಗಳಲ್ಲಿ ಪರಿಣಿತರಾದವರನ್ನು ಗುರುತಿಸಿ ಅವರಿಂದ ಪುಸ್ತಕ ಬರೆಸಿದೆ. ಸ್ವಯಂಪ್ರೇರಿತರಾಗಿ ಪ್ರಕಟಣೆಗೆ ಹಸ್ತಪ್ರತಿಗಳನ್ನು ಸಲ್ಲಿಸಿದ ಸಂದರ್ಭದಲ್ಲಿ ಅವುಗಳಲ್ಲಿ ಉತ್ತಮವಾದವುಗಳನ್ನು ಆಯ್ದು ಪ್ರಕಟಿಸಿದೆ. ವಿಚಾರ ಸಂಕಿರಣಗಳನ್ನು ನಡೆಸಿ, ಅಲ್ಲಿ ಮಂಡಿಸಲಾದ ಪ್ರಬಂಧಗಳನ್ನು ಪುಸ್ತಕ ರೂಪದಲ್ಲಿ ಪ್ರಕಟಿಸಿದೆ. ಕನ್ನಡ ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ ಪ್ರಾತಿನಿಧಿಕವೆನಿಸುವ ಕೃತಿಗಳನ್ನು ಹೊರತಂದಿದೆ. ಪುಸ್ತಕ ದತ್ತಿಯಿಂದ ಮೌಲಿಕ ಕೃತಿಗಳನ್ನು ಪ್ರಕಟಿಸಿದೆ. ಕರ್ನಾಟಕ ಸರ್ಕಾರದ ಧನಸಹಾಯದ ನೆರವಿನಿಂದಲೂ ಎಲ್ಲರಿಗೆ ಎಲ್ಲ ಕಾಲಗಳಲ್ಲೂ ಉಪಯುಕ್ತವಾಗುವ ನಿಘಂಟು, ಕೋಶಗಳನ್ನು ಪ್ರಕಟಿಸಿದೆ.

ವಿವಿಧ ಸಂದರ್ಭಗಳಲ್ಲಿ ಹೊರಬಂದ ಕೃತಿಗಳಲ್ಲಿ ಕೆಲವು ಮತ್ತೆ ಮತ್ತೆ ಪ್ರಕಟವಾಗುವ ಭಾಗ್ಯವನ್ನು ಪಡೆದುಕೊಂಡಿವೆ. ಹಳಗನ್ನಡ ಕಾವ್ಯಗಳ ಗದ್ಯಾನುವಾದ, ಜೀವನ ಚರಿತ್ರೆ, ಸಾಹಿತ್ಯ ಪರೀಕ್ಷೆಗಳ ಪಠ್ಯಪುಸ್ತಕಗಳು, ನಾಟಕ ಸಂಪುಟ, ವಿಮರ್ಶೆ, ಸಂಶೋಧನೆ, ಪ್ರಬಂಧ ಮುಂತಾದ ಪ್ರಕಾರಗಳಲ್ಲಿ ಹೆಚ್ಚು ಬೇಡಿಕೆ ಇರುವ ಪುಸ್ತಕಗಳನ್ನು ಮರುಮುದ್ರಣದ ಮೂಲಕ ಸಹೃದಯರಿಗೆ ತಲುಪಿಸುವುದು ಪರಿಷತ್ತಿನ ಕರ್ತವ್ಯವಾಗಿದೆ. ಅಯ್ಯೋ, ಇಂಥ ಪುಸ್ತಕ ಸಿಗಲಿಲ್ಲವಲ್ಲ ಎಂದು ಕನ್ನಡಿಗರು ಕೊರಗದಂತೆ ನೋಡಿಕೊಳ್ಳಬೇಕಾಗಿದೆ.

ನಾಡು ನುಡಿಯ ಸೇವೆಗೆ ತಮ್ಮನ್ನು ಸಮರ್ಪಿಸಿಕೊಂಡು ಕನ್ನಡಿಗರ ಮನಸ್ಸಿನಲ್ಲಿ ಚಿರಸ್ಮರಣೀಯರಾಗಿರುವ ಮಹನೀಯರ ಜೀವನ-ಕಾರ್ಯಗಳನ್ನು ಪರಿಚಯಿಸುವ ಪುಸ್ತಕಗಳು, ಕುವೆಂಪು, ಡಿ.ವಿ.ಜಿ., ಕೆ.ಎಸ್.ನ., ಎ.ಎನ್.ಮೂರ್ತಿರಾವ್, ಗೊರೂರು, ಶಂ.ಬಾ.ಜೋಶಿ, ಆಲೂರು ವೆಂಕಟರಾಯರು ಮುಂತಾದ ಸಾಹಿತ್ಯ ದಿಗ್ಗಜಗಳ ಪುಸ್ತಕಗಳು, ಕನ್ನಡ ನಾಡಿನ ಚರಿತ್ರೆಯನ್ನು ಸಾದ್ಯಂತವಾಗಿ ಕಟ್ಟಿಕೊಡುವ ಹಿರಿಯ

ಸಂಶೋಧಕರ ಪುಸ್ತಕಗಳು, ಹಳಗನ್ನಡದ ಮಹಾಕವಿಗಳ ಮಹತ್ವವನ್ನು ಸಾದರಪಡಿಸುವ ಪುಸ್ತಕಗಳು, ಹಳಗನ್ನಡ, ನಡುಗನ್ನಡದ ಶ್ರೇಷ್ಠ ಕಾವ್ಯಗಳು ಅಮೃತ ಮಹೋತ್ಸವ ಸಾಹಿತ್ಯ ಸಮ್ಮೇಳನದ ಸಂದರ್ಭದಲ್ಲಿ ಬಿಡುಗಡೆಯಾಗುತ್ತಿದ್ದು, ಇವು ಕನ್ನಡಿಗರ ಮನೆಗಳಲ್ಲಿ ಅತ್ಯವಶ್ಯಕವಾಗಿ ಸೇರ್ಪಡೆಗೊಳ್ಳುವಂಥವಾಗಿವೆ ; ಆಗಾಗ ತಿರುವಿಹಾಕಲು, ಮನನ ಮಾಡಲು ಯೋಗ್ಯವಾದವುಗಳಾಗಿವೆ.

ಇವತ್ತಿನ ಸಂದರ್ಭದಲ್ಲೂ ಬೇರೆ ಬೇರೆ ಪ್ರಕಾಶನ ಸಂಸ್ಥೆಗಳು ಹೊರತರುತ್ತಿರುವ ಕೃತಿಗಳ ಜೊತೆಯಲ್ಲಿ ಹೋಲಿಸಿದರೆ ಪರಿಷತ್ತಿನ ಪ್ರಕಟಣೆಗಳು ಓದುಗರ ಜೇಬಿಗೆ ಭಾರವೆನಿಸುವಂಥವಲ್ಲ. ಆದಷ್ಟೂ ಕಡಿಮೆ ಬೆಲೆಯಲ್ಲಿ ಮೌಲಿಕ ಕೃತಿಗಳನ್ನು ಸಹೃದಯರಿಗೆ ಕೊಡಬೇಕೆನ್ನುವ ನೀತಿಗೆ ಪರಿಷತ್ತು ಈಗಲೂ ಬದ್ಧವಾಗಿದೆ. ಕನ್ನಡಿಗರನ್ನು ಪ್ರಜ್ಞಾವಂತರಾಗಿ, ಅಭಿಮಾನಧನರಾಗಿ, ವಿಶ್ವಮಾನವರಾಗಿ ರೂಪಿಸಲು ಪರಿಷತ್ತು ಪ್ರಕಟಿಸುವ ಸಾಹಿತ್ಯವು ಪೂರಕವಾಗಿರಬೇಕೆನ್ನುವ ಆಶಯ ಈ ನೀತಿಗೆ ಬೆನ್ನೆಲುಬಾಗಿದೆ. ತಮಿಳು, ತೆಲುಗು, ಮಲೆಯಾಳಂ ಮಾತೃಭಾಷೆಯವರೂ ಕರ್ನಾಟಕದಲ್ಲಿ ಕನ್ನಡಿಗರಾಗಿರಬೇಕೆಂದು ಬಯಸುವ ಪರಿಷತ್ತು ಅಂಥವರಿಗೆ ಸಹಾಯಕವಾಗುವಂತೆ ಸ್ವಯಂಬೋಧಿನಿಗಳನ್ನು ರೂಪಿಸಿರುವುದು ಅಕ್ಕಪಕ್ಕದ ರಾಜ್ಯಗಳವರ ಜೊತೆ ಪರಿಷತ್ತು ತೋರುತ್ತಾ ಬಂದಿರುವ ಭ್ರಾತೃ ವಾತ್ಸಲ್ಯದ ಸಂಕೇತವಾಗಿದೆ.

ಪರಿಷತ್ತು ಈಗಾಗಲೇ ಪ್ರಕಟಿಸಿ ಅತ್ಯಂತ ಜನಪ್ರಿಯವಾಗಿರುವ ಪುಸ್ತಕಗಳನ್ನು ಮತ್ತು ಹೊಸ ಪುಸ್ತಕಗಳನ್ನು ಚಿತ್ರದುರ್ಗದಲ್ಲಿ ನಡೆಯುತ್ತಲಿರುವ ಅಖಿಲ ಭಾರತ ೭೫ನೆಯ ಅಮೃತ ಮಹೋತ್ಸವ ಕನ್ನಡ ಸಾಹಿತ್ಯ ಸಮ್ಮೇಳನದ ಸಂದರ್ಭದಲ್ಲಿ ಮುದ್ರಣಗೊಳಿಸಿ ಕನ್ನಡಿಗರ ಕೈಗೊಪ್ಪಿಸುವುದಕ್ಕೆ ನಮಗೆ ಹೆಮ್ಮೆಯೆನಿಸುತ್ತದೆ. ಸಹೃದಯರು ಈ ಪುಸ್ತಕಗಳನ್ನು ಎಂದಿನ ಪ್ರೀತ್ಯಾದರಗಳಿಂದ ಬರಮಾಡಿಕೊಳ್ಳುವರೆಂಬ ಭರವಸೆ ನನಗಿದೆ. "ಮಾತಿಗೆ ನಾಶಪಡಿಸುವ ಹಾಗೂ ಶಮನಗೊಳಿಸುವ ಶಕ್ತಿಯಿದೆ. ಸತ್ಯ ಮತ್ತು ದಯೆಯನ್ನು ಸಮ್ಮಿಲನಗೊಳಿಸುವ ಶಕ್ತಿಯೂ ಉಂಟು. ಅಷ್ಟೇ ಅಲ್ಲ ಮಾತಿಗೆ ವಿಶ್ವವನ್ನು ಬದಲಾಯಿಸುವ ಶಕ್ತಿ ಇದೆ" ಎಂದಿದೆ ಬುದ್ಧವಾಣಿ. ಇದು ಮಾತಿಗಿರುವ ಶಕ್ತಿ ಮತ್ತು ಮಾತನ್ನೇ ಕೃತಿಯಾಗಿಸುವ ಬರಹಕ್ಕಿರುವ ಶಕ್ತಿ. ಇಂಥ ಶಕ್ತಿಸ್ಫೋಟ ಪರಿಷತ್ತಿನ ಪುಸ್ತಕಗಳ ಮೂಲಕ ಆಗುತ್ತದೆನ್ನುವ ವಿಶ್ವಾಸ ನಮ್ಮದಾಗಿದೆ.

**ದಿನಾಂಕ : ೧೬-೯-೨೦೦೯** **ಡಾ. ನಲ್ಲೂರು ಪ್ರಸಾದ್. ಆರ್.ಕೆ.**

**ಅಧ್ಯಕ್ಷರು**

## ಅನುವಾದಕರ ಮಾತು

### (ಮೊದಲನೆಯ ಆವೃತ್ತಿ)

ಸಂಸ್ಕೃತದಲ್ಲಿ ಈ ಗ್ರಂಥಕ್ಕೆ 'ಜೈಮಿನೀಯಾಶ್ವಮೇಧಿಕ ಪರ್ವ' ಎಂಬ ಹೆಸರಿದೆ. ಇದನ್ನು ಕನ್ನಡದಲ್ಲಿ ವಾರ್ಧಕ ಷಟ್ಪದಿಗಳಾಗಿ ರಚಿಸಿರುವ ಲಕ್ಷ್ಮೀಶಕವಿಯು 'ಜೈಮಿನಿ ಭಾರತ' ಎಂದು ಹೆಸರನ್ನು ಕೊಟ್ಟಿದ್ದಾನೆ. ಈತನ ಗ್ರಂಥಕ್ಕೆ ಸಂಸ್ಕೃತದ ಅಶ್ವಮೇಧಿಕ ಪರ್ವವೂ ಮೂಲವಾಗಿದೆ. ಈ ಮೂಲಗ್ರಂಥಕ್ಕೂ ಪರಿವರ್ತನ ರೂಪವಾದ ಷಟ್ಪದೀಗ್ರಂಥಕ್ಕೂ ಕಥಾಭಾಗದಲ್ಲಿಯೂ, ವರ್ಣನಾಭಾಗದಲ್ಲಿಯೂ ಯಾವ ಸಾಮ್ಯ ವೈಷಮ್ಯಗಳೂ ಹೆಚ್ಚು ಕಡಿಮೆಗಳೂ ಇವೆಯೋ ಎಂಬುದನ್ನು ತಿಳಿಯುವುದು ಅವಶ್ಯಕವಾಗಿದೆ. ಇದು ಸಂಸ್ಕೃತ ಪರಿಚಯ ಹೆಚ್ಚಾಗಿಲ್ಲದ ಕನ್ನಡಿಗರಿಗೆ ಸುಲಭವಲ್ಲವಾದ ಕಾರಣ ಸಂಸ್ಕೃತಮೂಲಕ್ಕೆ ಪ್ರತಿಬಿಂಬವಾಗಿರುವಂತೆ ಪ್ರಾಯಶಃ ಎಲ್ಲ ಭಾಗದಲ್ಲಿಯೂ ಸಮವಾಗಿರುವ ಹಾಗೆ ಪರಿವರ್ತನರೂಪವಾದ ಈ ಕನ್ನಡದ ಗದ್ಯಾನುವಾದವನ್ನು ಬರೆದಿದೆ. ಅತ್ಯಲ್ಪ ಭಾಗದಲ್ಲಿ ಪರಿವರ್ತನಾ ಕ್ಲೇಶ ಮೊದಲಾದ ಕಾರಣದಿಂದ ಬಹು ವಿರಳವಾಗಿ ಸ್ವಲ್ಪ ವ್ಯತ್ಯಾಸಗಳು ಕಾಣಬಹುದು. ಆದರೂ ಅದು ಅಷ್ಟು ವ್ಯತ್ಯಾಸವೆಂದು ಹೇಳಿಕೊಳ್ಳುವ ಹಾಗಿಲ್ಲವೆನ್ನಬಹುದಾಗಿದೆ. ಕನ್ನಡದ ಜೈಮಿನಿ ಭಾರತವನ್ನನುಸರಿಸಿ ಮೈಸೂರು ಶಾಸನದ ಇಲಾಖೆಯ ಅಸಿಸ್ಟೆಂಟ್ ಮ॥ರಾ॥ ರಾ. ರಾಮರಾವ್, ಬಿ.ಎ., ಇವರು ಕನ್ನಡದಲ್ಲಿ ಗದ್ಯಾನುವಾದವನ್ನು ಬರೆದಿರುವರು. ಇದಲ್ಲದೆ ಶ್ರೀನಾಥನೆಂಬ ಕವಿಯು ತೆಲುಗಿನಲ್ಲಿ 'ಜೈಮಿನಿ ಭಾರತಮು' ಎಂಬ ಗ್ರಂಥವನ್ನು ಬರೆದಿರುವಂತೆ ತಿಳಿಯಬರುತ್ತದೆ. ಇವೆಲ್ಲವನ್ನೂ ಹೋಲಿಸಿ ನೋಡುವುದರಿಂದ ವಾಚಕರಿಗೆ ಅನೇಕ ಸಂಗತಿಗಳು ಸ್ಪಷ್ಟವಾಗಬಹುದು. ಸಂಸ್ಕೃತ ಮೂಲಕ್ಕೂ ಇವಕ್ಕೂ ಇರುವ ಹೆಚ್ಚು ಕಡಿಮೆಗಳನ್ನು ತಿಳಿಯಲು ಈ ಗ್ರಂಥವನ್ನು ರಚಿಸಿದೆ. ವಾಚಕರು ಇದನ್ನೋದುವುದರಿಂದ ಸೌಲಭ್ಯವುಂಟೆಂದು ತೋರುವುದು. ಪ್ರಾಜ್ಞರು ಈ ಗ್ರಂಥವನ್ನು ಅವಲೋಕಿಸಿ ನ್ಯೂನಾತಿರೇಕಗಳನ್ನು ತಿಳಿಯಪಡಿಸಿ ಗುಣಗ್ರಹಣಮಾಡುವರೆಂದು ಹಾರೈಸುತ್ತೇವೆ.

ಕಡಬದ ನಂಜುಂಡಶಾಸ್ತ್ರಿಗಳು

# ನಿವೇದನೆ

ವ್ಯಾಸಮುನಿಗಳು ಭಾರತಸಂಹಿತೆಯನ್ನು ರಚಿಸಿ ತಮ್ಮ ಶಿಷ್ಯರಿಗೆ ಉಪದೇಶಿಸಿದರು. ಮುಂದೆ ಜನಮೇಜಯನು ನಡೆಸಿದ ಸರ್ಪಯಾಗದ ಪ್ರಕರಣದಲ್ಲಿ ವ್ಯಾಸಶಿಷ್ಯರಾದ ವೈಶಂಪಾಯನರು ಜನಮೇಜಯನಿಗೆ ಭಾರತ ಸಂಹಿತೆಯನ್ನು ಹೇಳಿದರು. ಆಗ ವ್ಯಾಸರೂ ಅಲ್ಲಿ ಉಪಸ್ಥಿತರಾಗಿದ್ದರು. ಇದನ್ನು ಉಗ್ರಶ್ರವನು ಶೌನಕಾದಿ ಮುನಿಗಳಿಗೆ ಮತ್ತೆ ವಿವರಿಸಿದನು. ವ್ಯಾಸರ ಮಹಾಭಾರತವೆಂದು ಪ್ರಸಿದ್ಧವಾಗಿರುವುದು ಈ ಗ್ರಂಥ.

ವ್ಯಾಸಮುನಿಗಳ ಶಿಷ್ಯರು ನಾಲ್ವರು: ವೈಶಂಪಾಯನ, ಜೈಮಿನಿ, ಸುಮಂತು, ಮತ್ತು ಪೈಲ. ವೈಶಂಪಾಯನರು ಹೇಳಿದ್ದು ಮೇಲ್ಕಂಡ ಮಹಾಭಾರತ. ಇದೇ ರೀತಿಯಲ್ಲಿ ಉಳಿದ ಮೂವರೂ ಭಾರತವನ್ನು ರಚಿಸಿದ್ದಾರೆಂಬ ಕಿಂವದಂತಿ ಇದೆ. ಆದರೆ ಜೈಮಿನಿಗಳು ರಚಿಸಿದ ಆಶ್ವಮೇಧಿಕಪರ್ವವೆಂಬ ಗ್ರಂಥಭಾಗವು ಮಾತ್ರ ಈಗ ಉಪಲಬ್ಧವಾಗಿದೆ. ಇದೇ ರೀತಿಯಲ್ಲಿ ಉಳಿದ ಪರ್ವಗಳನ್ನೂ ಅವರು ರಚಿಸಿರಬಹುದೆಂದು ತೋರುತ್ತದೆ. ಏಕೆಂದರೆ, ಜೈಮಿನೀಯ ಆಶ್ವಮೇಧಪರ್ವದ ಆರಂಭದಲ್ಲಿ 'ನಾರಾಯಣಂ ನಮಸ್ಕೃತ್ಯ....' ಎಂಬ ಶ್ಲೋಕವಾದೊಡನೆ,

ಜನಮೇಜಯ ಉವಾಚ:-

**ಕಥಂ ಯುಧಿಷ್ಠಿರಃ ಪ್ರೀತೋ ಮಮ ಪೂರ್ವಪಿತಾಮಹಃ**
**ಹಯಮೇಧಂ ಕ್ರತುವರಂ ಚಕ್ರೇ ಬಂಧುಭಿರನ್ವಿತಃ ॥**

ಎಂಬ ಪ್ರಶ್ನೆ ಇದೆ. ಹೀಗೆ ಪೂರ್ವಸಂದರ್ಭವಿಲ್ಲದೆ ಗ್ರಂಥಾರಂಭವಾಗುವುದು ಸಾಂಪ್ರದಾಯಿಕವಲ್ಲ. ಆದ್ದರಿಂದ ಈ ಪರ್ವದ ಹಿಂದಿನ ಭಾಗವು ಇದ್ದಿತೆಂದು ಊಹಿಸಬಹುದು. ಅಲ್ಲದೆ ಗ್ರಂಥಸಮಾಪ್ತಿಯಲ್ಲಿ-

**ಚತುರ್ದಶ ಪರ್ವಾಣಿ ಕಥಿತಾನಿ ವಿಶಾಂಪತೇ ।**
**ಅತಶ್ಚಾಶ್ರಮವಾಸಾಖ್ಯಂ ಪರ್ವ ರಾಜನ್ ಶೃಣುಷ್ವತತ್ ॥**

"ಜನಮೇಜಯರಾಜ, ಹದಿನಾಲ್ಕು ಪರ್ವಗಳನ್ನು ಹೇಳಿದ್ದಾಯಿತು. ಇನ್ನು ಮುಂದೆ ಆಶ್ರಮವಾಸವೆಂಬ ಪರ್ವವಿದೆ. ಅದನ್ನು ಕೇಳು" ಎಂದು ಸ್ಪಷ್ಟವಾಗಿ ಹೇಳಿದೆ. ಆದ್ದರಿಂದ ಸಮಗ್ರ ಭಾರತ ಒಂದನ್ನು ಜೈಮಿನಿಗಳು ರಚಿಸಿದ್ದರೆಂದು ಊಹಿಸುವುದಕ್ಕೆ ಆಧಾರ ಉಂಟು. ಬರೋಡಾ ಓರಿಯಂಟಲ್ ಇನ್ಸ್ಟಿಟ್ಯೂಟಿನ ಗ್ರಂಥಾಲಯದಲ್ಲಿ 'ಅಭಿಮನ್ಯು ಉಪಾಖ್ಯಾನ' ಎಂಬ ಒಂದು ಹಸ್ತಲಿಖಿತ ಪ್ರತಿ ದೊರಕಿದೆಯಂತೆ. ಅದರಲ್ಲಿ ದ್ರೋಣಪರ್ವದ ಉಪಾಖ್ಯಾನ ಉಂಟು. ವ್ಯಾಸರ ಮಹಾಭಾರತದಲ್ಲಿ ಈ ಅನುಪೂರ್ವಿಯು ದೊರೆಯುವುದಿಲ್ಲ. ಅದು ಜೈಮಿನೀಯ ಭಾರತದ ಅಂಶವಾಗಿರಬಹುದೆಂದು ವಿಮರ್ಶಕರ ಅಭಿಪ್ರಾಯವಿದೆ.*

---

* ಗೀತಾಪ್ರೆಸ್, ಗೋರಖ್‌ಪುರದವರು ಹಿಂದೀ ವ್ಯಾಖ್ಯಾನಸಹಿತ ಪ್ರಕಟಿಸಿರುವ ಜೈಮಿನೀಯ ಅಶ್ವಮೇಧಪರ್ವದ ಭೂಮಿಕೆಯ ಅಡಿಟಿಪ್ಪಣಿಯನ್ನು ನೋಡಿ.

## ಜೈಮಿನೀಯ ಅಶ್ವಮೇಧಪರ್ವದ ಸ್ಥೂಲ ಪರಿಚಯ

ಇದರಲ್ಲಿ ೬೮ ಅಧ್ಯಾಯಗಳೂ ೫೦೦೦ಕ್ಕಿಂತ ಅಧಿಕ ಶ್ಲೋಕಗಳೂ ಇವೆ. ಅನುಷ್ಟುಪ್ ವೃತ್ತಗಳೇ ಅಧಿಕ. ಅಲ್ಲಲ್ಲಿ ಉಪಜಾತೀಯ ವೃತ್ತಗಳೂ ಇವೆ. ಭಾಷಾಶೈಲಿ ಅತಿಪ್ರಾಚೀನವೇನಲ್ಲ. ಸಾಮಾನ್ಯವಾಗಿ ಭಾಷೆಯು ಸುಗಮವಾಗಿದೆ. ಒಂದೊಂದು ಕಡೆ ಅನನ್ವಿತ ವಾಕ್ಯಗಳುಂಟು. ಪರಿಷ್ಕೃತಪಾಠವಿಲ್ಲದ್ದರಿಂದಲೂ ಮುದ್ರಣ ದೋಷಾದಿಗಳಿಂದಲೂ ಅನನ್ವಿತವಾಗಿರುವುದೂ ಸಾಧ್ಯ. ಪ್ರಾಚೀನರಾದ ಜೈಮಿನಿಮುನಿಗಳೇ ಈ ಗ್ರಂಥದ ಕರ್ತೃಗಳೆಂದು ಹೇಳುವುದು ಕಠಿಣ. ಏಕಾದಶಿ ಮಹಿಮೆ, ಅಲ್ಲಲ್ಲಿ ವಾರಗಳ ಉಲ್ಲೇಖ ಇವೂ ಸಹ ಗ್ರಂಥವು ಅತಿ ಪ್ರಾಚೀನವಲ್ಲವೆಂಬುವುದಕ್ಕೆ ಸಾಕ್ಷಿಯಾಗಬಹುದು. ಕವಿ ಯಾರಾದರೂ ಆಗಿರಲಿ ಆತನು ಒಳ್ಳೆಯ ರಸಿಕ, ಹಾಸ್ಯಪ್ರಿಯ. ಶ್ರೀಕೃಷ್ಣ ಭೀಮಸೇನರ ಸಂಭಾಷಣೆ, ಶ್ರೀಕೃಷ್ಣ ಸತ್ಯಭಾಮೆಯರ ಸಂವಾದ, ಚಂಡಿಯ ಕಥೆ, ಮಯೂರಧ್ವಜನ ಯಜ್ಞಮಂಟಪದಲ್ಲಿ ದ್ವಿಜವೇಷದಿಂದ ಬಂದ ಶ್ರೀಕೃಷ್ಣನ ನುಡಿ, ಬಕದಾಲ್ಭ್ಯವೃತಾಂತ, ಅಶ್ವಮೇಧಯಾಗಾರಂಭದಲ್ಲಿ ನಾರದರ ವ್ಯವಹಾರ – ಮುಂತಾದ ಸ್ಥಳಗಳು ಹಾಸ್ಯದ ನಿದರ್ಶನಗಳು.

ಶೃಂಗಾರವೀರ ಕರುಣಾದಿಗಳಿಗೂ ಅಲ್ಲಲ್ಲಿ ಅಭಿವ್ಯಕ್ತಿ ಇದೆ. ಈ ಗ್ರಂಥವು ಪುರಾಣಶೈಲಿಯಲ್ಲಿದ್ದರೂ ಮನೋಹರವಾದ ಕಾವ್ಯಸಾಮಗ್ರಿಗಳೂ ವಿಪುಲವಾಗಿವೆ. ಆದ್ದರಿಂದಲೇ ಕನ್ನಡದ ಮಹಾಕವಿ ಲಕ್ಷ್ಮೀಶನು ಇದನ್ನು ಆಧಾರವಾಗಿಟ್ಟುಕೊಂಡು ಉತ್ತಮಕಾವ್ಯವೆಂದು ವಿಖ್ಯಾತವಾದ 'ಜೈಮಿನಿ ಭಾರತ'ವನ್ನು, ವಾರ್ಧಕಷಟ್ಪದಿಯಲ್ಲಿ ವಿರಚಿಸಿದ್ದಾನೆ.

ಲಕ್ಷ್ಮೀಶನು ತನ್ನ ಜೈಮಿನಿಭಾರತವನ್ನು ಸಂಸ್ಕೃತದ ಜೈಮಿನೀಯ ಅಶ್ವಮೇಧಿಕ ಪರ್ವದ ಆಧಾರದ ಮೇಲೆ ರಚಿಸಿದ್ದೇನೆಂದು ತನ್ನ ಕಾವ್ಯದ ಸಮಾಪ್ತಿಯಲ್ಲಿ ಸ್ಪಷ್ಟವಾಗಿ ಹೇಳಿದ್ದಾನೆ:

> **ಧರಣಿಯೊಳ್ ಜೈಮಿನಿಮುನೀಂದ್ರನತಿಪೆರ್ಮೆಯೊಳ್**
> **ವರಮಹಾಭಾರತ ಕಥಾಮೃತಾಬ್ಧಿಯೊಳೊಪ್ಪಿ**
> **ಒರೆದಾಶ್ವಮೇಧಿಕದ ಪರ್ವಮಂ ಸುರುಪುರದ ಲಕ್ಷ್ಮೀಶ ಕನ್ನಡದೊಳು ।**
> **ವಿರಚಿಸಿದ.......... ॥**

ಲಕ್ಷ್ಮೀಶನು ತನ್ನ ಕಾವ್ಯವನ್ನು ರಚಿಸುವಾಗ ಸಂಸ್ಕೃತದ ಮೂಲಕ್ಕೆ ಎಷ್ಟರಮಟ್ಟಿಗೆ ಋಣಿಯಾಗಿದ್ದಾನೆಂಬುದನ್ನು ಸ್ವಲ್ಪ ವಿವೇಚಿಸಬಹುದು. ಎರಡು ಗ್ರಂಥಗಳನ್ನೂ ಜೊತೆಗಿಟ್ಟು ವಿಮರ್ಶಿಸಿದಾಗ ಸಾಮ್ಯವೇ ಅಧಿಕವಾಗಿ ಕಂಡುಬರುತ್ತದೆ. ಮೂಲದ ಕಥಾಭಾಗವನ್ನು ಲಕ್ಷ್ಮೀಶನು ಕ್ರಮವಾಗಿ ಅನುಸರಿಸಿದ್ದಾನೆ. ವಿವಿಧ ಪಾತ್ರಗಳ ಮತ್ತು ನಗರಗಳ ಹೆಸರು ಮೂಲದಲ್ಲಿರುವಂತೆಯೇ ಇದೆ. ಆದರೆ ಚಂದ್ರಹಾಸನ ಕಥೆಯಲ್ಲಿ ಬರುವ ಧೃಷ್ಟಬುದ್ಧಿ ಕನ್ನಡದಲ್ಲಿ ದುಷ್ಟಬುದ್ಧಿಯಾಗಿದ್ದಾನೆ. ಜ್ವಾಲೆಯ ಸೋದರ ಸಂಸ್ಕೃತದಲ್ಲಿ ಉಲ್ಮುಕ. ಕನ್ನಡದಲ್ಲಿ ಉನ್ಮುಕ. ಇವೆರಡು ಬದಲಾವಣೆಗಳು ಲಿಪಿಕಾರರ ಕೈವಾಡದಿಂದ ಆಗಿರಬಹುದು. ವೃಷಕೇತುವಿನ ಪತ್ನಿಯ ಹೆಸರು ಭದ್ರಾವತಿ ಎಂದು ಮೂಲದಲ್ಲಿದೆ.

ಲಕ್ಷ್ಮೀಶನು ಅವಳ ಹೆಸರನ್ನು ತಿಳಿಸಿಲ್ಲ. ಹಂಸಧ್ವಜನ ಪುರೋಹಿತನಾದ ಶಂಖನ ಕೈಯನ್ನು ರಾಜನು ಕತ್ತರಿಸಿದ್ದನೆಂದೂ ಲಿಖಿತನ ತಪೋಬಲದಿಂದ ಶಂಖನು ಅದನ್ನು ಮರಳಿ ಪಡೆದನೆಂದೂ ಕನ್ನಡದಲ್ಲಿ ಪೂರ್ವಕಥೆಯಿದೆ. ಸಂಸ್ಕೃತದಲ್ಲಿ ಇಲ್ಲ. ಧರ್ಮರಾಜನ ಅಶ್ವಮೇಧಯಾಗದ ಕಡೆಯಲ್ಲಿ ಮುಂಗುಸಿಯ ಕಥೆ ಮೂಲದಲ್ಲಿದೆ. ಲಕ್ಷ್ಮೀಶನು ಅದನ್ನು ಬಿಟ್ಟಿದ್ದಾನೆ. ಹೀಗೆ ಅಲ್ಲಲ್ಲಿ ಕೊಂಚ ವ್ಯತ್ಯಾಸವಿದ್ದರೂ ಗಮನಾರ್ಹವಾದ ಬದಲಾವಣೆಯನ್ನೇನೂ ಲಕ್ಷ್ಮೀಶನು ಮಾಡಿಲ್ಲ. ವಿವಿಧ ಸನ್ನಿವೇಶಗಳು, ಸಂಭಾಷಣ ಪ್ರಕಾರಗಳು, ಹೋಲಿಕೆಗಳು – ಇತ್ಯಾದಿ ಅಂಶಗಳು ಸಹ ಮೂಲದಲ್ಲಿರುವಂತೆ ಕನ್ನಡ ಜೈಮಿನಿ ಭಾರತದಲ್ಲಿ ಬಂದಿವೆ. ಕಥಾಶರೀರಕ್ಕೆ ಪೋಷಕವಲ್ಲದ ಅಪ್ರಧಾನ ವಿಷಯವನ್ನು ಸಹ ಲಕ್ಷ್ಮೀಶನು ಅನುಕರಿಸಿದ್ದಾನೆ. ಮೇಘವರ್ಣನು ಯವ್ವನಾಶ್ವನ ಅಶ್ವವನ್ನು ಅಪಹರಿಸಿದಾಗ ಭೀತರಾದ ದೇವದೂತರು ಆ ವೃತ್ತಾಂತವನ್ನು ಇಂದ್ರನಿಗೆ ತಿಳಿಸಿದರೆಂದು ಮೂಲದಲ್ಲಿದೆ. ಕಥೆಯಲ್ಲಿ ಇದು ಮುಖ್ಯವೇನಲ್ಲ. ಉಪೇಕ್ಷಿಸಬಹುದಾದದ್ದು. ಆದರೆ ಲಕ್ಷ್ಮೀಶನು "ಗಗನದೊಳ್ ಸುಳಿವುತ ನಿಮಿಷನೊರ್ವನಿವನ ಮಾಯೆಗೆ ಭಯಂಗೊಂಡು ಕಡುವೇಗದಿಂ ಪೋಗಿ ವಜ್ರಿಗೆ ಪೇಳಲ್....." (೪ನೆಯ ಸಂಧಿ, ೧೧ನೆಯ ಪದ್ಯ) ಎಂದು ಅನುವಾದಿಸಿದ್ದಾರೆ. ಉಭಯಗ್ರಂಥಗಳಿಗೂ ಇರುವ ಸಾಮ್ಯವನ್ನು ನಿದರ್ಶನಗಳಿಂದ ಸ್ಪಷ್ಟಗೊಳಿಸಬಹುದು. ಕಥಾಶರೀರದಲ್ಲಿರುವ ಈ ಸನ್ನಿವೇಶಗಳು ಮೂಲದಲ್ಲಿರುವಂತೆ ಕನ್ನಡ ಜೈಮಿನಿಭಾರತದಲ್ಲಿ ಬಂದಿವೆ :

೧. ಭೀಮಸೇನನು ದ್ವಾರಕೆಗೆ ಹೋದಾಗ ಶ್ರೀಕೃಷ್ಣನು ಭೋಜನ ಮಾಡುತ್ತಿರುವುದು. ಭೀಮನಿಗೂ ಶ್ರೀಕೃಷ್ಣನಿಗೂ ವಿನೋದಪೂರ್ಣವಾದ ಸಂವಾದ.

೨. ಹಸ್ತಿನಾವತಿಗೆ ಬರುವಾಗ ಶ್ರೀಕೃಷ್ಣರುಕ್ಮಿಣಿಯರ ಸಂವಾದ.

೩. ದಿಗ್ವಿಜಯಾನಂತರದಲ್ಲಿ ಹಿಂದಿರುಗಿದ ಶ್ರೀಕೃಷ್ಣನನ್ನು ನೋಡಿ ಸತ್ಯಭಾಮೆಯ ವಕ್ರೋಕ್ತಿ.

೪. ಕಳಶಗಳಲ್ಲಿ ಗಂಗಾಜಲವನ್ನು ತುಂಬಿ ತರುವಾಗ ರುಕ್ಮಿಣೀ ಸುಭದ್ರೆ ಮುಂತಾದ ಸ್ತ್ರೀಯರ ಸರಸಸಂಭಾಷಣೆ.

೫. ಶ್ರೀಕೃಷ್ಣನ ಪತ್ನಿಯ ಬಳಿಯಲ್ಲಿ ನಾರದರು ಚಾಡಿಹೇಳುವುದು ಇತ್ಯಾದಿ. ವರ್ಣನೆಯ ಸಾಮ್ಯಗಳಿಗೆ ಇನ್ನು ಕೆಲವು ನಿದರ್ಶನಗಳನ್ನು ಕೊಡಬಹುದು.

೧. ಪ್ರದ್ಯುಮ್ನನು ಅನುಸಾಲ್ವನೊಡನೆ ಯುದ್ಧಮಾಡಿ ಸೋತು ಬಂದಾಗ ಶ್ರೀಕೃಷ್ಣನು ಅವನನ್ನು ಹಂಗಿಸುವ ಸಂದರ್ಭ –

ಸಂಸ್ಕೃತ ಮೂಲ : –

**ತಾಡಯಿತ್ವಾ ಪದಾ ಪುತ್ರಮಿದಂ ವಚನಮಬ್ರವೀತ್ ।**
**ಕ್ರೋಧೇನ ಮಹತಾ ಯುಕ್ತೋ ಭರ್ತ್ಸಯಾಮಾಸ ಭಾರತ ॥**
**ವನಂ ಯಾಹಿ ಪುರೀಂ ತ್ಯಕ್ತ್ವಾ ಮುನಿರ್ಭೂತ್ವಾ ಫಲಾನ್ನದ ।**
**ಜನಮಧ್ಯೇ ನವೈ ವಾಸಸ್ತವ ಯೋಗ್ಯೋ ಭವಿಷ್ಯತಿ ॥**
**ನಿಜಂ ಶತ್ರುಂ ಹಿ ಮುನತಸ್ತ್ವಾಂ ನಿರೀಕ್ಷ್ಯ ಸಮಾಗತಂ ।**

ಕುಶಾಗ್ರಬುದ್ಧಯಃ ಸರ್ವೇ ಕರಿಷ್ಯಂತಿ ಚ ಭಸ್ಮಸಾತ್ ॥
ಭವಾನ್ ಬಾಣಪುರೇ ಯಾತು ತತ್ರತ್ಯಾ ಯೇ ಮಹಾಜನಾಃ ।
ಭಗ್ನಂ ಸಂಬಂಧಿನಂ ಮತ್ವಾ ಪಾಲಯಿಷ್ಯಂತಿ ನಾಪರೇ ॥
ಶಿವಪೂಜಾಪರಾ ಲೋಕಾಸ್ತ್ವಾಂ ಶತ್ರುಂ ಶಂಕರಸ್ಯ ಹಿ ।
ಜ್ಞಾತ್ವಾತೇ ಸ್ವಾಮಿನೋ ವೈರಂ ಘಾತಯಿಷ್ಯಂತಿ ಮೇ ಮತಿಃ ॥

-ಅಧ್ಯಾಯ ೧೭-೩೫ ರಿಂದ

ಕನ್ನಡ ಜೈಮಿನಿ ಭಾರತ-

ಪೃಥುಲಪೌರುಷದಿಂದ ನಮ್ಮ ಸುತನಿಂದು ರಿಪು
ಮಥನಮಂ ಮಾಡಿ ಬಳಲಿದನೆನುತ ಬಂದೆಲವೊ
ಶಿಥಿಲಪೌರುಷ ನಿನ್ನನೇಗೈಯಲೆಂದು ಹರಿಯೊದೊದೆದನೆಡಗಾಲ್ಗುದಿಯೊಳು ॥

ದ್ವಾರಕೆಯನೆಂತಬಲೆಯರ ಮುಂದೆ ಪೊಗುವೆ ಪೋ
ಗಾರಣ್ಯಕೆನಲಲ್ಲಿ ಮುನಿಗಳ್ಗೆ ಸೇರೆ ಕೆ ।
ಟ್ಟಾರೂರ ಸಾರ್ದೊಡಂ ನೀಂ ವಿರಹಿತನು ವಿಷಮನೆಂದೋರ್ವರುಂ ಕೂಡರು ।
ಆರಿನ್ನು ಗತಿ ನಿನಗೆ ಸಂಬಂಧಿ ಬಾಣನಂ
ಹಾರೈಸುವಡೆ ನಿನ್ನ ಬೇರ್ಗೊಲೆಗೆ ಶಿವನಿಪ್ಪ
ಕಾರಣಮನಂಗತ್ವಮೇ ಪ್ರಾಪ್ತಮೆಂದು ಹರಿ ತನ್ನ ಸುತನಂ ಜರೆದನು ॥

ಸಂಧಿ ೭-ಪದ್ಯ ೩೯, ೪೦

೨. ಲವಕುಶರೊಡನೆ ಯುದ್ಧಮಾಡಿ ಮೂರ್ಛಿತರಾಗಿ ನೆಲದ ಮೇಲೆ ಮಲಗಿದ್ದ ಲಕ್ಷ್ಮಣಶತ್ರುಘ್ನರನ್ನು ಹನುಮಂತನು ಕಂಡ ಸಂದರ್ಭ-

ಸಂಸ್ಕೃತ ಮೂಲ-

ಶರನಿರ್ಭಿನ್ನಸರ್ವಾಂಗೌ ರಣೇ ಶತ್ರುಘ್ನಲಕ್ಷ್ಮಣೌ ।
ಪ್ರಾರ್ಥಯಂತಾವಿವ ಧರಾಂ ಸೀತಾತ್ಯಾಗೇನ ದುಃಖಿತಾಂ ॥
ಮಾ ಕೋಪಂ ವ್ರಜ ನೌ ಸ್ಥಾನಂ ದೇಹಿ ಸೀತಾದ್ರುಹೋರಿತಿ ।
ಹನೂಮಾಂಸ್ತೌ ಗೃಹೀತ್ವಾಥ ಬಾಹುಭ್ಯಾಂ ಪುನರಾಗತಃ ॥
ಭರತಸ್ಯ ಸಮೀಪಂ ಹಿ ಮೂರ್ಛಿತಾ ತರಸಾ ನೃಪ ॥

-ಅಧ್ಯಾಯ ೩೫-೭೩ ರಿಂದ

ಕ. ಜೈ. ಭಾ:-

ಧೀಂಕಿಟ್ಟನಲ್ಲಿಂದ ಕಲಿ ಹನುಮನಾ ರಣದೊ
ಳಂಕಿತದ ಕುಶನ ಬಾಣಂಗಳಿಂ ಮಡಿದ ಬಲ
ಸಂಕುಲವನಿಕ್ಷ್ವಾಕುನಂದನಂ ನಿನ್ನ ಸುತೆಯಂ ಬಿಟ್ಟನೆಂದು ।
ಕೊಂಕದಿರು ಸೈರಿಸುವುದೆಂದೈದೆ ಭೂದೇವಿ
ಯಂ ಕೋಪಮಂ ಮಾಣಿಸಲ್ ಬೇಡಿಕೊಂಬ ತೆರ
ದಿಂ ಕೆಡೆದು ಮೈಮರೆದು ಮಲಗಿದ್ದ ಸೌಮಿತ್ರಿಶತ್ರುಘ್ನರಂ ಕಂಡನು ॥
ಕಂಡು ಕಪಿವೀರನವರಿರ್ವರಂ ತೆಗೆದೆತ್ತಿ
ಕೊಂಡು ಭರತನ ಪೊರೆಗೆ ಬರಲ್..... ॥

-ಸಂಧಿ ೨೧-ಪದ್ಯ ೧೦, ೧೧.

೩. ಚಂದ್ರಹಾಸನ ವರ್ಣನೆ-

ಸಂ. ಮೂ:-

**ಅಮೀ ನೃಪತಯಸ್ತಸ್ಯ ಕಲಾಂ ನಾರ್ಹಂತಿ ಷೋಡಶೀಂ ॥**

**-ಅಧ್ಯಾಯ ೫೦-೧೩**

ಕ. ಜೈ. ಭಾ:-

**ಹಿಂದಣರಸುಗಳ ಬಲಮಿವನ ಹರಿನಾರರೊಳ**
**ಗೊಂದು ಕಳೆಯಿಲ್ಲ.... ॥**

**-ಸಂಧಿ ೨೮-ಪದ್ಯ ೧೨**

೪. ಬಾಲಕನಾದ ಚಂದ್ರಹಾಸನನ್ನು ಚಂಡಾಲರು ವನದಲ್ಲಿ ತ್ಯಜಿಸಿ ಹೋದಾಗ ಜಿಂಕೆಗಳ ಮರುಕ-

ಸಂಸ್ಕೃತ ಮೂಲ:-

**ತಾ ಹರಿಣ್ಯಃ ಸಮಾಗಮ್ಯ ಲಿಲಿಹುಶ್ಚರಣಂ ಶನೈಃ ।**
**ಅಸ್ಮತ್ಪತಿಃ ಸ್ವಭರ್ತಾರಂ ವಿಹಾಯ ವನಗಹ್ವರಂ ॥**
**ಪ್ರವಿಷ್ಟಃ ಕಾಮುಕೋಽಸ್ಮಾಕಂ ತಸ್ಮಾತ್ತೇನ ವಿವರ್ಜಿತಃ ।**
**ಮುಖರೂಪೇಣ ಚಂದ್ರೋಽಯಂ ಸ್ರವದಶ್ರುಲವಃ ಸ್ಫುಟಂ ॥**
**ವಾಹನೇನ ವಿನಾ ಸ್ವಾಮೀ ನಭಸಃ ಸ್ಖಲಿತೋ ಭುವಿ ।**
**ಪ್ರಸಾದಯಂತ್ಯ ಇವ ತಾ ಲಲಿಹುರ್ವಿಜನೇ ವನೇ ॥**

**-ಅಧ್ಯಾಯ ೫೧-೫ರಿಂದ**

ಕ. ಜೈ. ಭಾ.

**ನಿಲ್ಲದೆ ನರಳ್ವ ಪಸುಳೆಯ ನಿರ್ಮಲಾಸ್ಯಮಂ**
**ಫುಲ್ಲೆಗಳ್ ಕಂಡು ಕಾನನಕೆ ಕಾಮಿಸಿ ತಮ್ಮ**
**ನಲ್ಲನೈತರಲುಮ್ಮಳಿಸಿ ವಾಹನವರಸ ಬಂದ ಪೂರ್ಣೇಂದುವೆಂದು ।**
**ವಲ್ಲಭಸ್ವಾಮಿಯಂ ಬೇಡಿಕೊಳುತಿರ್ದವೆನೆ**
**ಮೆಲ್ಲಮೆಲ್ಲನೆ ಪೊರೆಗೆ ಪೊದ್ದಿ ಬಾಲಕನಂಘ್ರಿ**
**ಪಲ್ಲವದ ರುಧಿರಮಂ ಕುಡಿನಾಲಗೆಗಳಿಂದ ಸವಿದು ಲೇಪಂಗೈದವು ॥**

**-ಸಂಧಿ ೨೮-ಪದ್ಯ ೩೭**

ಇದೇ ರೀತಿಯಲ್ಲಿ ಹಲವಾರು ನಿದರ್ಶನಗಳನ್ನು ಕೊಡಬಹುದು. ಆದರೆ ಲಕ್ಷ್ಮೀಶನು ಅನುವಾದಕನಾದ ಸಾಮಾನ್ಯ ಕವಿಯಲ್ಲ. ಪ್ರತಿಭಾಶಾಲಿಯಾದ ಮಹಾಕವಿಯೇ ಹೌದು. ಮೂಲದಲ್ಲಿರುವ ಸುಂದರಭಾವಗಳನ್ನು ಬಿಡಲಾರದೆ ತೆಗೆದುಕೊಂಡರೂ ಅವನ್ನು ನಯವಾಗಿ ಪೋಷಿಸಿದ್ದಾನೆ. ಸ್ವತಂತ್ರ ಕಲ್ಪನೆಗಳನ್ನು ಸೇರಿಸಿದ್ದಾನೆ. ಕೆಲವು ಸಂನಿವೇಶಗಳನ್ನು ಮಾರ್ಪಡಿಸಿದ್ದಾನೆ. ವನವರ್ಣನೆ, ಸರೋವರ್ಣನೆಗಳು ಲಕ್ಷ್ಮೀಶನ ಪ್ರತಿಭೆಯ ನಿದರ್ಶನಗಳು. ಶೃಂಗಾರವೀರಾದಿ ರಸಗಳನ್ನು ಮನೋಜ್ಞವಾಗಿ ಚಿತ್ರಿಸಿದ್ದಾನೆ.

ಮೂಲದಲ್ಲಿರುವ ಕೆಲವು ಪೆಡಸುಗಳನ್ನು ತ್ಯಜಿಸಿ ಕೆಲವನ್ನು ಸರಳಗೊಳಿಸಿದ್ದಾನೆ. ಲಕ್ಷ್ಮೀಶನ ವಾಗ್ವೈಖರಿ ಶಬ್ದಝುರಿಗಳು ಅನ್ಯಾದೃಶವಾದವು. ಅವನಿಗೆ ಮಹಾಕವಿಯ ಪಟ್ಟ ಸ್ಥಿರವಾದುದು.

ವ್ಯಾಸಮುನಿಗಳ ಅಶ್ವಮೇಧಪರ್ವಕ್ಕಿಂತ ಜೈಮಿನಿಗಳ ಗ್ರಂಥವು ಬಹ್ವಂಶಗಳಲ್ಲಿ ಭಿನ್ನವಾಗಿದೆ. ಯಜ್ಞದ ನಿಮಿತ್ತ, ಮರುತ್ತರಾಜನ ಯಜ್ಞದ ಆಖ್ಯಾನ, ಬಭ್ರುವಾಹನನ ಯುದ್ಧ, ಸಿಂಧುದೇಶದಲ್ಲಿ ದುಶ್ಯಲೆಯ ಸಂದರ್ಶನ, ಯಜ್ಞಾಂತದಲ್ಲಿ ನಕುಲೋಪಾಖ್ಯಾನ – ಇವಿಷ್ಟು ಉಭಯ ಗ್ರಂಥಗಳಲ್ಲಿಯೂ ಇವೆ. ಉಳಿದ ಕಥಾಭಾಗದಲ್ಲಿ ಗಮನೀಯವಾದ ಸಾಮ್ಯವೇನೂ ಇಲ್ಲ. ವ್ಯಾಸರು ವರ್ಣಿಸಿದ ಅಶ್ವಪಥವೇ ಬೇರೆ, ಜೈಮಿನಿಗಳ ಅಶ್ವಪಥವೇ ಬೇರೆ.* ಅಶ್ವವನ್ನು ಯೌವನಾಶ್ವನಿಂದ ಅಪಹರಿಸಿ ತಂದ ಕಥೆಯಾಗಲಿ ಅನುಸಾಲ್ವನು ಮತ್ತೆ ಅದನ್ನು ಅಪಹರಿಸಿದ ವೃತ್ತಾಂತವಾಗಲಿ ವ್ಯಾಸಭಾರತದಲ್ಲಿ ಇಲ್ಲ. ಮರುತ್ತರಾಜನ ಯಜ್ಞವೃತ್ತಾಂತವು ವ್ಯಾಸಭಾರತದಲ್ಲಿ ವಿಸ್ತೃತವಾಗಿದೆ. ಇಲ್ಲಿ ಅದು ಅತಿ ಸಂಕ್ಷಿಪ್ತವಾಗಿದೆ.

ಅಶ್ವವನ್ನು ಬಂಧಿಸಿದ ನೀಲಧ್ವಜ, ಹಂಸಧ್ವಜ, ಪ್ರಮೀಳೆ, ಬಭ್ರುವಾಹನ, ಮಯೂರಧ್ವಜ, ವೀರವರ್ಮರ ಕಥೆ ರೋಚಕವಾಗಿದೆ. ವಿಷಾದಾಂತವಾದ ಸುಧನ್ವವೃತ್ತಾಂತವು ರಸಮಯವಾದ ಪ್ರಕರಣ, ಚಂದ್ರಹಾಸ ಕಥೆ ಅತ್ಯಂತ ಮಧುರವಾಗಿದೆ. ಈ ನೂತನ ಪ್ರಸಂಗಗಳು ಪುರಾಣಾಂತರಗಳಲ್ಲಿ ಪ್ರಾಯಶಃ ದೊರೆಯುವುದಿಲ್ಲ. ಆನುಷಂಗಿಕವಾಗಿ ಬಂದಿರುವ ರಮ್ಯವಾದ ಲವಕುಶರ ಕಾಳಗವು ಪದ್ಮಪುರಾಣದ ಪಾತಾಳಖಂಡದಲ್ಲಿ ಉಪಲಬ್ಧವಾಗುತ್ತದೆ. ಸ್ವಾಹಾ, ಮಾಲಿನಿ, ಚಂಡಿ– ಇವರ ವೃತ್ತಾಂತಗಳೂ ಪ್ರಾಸಂಗಿಕ.

ಕವಿಯು ವಿನೋದಪ್ರಿಯನಾದ್ದರಿಂದ ಹಾಸ್ಯ ಸನ್ನಿವೇಶಗಳನ್ನು ಅಲ್ಲಲ್ಲಿ ತಂದು ಗ್ರಂಥಕ್ಕೆ ಕಳೆಯೇರಿಸಿದ್ದಾನೆ. ಶ್ರೀಕೃಷ್ಣನ ಮಹಿಮೆಯನ್ನು ಕೊಂಡಾಡುವುದು. ಕವಿಯ ಉದ್ದೇಶ. ಇದನ್ನು ಪುರಾಣಶೈಲಿಯಲ್ಲಿರುವ ಒಂದು ಸುಂದರವಾದ ಕಾವ್ಯವೆನ್ನಬಹುದು.

ಇನ್ನು ಈ ಅನುವಾದದ ವಿಷಯದಲ್ಲಿ ಒಂದು ಮಾತು. ಈ ಪುಸ್ತಕದ ಮೊದಲಿನಿಂದ ೨೭೮ ಪುಟಗಳವರೆಗೆ ಕನ್ನಡಕ್ಕೆ ಅನುವಾದಿಸಿದವರು ದಿ|| ಬ್ರಶ್ರೀ ಕಡಬದ ನಂಜುಂಡಶಾಸ್ತ್ರಿಗಳು ಅವರು ವಿಖ್ಯಾತರಾದ ವಿದ್ವಾಂಸರು. ಯಾವ ಕಾರಣದಿಂದಲೋ ಅನುವಾದ ಕಾರ್ಯವು ಅಪೂರ್ಣವಾಗಿತ್ತು. ಅವರು ಅನುವಾದಿಸಿದ್ದ ಭಾಗವು ಮುದ್ರಿತವಾದ ಮೇಲೆ ಉಳಿದ ಭಾಗವನ್ನು ಅನುವಾದಿಸುವ ಭಾರ ನನ್ನ ಮೇಲೆ ಬಿದ್ದಿತು. ೨೭೯ನೆಯ ಪುಟದಲ್ಲಿರುವ 'ಶ್ರೀಕೃಷ್ಣಾಗಮನ' ದಿಂದ ಮುಂದಿನ ಭಾಗವನ್ನು ನಾನು ಕನ್ನಡಿಸಿದ್ದೇನೆ.

* ಹೆಚ್ಚಿನ ವಿವರಗಳನ್ನು ಶ್ರೀ ರಾ.ನ. ಮಳಗಿಯವರ "ಅಶ್ವಪಥ" ಎಂಬ ಪುಸ್ತಿಕೆಯಲ್ಲಿ ನೋಡಬಹುದು.

ನನಗೆ ದೊರಕಿದ ಸಂಸ್ಕೃತ ಮೂಲವು ಪರಿಷ್ಕೃತವಾದದ್ದಲ್ಲ. ಮುದ್ರಣ ದೋಷಗಳು ಅಧಿಕ. ಪದವಿಭಾಗವಿಲ್ಲದ ಅವಿರತವಾದ ವರ್ಣಪಂಕ್ತಿ. ಅದಕ್ಕಿದ್ದ ಹಿಂದೀ ವ್ಯಾಖ್ಯಾನವೂ ತೃಪ್ತಿಕರವಾಗಿರಲಿಲ್ಲ. ಆದ್ದರಿಂದ ಕೆಲವು ಕಡೆ ಮೂಲದ ಅರ್ಥವನ್ನು ಕಂಡುಹಿಡಿಯುವುದು ಕಠಿಣವೇ ಅಯಿತು. ಯಥಾಮತಿಯಾಗಿ ಶ್ರಮಿಸಿದ್ದೇನೆ. ಅಶ್ವಮೇಧಯಾಗದಲ್ಲಿ ಗರುಡಚಿತಿಯ ನಿರ್ಮಾಣವನ್ನು ವರ್ಣಿಸಿದೆ. ಅದರ ಕನ್ನಡ ಅನುವಾದವು ಸರಿಯಾಗಿದೆಯೆಂದು ನಾನು ಹೇಳಿಕೊಳ್ಳಲಾರೆ. ನಿಜವಾದ ಅಭಿಪ್ರಾಯವನ್ನು ತಿಳಿಯುವುದಕ್ಕಾಗಿ ಕೆಲವು ಮಂದಿ ವೈದಿಕರನ್ನು ವಿಚಾರಿಸಿದೆ. ನನಗೆ ಬೇಕಾಗಿದ್ದ ಅಂಶ ತಿಳಿಯಲಿಲ್ಲ. ಅದಕ್ಕೆ ಸಂಬಂಧಿಸಿದ ಶ್ರೌತಸೂತ್ರಗಳೂ ನನಗೆ ಸಿಗಲಿಲ್ಲ. ಶ್ರೀನಂಜುಂಡಶಾಸ್ತ್ರಿಗಳಿಗೆ ದೊರಕಿದ ಪ್ರತಿಯೂ ಬಹಳ ಅಶುದ್ಧವಾಗಿದ್ದಿರಬೇಕೆಂದು ಊಹಿಸುತ್ತೇನೆ. ಈಚೆಗೆ ಗೋರಖ್‌ಪುರದ ಗೀತಾ ಪ್ರೆಸ್ಸಿನವರು ಜೈಮಿನೀಯ ಅಶ್ವಮೇಧಪರ್ವದ ಪರಿಷ್ಕೃತ ಮುದ್ರಣವನ್ನು ಪ್ರಕಟಿಸಿದ್ದಾರೆ. ನನ್ನ ಅನುವಾದವು ಮುದ್ರಿತವಾದ ಮೇಲೆ ಅದು ನನಗೆ ಸಿಕ್ಕಿತು. ಈ ಗ್ರಂಥಭಾಗವನ್ನು ಕನ್ನಡಿಸಲು ನನಗೆ ಪ್ರೋತ್ಸಾಹವನ್ನಿತ್ತ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ ಶ್ರೀ ಜಿ. ನಾರಾಯಣ ಅವರಿಗೂ ಗ್ರಂಥ ಪ್ರಕಟನಾ ಸಮಿತಿಯ ಪ್ರಧಾನ ಸಂಪಾದಕರಾದ ಶ್ರೀ ರಂ.ಶ್ರೀ ಮುಗಳಿಯವರಿಗೂ ನಾನು ಕೃತಜ್ಞನಾಗಿದ್ದೇನೆ.

**ಬೆಂಗಳೂರು** **ಎನ್. ರಂಗನಾಥಶರ್ಮಾ**

**ತಾ. ೨೫-೩-೭೩**

## ಪರಿವಿಡಿ

# ಯಜ್ಞ ಪ್ರಾರಂಭ

ಶ್ರೀಕೃಷ್ಣನಿಗೂ ಅರ್ಜುನನಿಗೂ ಸರಸ್ವತಿಗೂ ವ್ಯಾಸಮುನಿಗೂ ನಮಸ್ಕಾರ ಮಾಡಿ ಬಳಿಕ ಭಾರತ ಕಥೆಯನ್ನು ಹೇಳಬೇಕು. ನಮ್ಮ ಅಜ್ಜನಾದ ಯುಧಿಷ್ಠಿರನು ಬಂಧುಗಳೊಡನೆ ಸೇರಿ ಪ್ರೀತಿಪೂರ್ವಕವಾಗಿ ಅಶ್ವಮೇಧವೆಂಬ ಶ್ರೇಷ್ಠವಾದ ಯಜ್ಞವನ್ನು ಮಾಡಿದ ಬಗೆ ಹೇಗೆ? ಎಂದು ಜನಮೇಜಯನು ಜೈಮಿನಿಮುನಿಯನ್ನು ಪ್ರಶ್ನೆಮಾಡಲು ಜೈಮಿನಿಯಿಂತೆಂದನು:- ಎಲೈ ಜನಮೇಜಯನೇ ಧರ್ಮರಾಜನು ಮಾಡಿದ ಕಾರ್ಯವನ್ನು ಹೇಳುವೆನು ಕೇಳು. ಭೀಷ್ಮನು ಸ್ವರ್ಗಸ್ಥನಾದ ಬಳಿಕ ಧರ್ಮರಾಜನು ದುಃಖಾಕ್ರಾಂತನಾಗಿರಲು ತಾನಾಗಿ ತನ್ನ ಬಳಿಗೆ ಬಂದ ವ್ಯಾಸಮುನಿಯನ್ನು ಕುರಿತು-ಎಲೈ ತಪೋಧನನಾದ ವ್ಯಾಸಮುನಿಯೇ, ನಾನು ಮಾಡಿದ ಜಾತಿವಧೆಯ ಪಾಪವು ಯಾವ ಉಪಾಯದಿಂದ ಪರಿಹಾರವಾಗುವುದೋ ತಿಳಿಸು. ನಮ್ಮ ಪೂರ್ವಿಕರು ಸಂಪಾದಿಸಿದ ಈ ರಾಜ್ಯವು ನನಗೆ ಕ್ರಮಪ್ರಾಪ್ತವಾಗಿ ಬಂದಿದ್ದರೂ ಭೀಷ್ಮ ದ್ರೋಣ ಕರ್ಣರಿಲ್ಲದುದರಿಂದ ನನಗೆ ಇಷ್ಟ ವಿಲ್ಲವಾಗಿದೆ. ವೇದಘೋಷದಿಂದ ರಮ್ಯವಾಗಿದ್ದ ಕರ್ಣನ ಮನೆಯು ಈಗ ನನ್ನಿಂದ ಹಾಳಾಗಿ ದಾನಶೂನ್ಯವಾಗಿದೆ. ಪ್ರತಿದಿನವೂ ಯಾಚಕರು ಗುಂಪಾಗಿ ಬಂದು ಎಲ್ಲಿ ಧನಮಾನಗಳನ್ನು ಪಡೆದು ತೃಪ್ತರಾಗಿ ತಮ್ಮ ಕಣ್ಣಿನಿಂದ ಆನಂದಬಾಷ್ಪಗಳನ್ನು ಸುರಿಸುತ್ತಿದ್ದರೋ ಆ ಕರ್ಣನ ಮನೆಯಲ್ಲಿ ಈಗ ಅವರು ದುಃಖಾಶ್ರುಗಳನ್ನು ಬಿಡುತ್ತಿರುವರು. ಕರ್ಣ ಭೀಷ್ಮರಿಲ್ಲದ ಈ ನನ್ನ ರಾಜ್ಯವೂ ಅವರಿಬ್ಬರಿಲ್ಲದಿರುವುಗರಿಂದ ಕಣ್ಣಿಲ್ಲದಂತಿರುವ ನನ್ನ ದೇಹವೂ ವ್ಯರ್ಥವು. ಮಹಾ ಬುದ್ಧಿಶಾಲಿಯಾದ ಭೀಷ್ಮನಿಂದ ಬಹುವಾಗಿ ನಾನು ಶಿಕ್ಷಿತನಾಗಿದ್ದೇನೆ. ಅಂತಹ ಭೀಷ್ಮಾದಿಗಳನ್ನು ಕೊಂದ ನನ್ನ ದುಃಖವು ಶಾಂತವಾಗದು. ಆದಕಾರಣ ನಾನು ರಾಜ್ಯವನ್ನು ಬಿಟ್ಟುಹೋಗುವೆನು. ಭೀಮನು ರಾಜ್ಯವಾಳಲಿ. ತೀರ್ಥಕ್ಷೇತ್ರಗಳ ಯಾತ್ರೆಯನ್ನೂ ಯಜ್ಞಾದಿ ಪುಣ್ಯಕರ್ಮಗಳನ್ನೂ ಮಾಡಿ ಶುದ್ಧನಾಗುವೆನು. ಹೀಗಿರುವುದು ನನಗೆ ಚೆನ್ನಾಗಿಲ್ಲ ಎಂದು ಹೇಳಿದನು.

ಆದಕ್ಕೆ ವ್ಯಾಸಮಹರ್ಷಿಯು, ಎಲೈ ರಾಜೇಂದ್ರನೇ ನೀನು ಹೆದರಬೇಡ. ಜ್ಞಾತಿ ವಧೆಯಿಂದುಂಟಾದ ಪಾಪವು ಪರಿಹಾರವಾಗಿ ನಿನಗೆ ಆ ದೋಷವು ಬಾರದಂತೆಯೂ ನೀನು ಶುದ್ಧನಾಗುವಂತೆಯೂ ಒಂದು ಉಪಾಯವನ್ನು ಮಾಡುವೆನು. ಇದಕ್ಕಾಗಿ ನೀನು ಶುದ್ಧನಾಗುವಂತೆಯೂ ಒಂದು ಉಪಾಯವನ್ನು ಮಾಡುವೆನು. ನೀನು ಹಾಗೆಯೇ ಅಶ್ವಮೇಧವನ್ನು ಮಾಡಿ ರಾಜ್ಯಭಾರ ಮಾಡು. ರಾಜಧರ್ಮದಿಂದಲೂ ಶ್ರೀಕೃಷ್ಣನ ಆಜ್ಞೆಯಿಂದಲೂ ಪ್ರಾಪ್ತವಾಗಿರುವ ರಾಜ್ಯವನ್ನು ಬಿಟ್ಟುಹೋಗಲು ಏಕೆ ಅಪೇಕ್ಷಿಸುತ್ತೀಯೆ? ನಿನ್ನ ಬಂಧುಗಳೆಲ್ಲರೂ ನಿನ್ನ ಅಧೀನರಾಗಿರುವರು. ನಿನ್ನ ದೇಹವು ದೃಢವಾಗಿರುವವರೆಗೂ ಶ್ರೇಯೋಭಿವೃದ್ಧಿ ಕಾರ್ಯವನ್ನು ಮಾಡಿ ಇಹಲೋಕದಲ್ಲಿ ನಿನ್ನ

ಕೀರ್ತಿಯು ನೆಲೆಗೊಳ್ಳುವಂತೆ ಮಾಡು. ರಾಜರು ಪುಣ್ಯಕಾರ್ಯಗಳನ್ನು ಮಾಡಿ ಸ್ವರ್ಗಲೋಕವನ್ನು ಪಡೆಯಲಿಲ್ಲವೇ! ಎಂದನು. ಮಹಾ ತೇಜಸ್ವಿಯಾದ ವ್ಯಾಸನು ಹೇಳಿದ ಆ ಮಾತನ್ನು ಕೇಳಿ ಧರ್ಮರಾಜನು ದೈನ್ಯವಚನದಿಂದ - ಎಲೈ ಬ್ರಹ್ಮರ್ಷಿಯೇ ನನ್ನಲ್ಲಿ ಧನವಿಲ್ಲ. ಹಣವಿಲ್ಲದೆ ಯಜ್ಞವು ನಡೆಯುವುದಿಲ್ಲ. ಇದಕ್ಕಾಗಿ ಪ್ರಜೆಗಳನ್ನು ಹಿಂಸಿಸಲಾರೆನು. ತಂದೆತಾಯಿಗಳಿಲ್ಲದ ದೊರೆಗಳನ್ನು ಕೊಲ್ಲಲು ನಾನು ಶಕ್ತನಲ್ಲ. ದುರ್ಯೋಧನನು ಹಣಕ್ಕಾಗಿ ರಾಜ್ಯವನ್ನು ಕ್ಷೀಣಗೊಳಿಸಿದನು. ಧನಾಕಾಂಕ್ಷೆಯಿಂದ ನಾನು ಹೇಗೆ ದೇಶ ಪೀಡೆಯನ್ನುಂಟುಮಾಡಲಿ. ಸ್ನೇಹಿತರೆಲ್ಲರೂ ಯುದ್ಧದಲ್ಲಿ ಸತ್ತು ಹೋದುದರಿಂದ ಇನ್ನು ನನಗೆ ಸಹಾಯಕರು ಯಾರೂ ಇಲ್ಲ. ಆದಕಾರಣ ರಾಜ್ಯವನ್ನು ಪರಿತ್ಯಜಿಸಿ ಹೋಗುವುದೇ ನನ್ನ ಅಭಿಮತವು. ಇನ್ನು ಇಲ್ಲಿ ಮಾಡಬೇಕಾದುದೇನು? ಹೇಳು, ಎಂದು ಕೇಳಿದನು. ಅದಕ್ಕೆ ವ್ಯಾಸಮುನಿಯು- ಎಲೈ ರಾಜಕುಮಾರನೇ! ಪೂರ್ವದಲ್ಲಿ ಮರುತ್ತ ರಾಜನು ಯಜ್ಞ ಮಾಡಿ ದಾನದಕ್ಷಿಣೆಗಳಿಂದ ಬ್ರಾಹ್ಮಣೋತ್ತಮರನ್ನು ಸಂತುಷ್ಟಿಗೊಳಿಸಿದ್ದಾನೆ. ಅವನು ಆಗ ತಮಗೆ ಕೊಟ್ಟ ದ್ರವ್ಯವನ್ನು ತೆಗೆದುಕೊಂಡು ಹೋಗಲು ಸಾಮರ್ಥ್ಯವಿಲ್ಲದೆ ನೆಲದ ಮೇಲೆ ರಾಶಿಯಾಗಿ ಸುರಿದುಹೋಗಿದ್ದಾರೆ. ಹಿಮಾಲಯಪರ್ವತದ ಬಳಿಯಲ್ಲಿ ಈ ಧನರಾಶಿಯು ಬಿದ್ದಿದೆ. ಉದಾರನಾದ ಮರುತ್ತರಾಜನು ಯಜ್ಞದಲ್ಲಿ ಬಹುಮುಖವಾಗಿ ಕೊಟ್ಟ ಧನವನ್ನು ತೆಗೆದುಕೊಂಡು ಹೋಗಲು ಬ್ರಾಹ್ಮಣರು ಅಸಮರ್ಥರಾದುದರಿಂದ ನೀನು ಆ ಧನವನ್ನು ತರಿಸು, ಎಂದನು. ಆಗ ಯುಧಿಷ್ಠಿರನು ಅಷ್ಟು ಧನವ್ಯಯ ಮಾಡಿ ಬ್ರಾಹ್ಮಣರನ್ನು ತೃಪ್ತಿಗೊಳಿಸುವಂತೆ ಯಜ್ಞ ಮಾಡಿದ ಆ ಮರುತ್ತರಾಜನೇ ಧನ್ಯನು. ಆ ಬ್ರಾಹ್ಮಣರು ಹೊರಲಾರದೆ ಬಿಟ್ಟುಹೋದ ಧನವನ್ನು ನಾನು ಹೇಗೆ ತರಲಿ. ಬ್ರಾಹ್ಮಣದ್ರವ್ಯವನ್ನು ಅಪಹರಿಸುವುದು ಬಹುದುಃಖಕರವಾದುದು. ನಾನು ಹಾಗೆ ಮಾಡಿದರೆ ರಾಜರಲ್ಲಿ ನನ್ನಂತಹ ನಿಂದಿತನು ಮತ್ತಾವನಿರುವನು. ಬ್ರಹ್ಮಸ್ವವನ್ನಪಹರಿಸು ವಷ್ಟು ಕ್ರೂರ ಬುದ್ಧಿಯು ಯಾವ ದೊರೆಗುಂಟಾಗುವುದೋ ಆ ದೊರೆಯು ಅದನ್ನು ಅಪಹರಿಸುವುದರಿಂದ ಭಾರವಾದ ಕಲ್ಲು ನೀರಿನಲ್ಲಿ ಮುಳುಗುವಂತೆ ಮುಳುಗಿ ಹೋಗುವನು. ಒಂದು ವೇಳೆ ಆ ಧನವನ್ನು ನಾನು ಅಪಹರಿಸಿ ಯಜ್ಞ ಮಾಡಿದರೆ ಬ್ರಾಹ್ಮಣರೆಲ್ಲರೂ ತಮ್ಮ ಧನವನ್ನೇ ತಮಗೆ ದಕ್ಷಿಣೆಯಾಗಿ ಕೊಟ್ಟನೆಂದು ನನ್ನನ್ನು ಅಪಹಾಸ್ಯ ಮಾಡುವರು. ಆದಕಾರಣ ಈ ಅಕೃತ್ಯವನ್ನು ಎಂದಿಗೂ ಮಾಡಲೊಲ್ಲೆನು. ಯುದ್ಧದಲ್ಲಿ ಕೌರವರನ್ನೂ ಗುರುಗಳನ್ನೂ ಮಿತ್ರಬಾಂಧವರನ್ನೂ ಕೊಂದುಹಾಕಿದುದ ರಿಂದುಂಟಾದ ನಾಚಿಕೆಯೊಂದನ್ನು ಪರಿಹರಿಸಿಕೊಳ್ಳುವುದಕ್ಕೂ ನಾನು ಸಮರ್ಥನಲ್ಲದೆ ಹೋಗಿರುವಾಗ ಬ್ರಹ್ಮಸ್ವಾಪಹಾರ ರೂಪವಾದ ಎರಡನೆಯ ನಾಚಿಕೆಯೊದಗುವುದಲ್ಲಾ! ಏನು ಮಾಡಲಿ ಎಂದನು.

ಅದನ್ನು ಕೇಳಿ ವ್ಯಾಸಮಹಾಮುನಿಯು ಅಯ್ಯಾ ಚೆನ್ನಾಗಿ ಹೇಳಿದೆ. ನೀನು ಧನ್ಯನು. ಬ್ರಾಹ್ಮಣದ್ರವ್ಯವನ್ನು ಕುರಿತು ನೀನು ಸಂದೇಹಪಡುವುದು ವ್ಯರ್ಥವು. ಆ

ಬ್ರಾಹ್ಮಣರು ಯಾವಾಗ ದ್ರವ್ಯವನ್ನು ಬಿಟ್ಟು ಬಿಟ್ಟರೋ ಆಗಲೇ ಅದಕ್ಕೆ ಅವರ ಸ್ವಾಮ್ಯತ್ವವು ಹೋಯಿತು. ಪೂರ್ವದಲ್ಲಿ ಪರಶುರಾಮನು ಮಹಾತ್ಮನಾದ ಕಶ್ಯಪನಿಗೆ ಭೂಮಂಡಲವನ್ನು ದಾನವಾಗಿ ಕೊಟ್ಟನು. ಪಾಪಭೀತರಾದ ರಾಜರು ಅದನ್ನು ಹೇಗೆ ಸ್ವೀಕರಿಸುತ್ತಿದ್ದಾರೆ? ದೈತ್ಯರು ಈ ಭೂಮಿಯನ್ನು ಜಯಿಸಿದರು. ದೈತ್ಯರನ್ನು ಜಯಿಸಿ ಕ್ಷತ್ರಿಯರು ಇದನ್ನು ವಶಪಡಿಸಿಕೊಂಡರು. ಇದರಿಂದ ಬ್ರಾಹ್ಮಣರ ಸ್ವಾಮ್ಯವು ಹೋಯಿತು. ಆದಕಾರಣ ಯಾವ ದೋಷವೂ ಇಲ್ಲ. ಯಾವಾಗ ಯಾವ ರಾಜನಿಗೆ ಭೂಮಿಯ ಆಧಿಪತ್ಯವು ಬಂದಿತೋ ಆಗ ಎಲ್ಲ ಧನವೂ ಆ ರಾಜನದಾಯಿತು. ಈ ವಿಷಯದಲ್ಲಿ ಸಂದೇಹವಿಲ್ಲ. ಆದಕಾರಣ ಎಲೈ ಪಾಂಡವನೇ ನೀನು ಆ ದ್ರವ್ಯದಿಂದ ಯಜ್ಞವನ್ನು ಮಾಡು ಎಂದು ಹೇಳಲು, ಅದನ್ನು ಕೇಳಿ ಧರ್ಮರಾಜನು ಯಜ್ಞಕ್ಕೆ ಬೇಕಾದ ಸಾಮಗ್ರಿಯನ್ನು ಕೇಳಿದನು. ಎಲೈ ಮುನಿಯೇ ಯಜ್ಞಕ್ಕೆ ಬ್ರಾಹ್ಮಣರೆಷ್ಟು ಮಂದಿ? ದಕ್ಷಿಣೆ ಎಷ್ಟು? ಎಂತಹ ಕುದುರೆ? ಇದನ್ನು ತಿಳಿಸು ಎಂದನು.

ವ್ಯಾಸಮುನಿಯು ಅಯ್ಯಾ, ಯಜ್ಞಾರಂಭಕ್ಕೆ ಸತ್ಕುಲಪ್ರಸೂತರಾಗಿಯೂ ವೇದಶಾಸ್ತ್ರಗಳನ್ನರಿತವರಾಗಿಯೂ ಜ್ಞಾನಿಗಳಾಗಿಯೂ ಇರುವ ಇಪ್ಪತ್ತು ಸಾವಿರ ಮಂದಿ ಬ್ರಾಹ್ಮಣರು ಬೇಕು. ಯಜ್ಞದಲ್ಲಿ ಒಬ್ಬೊಬ್ಬ ಬ್ರಾಹ್ಮಣನಿಗೆ ಒಂದು ಆನೆ ಒಂದು ಕುದುರೆ ಒಂದು ರಥ ಇವುಗಳಿಗೆ ತಕ್ಕ ದಕ್ಷಿಣೆ, ಒಂದು ಸಾವಿರ ಗೋವುಗಳು, ಒಂದು ಬಳ್ಳ (ಅಳತೆಯ ನಾಲ್ಕು ಸೇರು ರತ್ನಗಳು ಅದಕ್ಕೆ ತಕ್ಕ ದಕ್ಷಿಣೆ ಒಂದು ಭಾರದ ತೂಕ (೨೦ ತೊಲೆ) ಚಿನ್ನ ಇವನ್ನು ದಕ್ಷಿಣೆಯಾಗಿ ಕೊಡಬೇಕು. ಕುದುರೆಯನ್ನು ಬಿಟ್ಟ ದಿನವೇ ಯಜ್ಞ ಪ್ರಾರಂಭವು. ಯಜ್ಞಾಶ್ವವು ಹಸುವಿನ ಹಾಲು, ಕುಂದಪುಷ್ಪ, ಚಂದ್ರ, ಹಿಮ ಇವುಗಳಂತೆ ಬಿಳುಪಾಗಿಯೂ ಹಳದಿಯ ಬಣ್ಣದ ಬಾಲವೂ ಕಪ್ಪಾದ ಕಿವಿಯೂ ಉಳ್ಳದಾಗಿಯೂ ವೇಗಶಾಲಿಯಾಗಿಯೂ ಇರಬೇಕು. ಕಪ್ಪುಬಣ್ಣದ ಕುದುರೆಯಾದರೂ ಆಗಬಹುದು. ಇಂತಹ ಕುದುರೆಯನ್ನು ಚೈತ್ರ ಶುದ್ಧ ಪೌರ್ಣಮೀ ದಿನ ರಾತ್ರಿಯಲ್ಲಿ ಬಿಡಬೇಕು. ಒಂದು ವರ್ಷಕಾಲ ಆ ಕುದುರೆಯನ್ನು ರಕ್ಷಣೆ ಮಾಡಿಕೊಂಡಿರಬೇಕು. ಅದಕ್ಕಾಗಿ ಕುದುರೆಯ ಹಿಂದೆ ಕಾವಲಿಗಾಗಿ ಶೂರನಾದ ಮಗನನ್ನೋ ಮತ್ತೊಬ್ಬ ತನ್ನ ಬಂಧುವರ್ಗದವನನ್ನೋ ಬಲಿಷ್ಠರಾದ ಯೋಧರೊಡನೆ ಕಳುಹಿಸಬೇಕು. ಯಜ್ಞವನ್ನು ಮಾಡುವವನು ನಿಯಮದಿಂದ ಅಸಿಪತ್ರ ವ್ರತವನ್ನಾಚರಿಸಬೇಕು. ಇದಕ್ಕೆ ತಪ್ಪಕೂಡದು. ಯಜಮಾನನು ಒಂದು ವರ್ಷಕಾಲ ಸ್ತ್ರೀಸಂಭೋಗವನ್ನುಳಿದ ಎಲ್ಲ ವಿಷಯ ಸುಖಗಳನ್ನೂ ಅನುಭವಿಸಬೇಕು. ಪತ್ನಿಯೊಡನೆ ಏಕಶಯ್ಯೆಯಲ್ಲಿ ಮಲಗಬೇಕು. ಬಿಟ್ಟ ಕುದುರೆಯು ಹಿಂದಿರುಗಿ ಬರುವವರೆಗೂ ಪ್ರಯತ್ನಪೂರ್ವಕವಾಗಿ ಧೈರ್ಯದಿಂದಿರಬೇಕು. ಕುದುರೆಯು ಎಲ್ಲೆಲ್ಲಿ ಮೂತ್ರ ಪುರೀಷೋತ್ಸರ್ಗವನ್ನು ಮಾಡುವುದೋ ಆ ಪ್ರದೇಶಗಳಲ್ಲಿ ಸಹಸ್ರ ಗೋದಾನವನ್ನು ಮಾಡಿ ಬ್ರಾಹ್ಮಣರಿಂದ ಹವನವನ್ನು ಮಾಡಿಸಿ ದಕ್ಷಿಣೆಗಳಿಂದ ಅವರನ್ನು ಪೂಜಿಸಬೇಕು. ಒಂದು ಚಿನ್ನದ ಪಟ್ಟಿಯಲ್ಲಿ- ನಾನು ಈ ಕುದುರೆಯನ್ನು ಬಿಟ್ಟಿದ್ದೇನೆ. ಬಲಿಷ್ಠರಾದ ದೊರೆಗಳು

ಯಾರಾದರೂ ಇದನ್ನು ಹಿಡಿದು ಕಟ್ಟಬಹುದು. ಅಂತಹವರನ್ನು ನಾನು ಯುದ್ಧದಲ್ಲಿ ಗೆಲ್ಲುತ್ತೇನೆ. ಎಂದು, ವಿವರವಾಗಿ ಸೂಚಿಸಿ ತನ್ನ ಹೆಸರನ್ನೂ ಪರಾಕ್ರಮವನ್ನೂ ಬರೆದು ಹಣೆಗೆ ಆ ಪಟ್ಟಿಯನ್ನು ಕಟ್ಟಿಬಿಡಬೇಕು. ನೀನು ಅಸಿಪತ್ರ ವ್ರತ ವಿಧಾನದಿಂದ ಈ ರೀತಿಯಲ್ಲಿ ಮಾಡು. ಈ ಯಜ್ಞವು ಬಹು ಪುಣ್ಯಪ್ರದವಾದುದು. ಪೂರ್ವದಲ್ಲಿ ಇಂದ್ರನು ಹೀಗೆಯೇ ನೂರು ಅಶ್ವಮೇಧಗಳನ್ನು ಮಾಡಿದನು. ಅದರಿಂದ ಈಗ ಅವನು ದೇವೇಂದ್ರತ್ವವನ್ನು ಪಡೆದು ಸ್ವರ್ಗಲೋಕದಲ್ಲಿ ಸುಖದಿಂದಿರುವನು. ದೇವೇಂದ್ರನು ಅಶ್ವಮೇಧಗಳನ್ನು ಅಸಿಪತ್ರ ವ್ರತ ರಹಿತವಾಗಿ ಮಾಡಿದನು. ಯಾವನು ಈ ವ್ರತ ಸಹಿತವಾಗಿ ಈ ಮಹಾಯಜ್ಞವನ್ನು ಮಾಡುವನೋ ಅವನು ಭೂಮಂಡಲವನ್ನು ಪಾಪರಹಿತವನ್ನಾಗಿ ಮಾಡುವನು. ಲೋಕದಲ್ಲಿ ಭೀಷ್ಮನನ್ನುಳಿದು ಮನ್ಮಥನನ್ನು ಜಯಸಿದವನಾರು? ಆದಕಾರಣ ವ್ರತಯುಕ್ತವಾಗಿ ಈ ಯಜ್ಞವನ್ನು ಮಾಡುವುದಕ್ಕೆ ಹೆದರಿ ಯಾರೂ ಮಾಡರು. ಎಲೈ ರಾಜೇಂದ್ರನೇ ನಿನಗೆ ಮನ್ಮಥನನ್ನು ಗೆಲ್ಲುವ ಸಾಮರ್ಥ್ಯವಿದ್ದರೆ ಈ ಯಜ್ಞಕ್ಕೆ ಪ್ರಾರಂಭಿಸು, ಎಂದು ಹೇಳಿದನು.

ಧರ್ಮರಾಜನು ವ್ಯಾಸಮುನಿಯನ್ನು ಕುರಿತು-ಮುನಿವರ್ಯನೇ, ಈ ಅಶ್ವಮೇಧ ವಿಷಯವು ನನಗೆ ಬಹು ಕಷ್ಟತರವಾಗಿರುವುದು. ನನ್ನಲ್ಲಿ ಹಣವೂ ಇಲ್ಲ. ನನಗೆ ಸಹಾಯಕರು ಯಾರೂ ಇಲ್ಲ, ಭೀಮಾದಿಗಳನ್ನು ನಾನು ಯುದ್ಧದಲ್ಲಿ ಬಹಳ ಕಷ್ಟಪಡಿಸಿದ್ದೇನೆ. ಕರ್ಣನ ಮಗನಾದ ವೃಷಕೇತುವು ಬಲಿಷ್ಠನೂ ಧೀರನೂ ಆಗಿದ್ದರೂ ಹದಿನಾರು ವರ್ಷದವನಾದುದರಿಂದ ಅವನನ್ನು ಈ ಕಾರ್ಯದಲ್ಲಿ ನಿಯಮಿಸುವುದು ಧರ್ಮವಲ್ಲ. ಘಟೋತ್ಕಚನ ಮಗನಾದ ಮೇಘವರ್ಣನನ್ನೂ ನಿಯಮಿಸುವುದಿಲ್ಲ. ಕರ್ಣನು ಇವನ ತಂದೆಯನ್ನು ನನ್ನ ನಿಮಿತ್ತದಿಂದ ರಾತ್ರಿಯಲ್ಲಿ ಕೊಂದು ಹಾಕಿದನು. ಯಾವನ ಅನುಗ್ರಹದಿಂದ ಅರ್ಜುನನು ಶತ್ರುರಾಜರನ್ನು ಜಯಿಸಿದನೋ ಆ ಕೃಷ್ಣನು ದೂರದಲ್ಲಿರುವನು. ಎಂದು ಹೇಳಿ ಭೀಮನನ್ನು ಕರೆದು ಎಲೈ ಭೀಮನೇ ಯಜ್ಞವು ಹೇಗೆ ನಡೆಯುವುದು! ಜ್ಞಾತಿವಧೆಯ ದೋಷವನ್ನು ನಾನು ಹೇಗೆ ಕಳೆಯುವೆನು! ಈ ಯಜ್ಞಕ್ಕೆ ವಿಘ್ನಗಳು ಬಹುವಾಗಿವೆ. ಇದು ಪೂರಯಿಸದೆ ಹೋದರೆ ಹಾಸ್ಯಾಸ್ಪದ ನಾಗುವೆನು. ಎಂದು ಹೇಳಲು, ಭೀಮನು-ಎಲೈ ರಾಜೇಂದ್ರನೇ ದೇಶದಲ್ಲಿ ಕುದುರೆಯಿಲ್ಲ, ನನ್ನಲ್ಲಿ ಹಣವಿಲ್ಲ, ಕೃಷ್ಣನು ಸಮೀಪದಲ್ಲಿಲ್ಲ, ಎಂದು ನೀನು ಹೇಳಬಹುದೇ! ಕೃಷ್ಣನು ಯಾವಾಗಲೂ ನಿನ್ನ ಸಮೀಪದಲ್ಲಿಯೇ ಇರುವನು. ಕೃಷ್ಣನು ಹತ್ತಿರವಿರುವಾಗ ಎಲ್ಲ ಸಂಪತ್ತುಗಳೂ ಇದ್ದ ಹಾಗೆಯೇ ಅಲ್ಲವೆ. ಯಾವನ ನಾಮಸ್ಮರಣೆ ಯಿಂದ ಮನುಷ್ಯರು ಸಮಸ್ತ ಪಾಪ ಪರಿಹಾರವನ್ನೂ ಮಾಡಿಕೊಳ್ಳುವರೋ ಅಂತಹ ಕೃಷ್ಣನು ಸಮೀಪದಲ್ಲಿದ್ದರೆ ಅದರ ಫಲವನ್ನು ಹೇಳುವುದಕ್ಕೆ ಸಾಧ್ಯವೇ! ಜ್ಞಾತಿವಧೆಯ ದೋಷವು ನಿನಗೆ ಹೇಗೆ ಬರುವುದು? ಯಜ್ಞವನ್ನು ಮಾಡದಿದ್ದರೂ ಶ್ರೀ ಕೃಷ್ಣನು ನಿನ್ನನ್ನು ಪುನೀತನನ್ನಾಗಿ ಮಾಡುವನೆಂಬುದಕ್ಕೆ ಸಂದೇಹವಿಲ್ಲ. ಹಿಂದೆ ಯುದ್ಧ ಪ್ರಾರಂಭವಾದ

ಕಾಲದಲ್ಲಿಯೇ ಪ್ರಾಜ್ಞನಾದ ಕೃಷ್ಣನು ನೀವೆಲ್ಲರೂ ಯುದ್ಧವನ್ನು ಮಾಡಿ, ಎಂದು ನಮ್ಮೆಲ್ಲರನ್ನು ಪ್ರೋತ್ಸಾಹಿಸಲಿಲ್ಲವೆ! ಅದನ್ನು ನೀನು ಹೇಗೆ ಮರೆತೆ! ಎಲೈ ಮಹಾರಾಜನೇ ರಾಜಸೂಯವಾಗಲಿ ಅಶ್ವಮೇಧವಾಗಲಿ ಯಾವ ಯಜ್ಞದ ಪುಣ್ಯ ವಾದರೂ ಮಹಾಯಜ್ಞಸ್ವರೂಪನಾದ ಆ ಶ್ರೀಕೃಷ್ಣನನ್ನು ಬಿಟ್ಟು ಜನವನ್ನು ಪಾವನ ಗೊಳಿಸಲು ಸಮರ್ಥವಾಗದು. ವ್ಯಾಸಮುನಿಯನ್ನು ಕೇಳು, ಯಜ್ಞಯೋಗ್ಯವಾದ ಕುದುರೆಯು ಎಲ್ಲಿದೆಯೋ ಅದನ್ನು ತಿಳಿದು ಹೇಳಲಿ, ಎಂದನು.

ಮಹಾ ತೇಜಸ್ವಿಯಾದ ಭೀಮನ ವಾಕ್ಯವನ್ನು ಕೇಳಿ ವ್ಯಾಸಮುನಿಯು ಧರ್ಮರಾಜನನ್ನು ಕುರಿತು-ಎಲೈ ವೀರನೇ ನೀನು ಧನ್ಯನು. ನಿನ್ನ ಮಾತು ಯುಕ್ತವಾದುದು. ಇಲ್ಲಿಗೆ ಬಹು ದೂರದಲ್ಲಿರುವ ಭದ್ರಾವತೀ ಪುರಿಯಲ್ಲಿ ಯೌವನಾಶ್ವನೆಂಬ ದೊರೆಯು ಯಜ್ಞಯೋಗ್ಯವಾದ ಕುದುರೆಯನ್ನು ಹತ್ತು ಅಕ್ಷೌಹಿಣಿ ಬಲದ ಕಾವಲಿನಿಂದ ರಕ್ಷಿಸುತ್ತಿರುವನು. ಆ ಕುದುರೆಯನ್ನು ವಾಯುವೂ ಕೂಡ ಹಿಡಿಯಲಾರದು. ಅದನ್ನು ಹಿಡಿಯುವ ವಿಷಯದಲ್ಲಿ ಅಲ್ಪನಾದ ಮನುಷ್ಯನು ಯಾವ ಲೆಕ್ಕಕ್ಕೆ ಸೇರಿದವನು! ದರಿದ್ರನು ಧನವನ್ನು ಹೇಗೆ ರಕ್ಷಿಸಿಕೊಳ್ಳುತ್ತಿರುವನೋ ಹಾಗೆ ಆ ಕುದುರೆಯನ್ನು ಆ ದೊರೆಯು ಬಲದಿಂದ ಕಾದಿರುವನು. ಅಂತಹ ಕುದುರೆಯನ್ನು ಧರ್ಮರಾಜನ ಯಜ್ಞಾರ್ಥವಾಗಿ ತೆಗೆದುಕೊಂಡು ಬರುವವರು ಯಾರು? ಎಂದು ಹೇಳಿದನು.

# ಶ್ರೀಕೃಷ್ಣೋಕ್ತಿ ಶ್ರವಣ

ಬಳಿಕ ಭೀಮಸೇನನು ನಗುತ್ತ ಎಲೈ ರಾಜನೇ ನಾನೊಬ್ಬನೇ ಸೇನಾಸಹಿತವಾಗಿ ಹೋಗಿ ಶೂರನಾದ ದೊರೆಯನ್ನು ಜಯಿಸಿ ಆ ಕುದುರೆಯನ್ನು ಬಲಾತ್ಕಾರವಾಗಿ ಹಿಡಿದು ತರುವೆನು. ನೀನು ಸಂಶಯಪಡಬೇಡ. ವಾಸುದೇವಸ್ಮರಣೆ ಮಾಡಿ ಯಾವನು ಕಾರ್ಯಮಾಡುವನೋ ಅವನು ಇಷ್ಟಸಿದ್ಧಿಯನ್ನು ಪಡೆಯುವನು. ಇದು ಸತ್ಯ. ಆ ವಾಸುದೇವನನ್ನು ಅಲಕ್ಷ್ಯಮಾಡಿ ಮಾಡಿದ ತಪೋ ಯಜ್ಞಾದಿಗಳೆಲ್ಲವೂ ನಿರ್ಭಾಗ್ಯನು ಮಾಡಿದ ಕಾರ್ಯದಂತೆ ನಿಷ್ಫಲವಾಗುವುವು. ನಾನು ಆ ಕುದುರೆಯನ್ನು ತಾರದೆ ಹೋದರೆ ನನಗೆ ದುರ್ಗತಿಯುಂಟಾಗಲಿ. ಮಾತಾಪಿತೃಗಳನ್ನು ಕೊಂದವರಿಗೆ ಪ್ರಾಪ್ತವಾಗುವ ಅಧೋಲೋಕಗತಿಯು ನನಗಾಗಲಿ. ಒಂದೇ ಬಾವಿಯು ಇರುವ ಊರಿನಲ್ಲಿ ವಾಸಮಾಡುತ್ತಿರುವ ಬ್ರಾಹ್ಮಣರಿಗೂ, ವೇದಾಧ್ಯಯನವೂ ಶಿವಪೂಜೆಯೂ ಇಲ್ಲದೆ ಇರುವ ಬ್ರಾಹ್ಮಣರಿರುವ ಗ್ರಾಮದಲ್ಲಿ ಕ್ಷಣಕಾಲವಾದರೂ ವಾಸಮಾಡುವವರಿಗೂ, ಯಾವ ದುರ್ಗತಿಯುಂಟಾಗುವುದೋ ಅಂತಹ ಗತಿಯು ನನಗೆ ಬರಲಿ, ಎಂದು ಹೇಳಿ ಸುಮ್ಮನಾದನು. ಅದಕ್ಕೆ ಧರ್ಮನಂದನನು ಎಲೈ ಮಹಾಬಲನಾದ ಭೀಮಸೇನನೇ ಆ ಕುದುರೆಯನ್ನು ನೀನೊಬ್ಬನೇ ಹೋಗಿ ತರುವುದು ಕಷ್ಟತರವೆಂದು ನನಗೆ ತೋರುವುದು. ಯೌವನಾಶ್ವನು ಬಲಿಷ್ಠನು, ಅವನ ಸೇನೆಯವರೂ ಬಲಶಾಲಿಗಳು. ನೀನೊಬ್ಬನೇ ಅಲ್ಲಿಗೆ ಹೋಗುತ್ತೀಯೆ, ಎಂದು ನನಗೆ ಚಿಂತೆಯುಂಟಾಗಿರುವುದು, ಎಂದು ಹೇಳಲು ವೃಷಕೇತು ಆ ಮಾತನ್ನು ಕೇಳಿ ಧರ್ಮನಂದನನನ್ನು ಕುರಿತು-ರಾಜೇಂದ್ರನೇ ಭೀಮಸೇನನಿಗೆ ಸಹಾಯಕನಾಗಿ ನನ್ನನ್ನು ಕೂಡಲೆ ಕಳುಹಿಸು ಎಂದು ಕೇಳಿದನು. ಅದಕ್ಕೆ ಭೀಮಸೇನನು-ಎಲೈ ಕುಮಾರನೇ ನಿನ್ನ ತಂದೆಯನ್ನು ನಾವು ಸಂಹರಿಸಿದಂದಿನಿಂದಲೂ ನಿನ್ನ ಮುಖವನ್ನು ನೋಡುವುದಕ್ಕೆ ನಮಗೆ ಬಹಳ ಲಜ್ಜೆಯುಂಟಾಗಿರುವುದು ಎಂದನು. ಅದಕ್ಕೆ ವೃಷಕೇತುವು, ನೀವು ನಮ್ಮ ತಂದೆಯನ್ನು ಕ್ಷಾತ್ರಧರ್ಮದಿಂದ ಕೊಂದು ಒಳ್ಳೆಯ ಉಪಕಾರವನ್ನು ಮಾಡಿದಿರಿ. ಇದರಿಂದ ಅವನ ನೀಚಕೃತ್ಯವನ್ನು ತಪ್ಪಿಸಿದ ಹಾಗಾಯ್ತು. ಅವನು ಯಾವಜ್ಜೀವವೂ ದುರ್ಯೋಧನನಿಗೆ ಭೃತ್ಯನಾಗಿದ್ದು ಧರ್ಮದ್ವೇಷಿಯೂ ಕೃಷ್ಣನ ಪಕ್ಷವನ್ನು ಬಿಟ್ಟುದರಿಂದ ಪಾಪಿಯೂ ಆದನು. ಆದಕಾರಣ ಮಹಿಳೆಯರಲ್ಲಿ ಶ್ರೇಷ್ಠಳಾದ ದ್ರೌಪದಿಯು ಸಭಾಮಧ್ಯದಲ್ಲಿ, ನಿರ್ಜನಪ್ರದೇಶದಲ್ಲಿ, ಹೇಗೋ ಹಾಗೆ ಕಷ್ಟಕ್ಕೆ ಸಿಕ್ಕಿ ಬಾಧೆಪಡುತ್ತಿದ್ದರೂ ಕರ್ಣನು ನೋಡುತ್ತ ಸುಮ್ಮನಿದ್ದನು. ಮತ್ಸ್ಯರಾಜನ ಗೋಸಹಸ್ರಗಳನ್ನು ಕರ್ಣನು ಹಿಡಿದಿರಲು ಅವುಗಳನ್ನು ಅರ್ಜುನನು ಬಿಡಿಸಿದನೆಂದು ತೋರುವುದು. ಅತ್ಯಂತ ದೋಷಪೂರ್ಣನಾದ ಕರ್ಣನನ್ನು ಶೂರರಾದ ಪಾಂಡವರು ಯುದ್ಧದಲ್ಲಿ ಕೊಂದುದು ಅವನನ್ನು ಶುದ್ಧನನ್ನಾಗಿ ಮಾಡಿದ ಹಾಗಾಯ್ತು. ಕೈಯಲ್ಲಿದ್ದ ಚಿಂತಾಮಣಿಯನ್ನು ದಾನಮಾಡಿ ಗಾಜನ್ನೋ ಕವಡೆಯನ್ನೋ ಉತ್ತಮದಾನವೆಂದು ಭಾವಿಸಿ ಕೈಯೊಡ್ಡಿ ಯಾವನಾದರೂ ತೆಗೆದುಕೊಳ್ಳುವನೇ! ಒಬ್ಬನ ಮನೆಯ ಅಂಗಳದಲ್ಲಿರುವ ನಿಷ್ಫಲವಾದ ಮರವನ್ನು ಯಾವನಾದರೂ ಕಿತ್ತು ತೆಗೆದುಕೊಂಡು ಅಲ್ಲಿ ಕಲ್ಪವೃಕ್ಷವನ್ನು ತಂದು ನಡುವನೇ! ಆದಕಾರಣ

ಅರ್ಜುನನು ಆ ಸಂದರ್ಭದಲ್ಲಿ ಹಾಗೆ ಮಾಡಿದನು. ಅವನು ಮಾಡಿದ ಅಪರಾಧವೇನು? ನಿಮ್ಮ ಅನುಗ್ರಹದಿಂದ ಕರ್ಣನು ಸೂರ್ಯಲೋಕವನ್ನು ಪಡೆದನು. ಅವನಿಗೆ ಬಂದ ಅಪಖ್ಯಾತಿಯು ಈಗಲೂ ಲೋಕದಲ್ಲಿ ನೆಲಸಿದೆ. ನಾನು ಈ ಯಜ್ಞಕಾಲದಲ್ಲಿ ಅದನ್ನು ಹೋಗಲಾಡಿಸುವೆನು. ಯೌವನಾಶ್ವನ ಸೈನ್ಯಸಾಗರವನ್ನು ಕಲಕಿ ಭೀಮನು ಬೇಗನೆ ಕುದುರೆಯನ್ನು ತರಲಿ, ಎಂದು ಹೇಳಿದನು.

ಭೀಮಸೇನನು ಆ ಮಾತನ್ನು ಕೇಳಿ ವೃಷಕೇತುವನ್ನು ಆಲಂಗಿಸಿ ತನ್ನ ಸಮೀಪದಲ್ಲಿದ್ದ ತನ್ನ ಮೊಮ್ಮಗನಾದ ಮೇಘವರ್ಣನನ್ನು ಕುರಿತು-ನಿಮ್ಮ ತಂದೆಯಾದ ಘಟೋತ್ಕಚನು ಪಾಂಡವರೆಲ್ಲರನ್ನೂ ತನ್ನ ಬೆನ್ನಿನ ಮೇಲೆ ಹೊತ್ತುಕೊಂಡು ಹೋಗಿ ಗಂಧಮಾದನ ಪರ್ವತಕ್ಕೆ ಸೇರಿಸಿ ರಕ್ಷಿಸಿರುವನು. ನೀನೂ ಹಾಗೆಯೇ ಧರ್ಮರಾಜನ ಹಿಂದೆ ಕಾವಲಾಗಿದ್ದು ಅವನನ್ನು ರಕ್ಷಿಸುತ್ತಿರು. ನಾನು ವೃಷಕೇತುವಿನೊಡನೆ ಹೋಗಿ ಕುದುರೆಯನ್ನು ತೆಗೆದುಕೊಂಡು ಬರುವೆನು. ನಾನು ಕುದುರೆಯನ್ನು ತೆಗೆದುಕೊಂಡು ಬರುವವರೆಗೂ ನೀನೂ ಅರ್ಜುನನೂ ಧರ್ಮರಾಜನನ್ನು ರಕ್ಷಿಸುತ್ತಿರಿ ಎಂದನು. ಅದನ್ನು ಕೇಳಿ ಮೇಘವರ್ಣನು-ಶೂರನಾದ ಘಟೋತ್ಕಚನು ನಿನ್ನ ಮಗನಲ್ಲವೇ! ಅವನು ಅಂತಹ ಪವಿತ್ರಕಾರ್ಯವನ್ನು ಮಾಡಿದುದರಲ್ಲಿ ಆಶ್ಚರ್ಯವೇನು? ದಾರಿಯಲ್ಲಿ ಹರಿವ ನೀರು ಗಂಗೆಯನ್ನು ಸೇರುವುದಕ್ಕೆ ಮೊದಲು ಅಪವಿತ್ರವಾದುದು. ಬಳಿಕ ಅದು ಪಾಪ ಪರಿಹಾರಕವಾಗುವುದು. ದೇಹಿಗಳಿಗೆ ಸಜ್ಜನಸಂಗದಿಂದ ಅಸಾಧ್ಯವಾದುದು ಯಾವುದೂ ಇಲ್ಲ. ಪೂರ್ವದಲ್ಲಿ ಶಿಲೆಯಾಗಿ ಹೋಗಿದ್ದ ಅಹಲ್ಯೆಯು ಶ್ರೀರಾಮನ ಪಾದದ ಸ್ಪರ್ಶದಿಂದ ಶುದ್ಧಳಾಗಲಿಲ್ಲವೆ? ಎಲೈ ವೀರನೇ, ನೀನು ಈ ವೃಷಕೇತುವಿನೊಡನೆ ಭದ್ರಾವತಿಗೆ ಹೋಗುವೆಯಷ್ಟೆ. ನನ್ನನ್ನೂ ಅಲ್ಲಿಗೆ ಕರೆದುಕೊಂಡು ಹೋಗು. ನಾನು ಕುದುರೆಯನ್ನು ತೆಗೆದುಕೊಂಡು ಬರುವೆನು. ನೀನೂ ವೃಷಕೇತುವೂ ಯುದ್ಧಕ್ಕೆ ನಿಲ್ಲುವಿರಿ. ನಾನು ಕುದುರೆಯನ್ನು ಬೆನ್ನಿನ ಮೇಲೆ ಹೊತ್ತು ತರುವೆನು. ಎಲೈ ಭೀಮನೇ ಧರ್ಮಜನಿಗೆ ನಮಸ್ಕರಿಸಿ ಬೇಗನೆ ಹೊರಡು. ನಿನಗೆ ನಿಶ್ಚಯವಾಗಿ ವಿಜಯವೂ ಹೆಚ್ಚಾದ ಕೀರ್ತಿಯೂ ಉಂಟಾಗುವುದು. ಕೃಷ್ಣನನ್ನು ನಮಸ್ಕರಿಸಿದ ಮನುಷ್ಯನಿಗೆ ಯಾವ ಕಾರ್ಯವು ತಾನೆ ಕೈ ಸೇರದಿರುವುದು? ಅದರಿಂದ ಪುತ್ರ ಮಿತ್ರ ಕಳತ್ರ ರಾಜ್ಯ ಸ್ವರ್ಗ ಮೋಕ್ಷಾದಿ ಫಲಗಳುಂಟಾಗುವುವು. ಕೃಷ್ಣನು ಪಾಪವನ್ನು ಧ್ವಂಸ ಮಾಡುವನು. ಆಧಿ ವ್ಯಾಧಿಗಳನ್ನು ತಪ್ಪಿಸುವನು. ನಿತ್ಯವೂ ಧರ್ಮವೃದ್ಧಿಯನ್ನೂ ಇಷ್ಟಾರ್ಥಸಿದ್ಧಿಯನ್ನೂ ಉಂಟು ಮಾಡುವನು. ಆತನನ್ನು ನಮಸ್ಕರಿಸಿದವರಿಗೆ ಯಾವ ಪಾಪವೂ ಪ್ರಾಪ್ತವಾಗಲಾರದು, ಎಂದು ಹೇಳಿದನು. ಅದನ್ನು ಕೇಳಿ ಭೀಮನು-ಎಲೈ ಪುತ್ರನೇ ನೀನು ಧನ್ಯನು. ನೀನು ಇಷ್ಟವಾದ ಶುಭ ವಚನವನ್ನಾಡಿದೆ. ನೀನೂ ವೃಷಕೇತುವೂ ಸಹಾಯಾರ್ಥವಾಗಿ ನನ್ನೊಡನೆ ಬನ್ನಿ. ನಾವೆಲ್ಲರೂ ಪರರಾಜ್ಯಕ್ಕೆ ಹೊರಡೋಣ ಎಂದನು. ಧರ್ಮರಾಜನು ಇವರಿಬ್ಬರ ಮಾತನ್ನು ಕೇಳಿ ಬಹಳ ಸಂತೋಷದಿಂದ ಭೀಮನನ್ನು ಕುರಿತು- ವ್ಯಾಸಮುನಿಯು ಹೇಳಿದುದನ್ನೆಲ್ಲ ಕೇಳಿದುದಾಯ್ತು. ನೀನೂ ನಾವಿಬ್ಬರೂ ಸೇರಿ ಎಲ್ಲವನ್ನೂ ಮಾಡೋಣ. ರಾತ್ರಿಯು ಕಳೆದು ಹೋಯಿತು. ವ್ಯಾಸ ಮಹಾಮುನಿಯು

ಹೊರಡಬೇಕೆಂದಿದ್ದಾನೆ. ಆದಕಾರಣ ಆತನನ್ನು ಸತ್ಕರಿಸಿ ಕಳುಹಿಸುವುದಕ್ಕೆ ಎಲ್ಲರೂ ಹೋಗೋಣ, ಎಂದು ಹೇಳಿ ಆತನ ಬಳಿಗೆ ಹೋಗಿ ಆತನನ್ನು ಸತ್ಕರಿಸಿ ಕಳುಹಿಸಲು ಆತನು ಅವರಿಂದ ಸತ್ಕೃತನಾಗಿ ಅಲ್ಲಿಂದ ಹೊರಟು ಹೋದನು.

ಬಳಿಕ ಧರ್ಮರಾಜನು ಚಿಂತಾಕ್ರಾಂತನಾಗಿ ಆ ರಾತ್ರಿ ತನ್ನ ಸಹೋದರರೊಡನೆ ಸೇರಿ-ಯಾವ ಸ್ನೇಹಿತನನ್ನು ಕೇಳಲಿ! ಹಣವೊದಗುವುದು ಹೇಗೆ! ಎಂದು ದುಃಖಿಸುತ್ತ, ಕುದುರೆಯನ್ನು ತರುವ ಬಗೆ ಹೇಗೆ! ಯಜ್ಞವು ಹೇಗೆ ನಡೆಯುವುದು! ನಮ್ಮನ್ನು ಕಷ್ಟ ಕಾಲಗಳಲ್ಲೆಲ್ಲ ರಕ್ಷಣೆ ಮಾಡಿದ ಆ ಕೃಷ್ಣನು ದೂರದಲ್ಲಿರುವನು. ನನಗೆ ಹಿತಚಿಂತಕರು ಯಾರು, ಎಲೈ ಗೋಪಾಲನಾದ ಗೋವಿಂದನೇ, ಅಯ್ಯೋ! ನಾನು ಕಷ್ಟಸಮುದ್ರದ ತೆರೆಯಲ್ಲಿ ಮುಳುಗಿಹೋದೆನು. ನನ್ನ ಯಜ್ಞವು ಹೇಗೆ ನೆರವೇರುವುದೆಂಬುದನ್ನು ರಕ್ಷಕನಾದ ನೀನರಿಯೆಯಾ! ಎಲೈ ಕೃಪಾಸಮುದ್ರನಾದ ಕೃಷ್ಣನೇ, ಬಾ! ಲಜ್ಜಾ ಸಮುದ್ರದಲ್ಲಿ ಮುಳುಗಿದ್ದ ದ್ರೌಪದಿಯನ್ನು ರಕ್ಷಿಸಿದಂತೆ ಈ ಪಾಪದಿಂದ ನಮ್ಮನ್ನು ದಾಟಿಸು. ನನ್ನ ಅದೃಷ್ಟವು ಹೀನವಾದುದು. ನೀನೇ ರಕ್ಷಕನು, ಎಂದು ಹಂಬಲಿಸುತ್ತ ಮತ್ತೆ ಕೃಷ್ಣಚರಿತ್ರೆಯನ್ನೇ ನೆನೆಯುತ್ತ ಅವನ ಧ್ಯಾನವನ್ನು ಮಾಡುತ್ತಿರುವಷ್ಟರಲ್ಲೇ, ಸರ್ವವ್ಯಾಪಿಯಾಗಿಯೂ ಲಕ್ಷ್ಮೀಪತಿಯಾಗಿಯೂ ಇರುವ ಕೃಷ್ಣನು ತಾನೇ ಮನೆಯ ಬಾಗಿಲಿಗೆ ಬಂದು, ದೊರೆಗಳನ್ನು ತಕ್ಕ ಕಾಲದಲ್ಲಿ ನೋಡುವುದು ತಿಳಿದವರ ಮತವಾದ ಕಾರಣ ನಾನು ಬಂದಿರುವ ಸಂಗತಿಯನ್ನು ದೊರೆಗೆ ತಿಳಿಸು, ಎಂದು ದ್ವಾರಪಾಲಕನ ಸಂಗಡ ಹೇಳಲು ಅವನು-ಎಲೈ ಗೋವಿಂದನೇ ನಿನಗೆ ಧರ್ಮರಾಜನ ಬಳಿಯಲ್ಲಿ ಯಾವಾಗಲೂ ಸಮಯವೇ. ಹೀಗೆಂದು ಧರ್ಮನಂದನನು ನನ್ನೊಡನೆ ಹೇಳಿರುವನು. ಪರನಿಂದಕರೂ ಪರದ್ರವ್ಯಾಪಹಾರಿಗಳೂ ಪರಸ್ತ್ರೀಕಾಮುಕರೂ ಆದವರ ಬಳಿಯಲ್ಲಿ ನಿನಗೆ ಅವಕಾಶವು ದೊರೆಯದು. ಧರ್ಮರಾಜನು ಪರದೂಷಕನೂ ಅಲ್ಲ, ಪರದ್ರವ್ಯಾಪಹಾರಕನೂ ಅಲ್ಲ, ಕಾಮುಕನೂ ಅಲ್ಲ. ಆದಕಾರಣ ನೀನು ಸಮಯವನ್ನು ಕಾಯಬೇಕಾದುದಿಲ್ಲ. ಈಗಲೇ ಹೋಗಿ ಆತನನ್ನು ನೋಡಿ ಅವನ ಇಷ್ಟಾರ್ಥಸಿದ್ಧಿಯನ್ನುಂಟುಮಾಡು. ಆತನು ಭೀಮಾರ್ಜುನರೊಡನೆ ಕೂಡಿ ನಿನ್ನನ್ನೇ ಚಿಂತಿಸುವನು. ಅವನ ಇಚ್ಛಾಪೂರ್ತಿಮಾಡು. ಎಂದನು.

ಅದನ್ನು ಕೇಳಿ ಕೃಷ್ಣನು-ನೀನು ನನ್ನ ಆಜ್ಞೆಯ ಪ್ರಕಾರ ಬೇಗನೆ ದೊರೆಯ ಬಳಿಗೆ ಹೋಗು ಎಂದು ಹೇಳಲು, ದ್ವಾರಪಾಲಕನು ಕೂಡಲೆ ಧರ್ಮರಾಜನ ಬಳಿಗೆ ಹೋಗಿ ನಗುತ್ತ, ಕೃಷ್ಣನು ಅರಮನೆಯ ಬಾಗಿಲಲ್ಲಿ ಬಂದು ನಿಂತು ನಿನ್ನ ಸಮಯವನ್ನು ತಿಳಿಯಲಪೇಕ್ಷಿಸುತ್ತಿರುವನು, ಎಂದನು. ಅದನ್ನು ಕೇಳಿ ಧರ್ಮರಾಜನು ತ್ವರೆಯಿಂದ ಎದ್ದು ಭೀಮನನ್ನು ಕುರಿತು-ಎಲೈ ಭೀಮಸೇನನೇ ನನ್ನ ಮೇಲಣ ಪ್ರೀತಿಯಿಂದಲೋ ಯಜ್ಞ ನಿರ್ವಾಹಕ್ಕಾಗಿಯೋ, ಈ ಅರ್ಧರಾತ್ರಿಯಲ್ಲಿಯೇ ಕೃಷ್ಣನು ಬಂದಿರುವುದಾಗಿ ಪ್ರತೀಹಾರನು ತಿಳಿಸುವನು. ನೀನೂ ನನ್ನೊಡನೆ ಬಾ, ಆತನ ಬಳಿಗೆ ಹೋಗೋಣ ಎಂದು ಹೇಳಿ ಸಹೋದರರೊಡನೆ ಆತನ ಬಳಿಗೆ ಹೊರಟನು. ಕೃಷ್ಣನು ಧರ್ಮರಾಜನನ್ನು ನೋಡಿ ಆತನಿಗೆ ನಮಸ್ಕರಿಸಿದನು. ಧರ್ಮಜನು ಶ್ರೀ ಕೃಷ್ಣನನ್ನು ಕೈಯಿಂದ ಹಿಡಿದು

ಎಬ್ಬಿಸಿ ತಲೆಯನ್ನು ಆಘ್ರಾಣಿಸಿ ಆತನನ್ನಾಲಿಂಗಿಸಿ ಆತನ ತಲೆಯ ಮೇಲೆ ಕಣ್ಣೀರನ್ನು ಸುರಿಸುತ್ತಿರಲು ಇಬ್ಬರೂ ಪರಸ್ಪರಾಲಿಂಗನಗಳನ್ನು ಮಾಡಿದರು. ಭೀಮಾರ್ಜುನ ನಕುಲ ಸಹದೇವರು ಶ್ರೀಕೃಷ್ಣನ ಪಾದಗಳಿಗೆ ಅಡ್ಡಬಿದ್ದರು. ಬಳಿಕ ಪಾಂಡವರು ಶ್ರೀಕೃಷ್ಣನನ್ನು ಅರ್ಘ್ಯಾದಿಗಳಿಂದ ಸತ್ಕರಿಸಿ ಆಶ್ಚರ್ಯದಿಂದಿರಲು ದ್ರೌಪದಿಯು ಬಂದು ನಮಸ್ಕಾರಮಾಡಿ, ಪತಿಗಳನ್ನು ಕುರಿತು-ಎಲೈ ವೀರರೇ! ಶ್ರೀಕೃಷ್ಣನನ್ನು ನೋಡಿ ನೀವೆಲ್ಲರೂ ಏಕೆ ವಿಸ್ಮಯಪಡುತ್ತಿರುವಿರಿ! ಹಿಂದೆ ದೂರ್ವಾಸಮುನಿಯಿಂದ ಭಯವೊದಗಿದ್ದಾಗ ಅರ್ಧರಾತ್ರಿಯಲ್ಲಿ ಶ್ರೀಕೃಷ್ಣನು ರಕ್ಷಣಾರ್ಥವಾಗಿ ನಿಮ್ಮ ಬಳಿಗೆ ಬಂದನು. ತಂದೆ ತಾಯಿಗಳೂ ಬಂಧುಗಳೂ ಪತಿಗಳೂ ದ್ರೋಣ ಭೀಷ್ಮರೂ ಯಾರೂ ನನ್ನನ್ನು ರಕ್ಷಿಸಲಾರದೆ ಹೋದಾಗ ಸಭಾಮಧ್ಯದಲ್ಲಿ ನಿಮ್ಮೆದುರಿಗೆ ಭಕ್ತರಕ್ಷಕನಾದ ಈತನು ವಸ್ತ್ರರೂಪನಾಗಿ ಬಂದು ನನ್ನನ್ನು ರಕ್ಷಿಸಿದನು. ಯಾವಾಗಲೂ ಇವನ ಆಗಮನವು ಭಕ್ತ ರಕ್ಷಣಾರ್ಥವಾಗಿಯೇ ಅಲ್ಲವೇ! ನಾವು ವನವಾಸ ಮಾಡುತ್ತಿರುವಾಗ ದೂರ್ವಾಸಮುನಿಯು ದುರ್ಯೋಧನನಿಂದ ಪ್ರೇರಿತನಾಗಿ ಹತ್ತುಸಾವಿರ ಮಂದಿ ಶಿಷ್ಯರೊಡನೆ ಬರಲು, ಆಗ ನೀನು ಮನಸ್ಸಿನಲ್ಲಿ ಧ್ಯಾನಿಸಿದ ಮಾತ್ರಕ್ಕೆ ಕೃಪಾಸಮುದ್ರನಾದ ಈ ಭಗವಂತನು ಲಕ್ಷ್ಮಿಯನ್ನು ತೊಡೆಯಿಂದಿಳಿಸಿ ಕೂಡಲೆ ವಾಯುವೇಗದಿಂದ ಬಂದು ಅಕ್ಷಯಪಾತ್ರೆಯಲ್ಲಿ ಹತ್ತಿಕೊಂಡಿದ್ದ ಪಾಕಶೇಷವಾದ ಒಂದು ಎಲೆಯನ್ನು ಭುಜಿಸಿ ಅಷ್ಟಕ್ಕೆ ತೃಪ್ತನಾದ ಕೂಡಲೆ ಆ ಮುನಿಗಳೆಲ್ಲರೂ ತೃಪ್ತಿಯನ್ನು ಹೊಂದಿದರು. ಆಗ ಹಾಗೆ ನಮ್ಮನ್ನು ರಕ್ಷಿಸಿದನು. ಲೋಕದಲ್ಲಿ ಯಾವಾಗ ದುಃಖ ಪ್ರಾಪ್ತವಾಗುವುದೋ ಆಗ ನೆನೆದ ಮಾತ್ರಕ್ಕೆ ಬಂದು ರಕ್ಷಿಸುವನು, ಎಂದು ಸ್ತುತಿಸಿದಳು.

ಅದಕ್ಕೆ ಶ್ರೀಕೃಷ್ಣನು ಸಂತುಷ್ಟನಾಗಿ ಕುಳಿತುಕೊಳ್ಳಲು, ಧರ್ಮರಾಜನು ಶ್ರೀಕೃಷ್ಣನನ್ನು ನೋಡಿ-ಎಲೈ ಜನಾರ್ದನನೇ, ನಾನು ಕ್ಲೇಶಕ್ಕೊಳಗಾಗಿ ಈಗ ತಾನೇ ನಿನ್ನನ್ನು ಧ್ಯಾನಿಸಿದೆನು. ಇನ್ನು ನನ್ನ ಕಾರ್ಯವು ಸಫಲವಾಗುವುದು. ನನಗೆ ಅಶ್ವಮೇಧವನ್ನು ಮಾಡಬೇಕೆಂಬ ಕುತೂಹಲವುಂಟಾಗಿದೆ. ನಾನು ಈ ಯಜ್ಞವನ್ನು ಮಾಡಲು ಸಮರ್ಥನಾಗುತ್ತೇನೆಯೆ? ಇದಕ್ಕಾಗಿ ನಿನ್ನ ಹಿತವಚನವನ್ನು ಹೇಳು ಎಂದನು. ಅದನ್ನು ಕೇಳಿ ಕೃಷ್ಣನು ಎಲೈ ಧರ್ಮನಂದನನೇ ನಿನ್ನಿಂದ ಈ ಯಜ್ಞವನ್ನು ಮಾಡುವುದು ಸಾಧ್ಯವಲ್ಲ. ಈ ಲೋಕದಲ್ಲಿ ಶೂರರಾಗಿ ಯೋಗಿಗಳಂತೆ ತಪಿಸುತ್ತಿರುವವರಿಗೆ ಇದು ಸಾಧ್ಯವು. ನೀನು ಭೀಮನ ಆಲೋಚನೆಯಿಂದ ಈ ಕಾರ್ಯಕ್ಕೆ ಮನಸ್ಸು ಮಾಡಿದ್ದೀಯೆ. ತಿಂಡಿಪೋತನಾದ ಈ ಭೀಮನಿಗೆ ಬುದ್ಧಿಯಿಲ್ಲ. ಮಂತ್ರಾಲೋಚನೆಯು ಅವನಿಗೆ ತಿಳಿಯದು. ಅವನು ದೊಡ್ಡ ಹೊಟ್ಟೆಯುಳ್ಳ ಜಡನಾಗಿರುವನು. ವಿಕಾರಸ್ವರೂಪಳಾದ ರಾಕ್ಷಸಿಯು ಇವನಿಗೆ ಹೆಂಡತಿಯಾಗಿ ಇವನ ಮನೆಯಲ್ಲಿ ಯಾವಾಗಲೂ ಇರುವಳು. ಇವನು ಅವಳಿಂದ ಮೋಹಿತನಾಗಿರುವುದರಿಂದ ಯಾವುದನ್ನೂ ಅರಿಯನು. ಇಂತಹ ಅಲ್ಪಬುದ್ಧಿಯುಳ್ಳವ ನೊಡನೆ ನೀನು ಆಲೋಚನೆಯನ್ನು ಮಾಡಿದರೆ ಈ ವೃಕೋದರನ ಮಂತ್ರಿತ್ವದಲ್ಲಿ ನಿನ್ನ ಯಾಗವು ಆದಹಾಗೆಯೇ ಸರಿ! ದೊಡ್ಡ ಅಂಗವುಳ್ಳವರು, ಅಂಗಹೀನರು, ಕಿವುಡರು, ದುಷ್ಟಯೋನಿ ಸಂಬಂಧವುಳ್ಳವರು ಇಂತಹವರೊಡನೆ ಮಾಡುವ ಮಂತ್ರಿತ್ವವು

ಸುಖಕರವಲ್ಲವೆಂದು ಕವಿಗಳು ಹೇಳಿದ್ದಾರೆ. ಕಾಮುಕರು, ಜಡರು, ಸ್ತ್ರೀವ್ಯಾಮೋಹ ಕ್ಕೊಳಗಾದವರು, ಯಾವಾಗಲೂ ಮಾವನ ಮನೆಯಲ್ಲಿ ಕೆಲಸ ಮಾಡಿಕೊಂಡಿರುವ ಅಳಿಯ ಇವರೊಡನೆ ಮಾಡಿದ ಮಂತ್ರಿತ್ವದಿಂದ ಕಾರ್ಯಸಿದ್ಧಿಯಾಗುವುದಿಲ್ಲ. ಭೀಮನು ಜರಾಸಂಧ, ಹಿಡಿಂಬ, ಬಕ ಇವರನ್ನು ಬಲ್ಲವನು. ಈಗ ಇರುವ ಬಲಿಷ್ಠರೂ ಧರ್ಮಾತ್ಮರೂ ದಾನಶೂರರೂ ಪರಾಕ್ರಮಿಗಳೂ ಜಿತೇಂದ್ರಿಯರೂ ಆದ ರಾಜರನ್ನು ಇವನು ಕಾಣನು. ರಾಜಸೂಯ ಕಾಲದಲ್ಲಿ ಇವನು ನೋಡದ ಮಹಾಬಲ ದರ್ಪಿತರಾದ ರಾಜರು ಬಹುಮಂದಿ ಈಗ ಇರುವರು. ಅರ್ಜುನನು ನನ್ನೊಡನೆ ಆಲೋಚನೆ ಮಾಡದೆ ಜಯದ್ರಥ ವಧೆಗಾಗಿ ಪ್ರತಿಜ್ಞೆ ಮಾಡಿದುದು ಬಹು ಸಾಹಸಕಾರ್ಯವು. ಭೀಮಸೇನನ ಬೆಂಬಲದಿಂದ ನೀನು ಹೇಗೆ ಯಜ್ಞವನ್ನು ಸಾಂಗವಾಗಿ ಪೂರಯಿಸುವೆ? ಇದೂ ಸಾಹಸಕಾರ್ಯವೇ ಸರಿ. ನಾನಾ ದಿಕ್ಕುಗಳಿಗೂ ಹೋಗುವ ಕುದುರೆಯನ್ನು ರಕ್ಷಿಸುವುದು ಹೇಗೆ? ದೇವ ಗಂಧರ್ವ ಮನುಷ್ಯರಲ್ಲಿ ಯಾರು ಕುದುರೆಯನ್ನು ಕಟ್ಟುವ ವೀರರಿರುವರೋ ಅವರನ್ನೆಲ್ಲ ಜಯಿಸಬೇಕಾಗುವುದು. ಯಜ್ಞದೀಕ್ಷಿತನು ದುಷ್ಕರವಾದ ಅಸಿಪತ್ರ ವ್ರತವನ್ನು ಕೈಕೊಳ್ಳಬೇಕು. ಪೂರ್ವದಲ್ಲಿ ಶ್ರೀರಾಮನು ಯಜ್ಞಾಶ್ವ ರಕ್ಷಣೆಗಾಗಿ ಶೂರನಾದ ಭರತನನ್ನು ನಿಯಮಿಸಿರಲು ಶುಕ್ತಿಮತೀಪುರದರಸನಾದ ಸುರಥನೆಂಬ ಶೂರನು ಭರತನನ್ನೂ ಕುದುರೆಯನ್ನೂ ಸೆರೆಹಾಕಿಕೊಂಡನು. ಬಳಿಕ ಶ್ರೀರಾಮನೇ ಹೋಗಿ ಬಿಡಿಸಿದನು. ನನ್ನ ಮಿತ್ರನಾದ ಅರ್ಜುನನು ಅಶ್ವರಕ್ಷಣೆಗಾಗಿ ಹೋಗಬಹುದು. ಇಲ್ಲಿ ನಿನ್ನನ್ನು ರಕ್ಷಿಸುವವರು ಯಾರು? ಶೂರರು ಯಾರಾದರೂ ಅಶ್ವವನ್ನೂ ಅರ್ಜುನನನ್ನೂ ಹಿಡಿದುಕೊಂಡರೆ ಬಿಡಿಸುವವರು ಯಾರು? ನನಗೆ ಇದು ಬಹು ಸಂದೇಹವಾಗಿದೆ, ಎಂದು ಹೇಳಿದನು.

# ಭೀಮ ವಾಕ್ಯ

ಭೀಮನು ಶ್ರೀಕೃಷ್ಣನ ವಾಕ್ಯವನ್ನು ಕೇಳಿ ನಸುನಗುತ್ತ ಮೇಘ ಗಂಭೀರ ಧ್ವನಿಯಿಂದ ಇಂತೆಂದನು-ಎಲೈ ಕೃಷ್ಣನೇ, ಶೂರರಿಂದ ಶೋಭಿಸುತ್ತಿರುವ ಈ ರಮ್ಯವಾದ ಕಾಲವೇ ಶ್ಲಾಘ್ಯವಾದುದು. ಈ ಯಜ್ಞವು ಧರ್ಮರಾಜನಿಂದಲೇ ಮಾಡುವುದಕ್ಕೆ ಶಕ್ಯವಾದುದು. ನಿನ್ನನ್ನು ನೆನೆದು ಈ ಕಾರ್ಯಕ್ಕೆ ನಾನು ಮಾತುಕೊಟ್ಟಿರುವೆನು. ದೊಡ್ಡ ಹೊಟ್ಟೆಯುಳ್ಳವನು, ಬುದ್ಧಿಹೀನನು, ತಿಂಡಿಪೋತನು, ಅಲ್ಪಬುದ್ಧಿಯುಳ್ಳವನು ಎಂದು ನೀನು ಹೇಳಿದುದು ಸತ್ಯವಾದುದು. ಇವೆಲ್ಲವೂ ನಿನ್ನ ದೇಹದಲ್ಲಿರುವುದೆಂಬುದನ್ನು ನಾನೇ ಕಂಡಿದ್ದೇನೆ. ನಿನ್ನ ಹೊಟ್ಟೆಯಲ್ಲಿ ಚರಾಚರಾತ್ಮಕವಾದ ಪ್ರಪಂಚವು ಅಡಗಿರುವುದು. ಇನ್ನು ನಿನಗಿಂತಲೂ ದೊಡ್ಡ ಹೊಟ್ಟೆಯುಳ್ಳವನಾರು! ಬ್ರಹ್ಮಾದಿ ದೇವತೆಗಳನ್ನೂ ಎಲ್ಲ ಸಾಗರಗಳನ್ನೂ ನದಿಗಳನ್ನೂ ಸರ್ವಾಧಾರವಾದ ದಿಕ್ಕುಗಳನ್ನೂ ನೀನು ನುಂಗುವುದಿಲ್ಲವೇ! ನಿನಗಿಂತಲೂ ಹೆಚ್ಚು ತಿಂಡಿಯನ್ನು ತಿನ್ನುವವನು ಯಾರು! ನಿನಗಿಂತಲೂ ದೊಡ್ಡ ಹೊಟ್ಟೆಯುಳ್ಳವನು ಹಿಂದೆ ಯಾವನೂ ಹುಟ್ಟಲಿಲ್ಲ, ಮುಂದೆ ಯಾರೂ ಹುಟ್ಟರು. ಅಂತಹ ನೀನು ನನ್ನ ಹೊಟ್ಟೆಯನ್ನೂ ಭೋಜನವನ್ನೂ ಪ್ರಶಂಸಿಸುತ್ತ ನಾಚಿಕೆಯಿಲ್ಲದೆ ನನ್ನೊಡನೆ ಸುಳ್ಳು ಮಾತನ್ನಾಡುವೆ. ಕೇಶವನು ಬಹುಗುಣಜ್ಞನಷ್ಟೆ, ತಾನು ರುಕ್ಮಿಣಿಯನ್ನು ಮದುವೆಮಾಡಿಕೊಂಡಿದ್ದರೂ ವಾನರಿಯಾದ ಜಾಂಬವತಿಯನ್ನು ಹೆಂಡತಿಯನ್ನಾಗಿ ಮಾಡಿಕೊಳ್ಳುವವನು ಮಾಧವನನ್ನುಳಿದು ಮತ್ತೆ ಯಾರಾದರೂ ಇರುವರೇ! ವರಾಹ ಮತ್ಸ್ಯ ಕೂರ್ಮಾದಿ ತಿರ್ಯಗ್ಯೋನಿಗಳಲ್ಲಿ ಅವತಾರ ಮಾಡುವುದು ನಿನಗೆ ಇಷ್ಟವಾದುದು. ಪೂರ್ವದಲ್ಲಿ ವಾಮನನಾಗಿ ಹುಟ್ಟಿದುದರಿಂದ ನೀನು ಹೀಗೆ ವಕ್ರವಾಗಿ ಮಾತನಾಡುತ್ತೀಯೆ. ನಾಚಿಕೆಗೇಡಾದ ಮನ್ಮಥನು ನಿನಗೆ ಮಗನೆನಿಸಿಕೊಂಡನು. ದೇವಲೋಕದಲ್ಲಿದ್ದ ಪಾರಿಜಾತ ವೃಕ್ಷವನ್ನು ಸ್ತ್ರೀನಿಮಿತ್ತದಿಂದ ಕಿತ್ತು ಭೂಲೋಕಕ್ಕೆ ತಂದ ನಿನಗಿಂತಲೂ ಸ್ತ್ರೀ ಜಿತನಾದವನು ದೇವತೆಗಳಲ್ಲಿ ಮತ್ತಾವನುಂಟು! ನಿನ್ನ ವಾಸವು ಸರ್ವದಾ ನಿಮ್ಮ ಮಾವನ ಮನೆಯಾದ ಕ್ಷೀರಸಮುದ್ರದಲ್ಲಿಯೇ ಅಲ್ಲವೇ! ಇಂತಹ ಉತ್ತಮಗುಣಗಳು ನಿನ್ನಲ್ಲಿ ಇನ್ನೂ ಅನೇಕವಾಗಿವೆ. ಅವುಗಳನ್ನು ಏಕೆ ಹೇಳಬೇಕು! ಇಷ್ಟು ಸಾಕು. ದೊರೆಯನ್ನು ಹೆದರಿಸಿ ಏಕೆ ಯಜ್ಞವನ್ನು ದೂಷಿಸುವೆ. ನಾನು ಪೂರ್ವದಲ್ಲಿ ನಿನ್ನ ಸಹಾಯದಿಂದ ಹೇಗೆ ಜರಾಸಂಧ ಮೊದಲಾದ ಕ್ಷತ್ರಿಯರನ್ನು ಸಂಹರಿಸಿದೆನೋ ಹಾಗೆಯೇ ಈಗಲೂ ಶತ್ರುಗಳನ್ನು ಗೆಲ್ಲುವೆನು. ಭೂಮಿಯನ್ನು ತೋಳುಗಳಿಂದ ಹಿಡಿದೆತ್ತುವೆನು. ಪರ್ವತಗಳೆಲ್ಲವನ್ನೂ ಕಿತ್ತೀಡಾಡುವೆನು. ಅಶ್ವಮೇಧವನ್ನು ಮಾಡಿಸುವೆನು. ದೊರೆಯ ಆಲೋಚನೆಯು ತಪ್ಪದೆ ನೆರವೇರಲಿ. ಎಲೈ ದೇವಕಿನಂದನನೇ-ನಾವು, ನಮ್ಮ ಕೃಷ್ಣನು ಬರುವನು, ನಮ್ಮ ಇಷ್ಟವನ್ನು ಸಲಿಸುವನು, ಎಂದು ಚಿಂತಿಸುತ್ತಿದ್ದೆವು. ನೀನು ಬಂದು ಅದಕ್ಕೆ ವಿರೋಧವಾಗಿ ಮಾಡಬಹುದೇ! ನಿನ್ನ ಆಶ್ರಯವು ನಮಗೆ ಸಫಲವಾಗಿ ಪರಿಣಮಿಸಲಿ. ಬಹುಕಾಲ

ಬಾಯಾರಿಕೆಯ ಬಾಧೆಯನ್ನು ತಡೆದು ಯಾವಾಗ ಮೇಘೋದಯವಾಗುವುದೋ ಎಂದು ಕೊರಲನ್ನು ಮೇಲ್ಕಕೆತ್ತಿಕೊಂಡು ನಿರೀಕ್ಷಿಸುತ್ತಿರುವ ಚಾತಕಪಕ್ಷಿಯ ಕೊರಲ ಮೇಲೆ ಮೇಘವು ಅಗ್ನಿವೃಷ್ಟಿಯನ್ನು ಸುರಿಸಿದರೆ ಆಗ ಅದು ಏನು ಮಾಡಬಲ್ಲದು! ಕೆಸರಿನಲ್ಲಿ ಸಿಕ್ಕು ಬಿದ್ದಿರುವ ಗೋವು ತನ್ನನ್ನು ಎತ್ತಿ ರಕ್ಷಿಸುವ ನಾಥನು ಬಂದನೆಂದು ಸಂತೋಷಪಡುತ್ತಿರುವಷ್ಟರಲ್ಲಿ ಆತನು ಅದನ್ನು ಕೆಸರಿನಲ್ಲಿ ಮುಳುಗಿಸಿ ಬಿಟ್ಟರೆ ಆಗ ಅದು ಏನು ಮಾಡುವುದು! ಯಾರೊಡನೆ ಹೇಳಿಕೊಳ್ಳುವುದು! ನಿನ್ನನ್ನು ಆಶ್ರಯಿಸಿರುವ ನಮ್ಮ ಅವಸ್ಥೆಯೂ ಹಾಗೆಯೇ ಕಾಣುತ್ತದೆ, ಎಂದು ಹೇಳಿದನು.

ಭೀಮನ ಮಾತನ್ನು ಕೇಳಿ ಶ್ರೀಕೃಷ್ಣನು ಬಹಳವಾಗಿ ಸಂತೋಷಪಟ್ಟು ಉತ್ತೇಜನವನ್ನುಂಟುಮಾಡುತ್ತ ಭೀಮನನ್ನು ಕುರಿತು-ಎಲೈ ಭೀಮಸೇನನೇ ನಿನಗೆ ಮಂಗಳವಾಗಲಿ. ನಿನ್ನ ಮಾತಿನಿಂದ ನನ್ನ ಮನಸ್ಸು ಸಂತುಷ್ಟವಾಯಿತು. ನನ್ನನ್ನಾಲಿಂಗಿಸು. ಈ ದೊರೆಯು ಏತಕ್ಕಾಗಿ ಹೀಗೆ ಹೆದರಿ ಅಶ್ವಮೇಧವನ್ನು ಮಾಡಲೆಳಸುವನು? ಕೌರವರನ್ನೂ ಭೀಷ್ಮದ್ರೋಣ ಕರ್ಣಾದಿಗಳನ್ನೂ ಮಿತ್ರ ಬಾಂಧವರನ್ನೂ ತಾನು ಯುದ್ಧದಲ್ಲಿ ಕೊಂದ ಪಾಪವು ತನಗೆ ಸಂಘಟನೆಯಾಯ್ತೆಂದು ತಿಳಿದಿದ್ದರೆ ಆ ಪಾಪವನ್ನೆಲ್ಲ ನನ್ನ ಕೈಯಲ್ಲಿರಿಸಲಿ. ಅದನ್ನೆಲ್ಲ ನಾನು ನಾಶಮಾಡುವೆನು. ಅವನು ಶುದ್ಧನಾಗಲಿ, ಎಂದನು. ಭೀಮನು ಆ ಮಾತನ್ನು ಕೇಳಿ ಶ್ರೀಕೃಷ್ಣನೇ, ನಿನ್ನ ಕೈಯಲ್ಲಿ ಕೊಟ್ಟ ವಸ್ತುವು ಅತ್ಯಲ್ಪವಾಗಿದ್ದರೂ ಮಹತ್ತರವಾಗುವುದೆಂದು ಹೆದರಿ ದೊರೆಯು ತನ್ನ ಪಾಪವನ್ನು ನಿನ್ನ ಕೈಗೆ ಕೊಡನು. ಯಜ್ಞದಿಂದ ಬಂದ ಪುಣ್ಯವನ್ನು ನಿನಗೆ ಅರ್ಪಿಸುವನು. ನಾನು ಕುದುರೆಗಾಗಿ ಭದ್ರಾವತಿಗೆ ಹೋಗುತ್ತೇನೆ. ನಾನು ಬರುವವರೆಗೂ ದೊರೆಯ ರಕ್ಷಣೆಯು ನಿನ್ನದು. ದೊರೆಯು ಸುರಕ್ಷಿತನಾಗಿದ್ದರೆ ಎಲ್ಲ ಇಷ್ಟಾರ್ಥಸಿದ್ಧಿಯೂ ಆಗುವುದು. ಧರ್ಮವೂ ಉಂಟಾಗುವುದು. ಇದು ಸತ್ಯವು. ಪ್ರಾಣಿಗಳು ಪುಣ್ಯವಿಲ್ಲದಿದ್ದರೆ ಪ್ರಾಶಸ್ತ್ಯವನ್ನು ಪಡೆಯವು. ಎಲೈ ದೇವಕೀ ನಂದನಾ, ನಮ್ಮ ಸತ್ಕರ್ಮದಿಂದ ಬರುವ ಪುಣ್ಯವೆಲ್ಲವನ್ನೂ ನಮ್ಮ ಕೈಯಿಂದ ನೀನೇ ತೆಗೆದುಕೊ. ನಾನಾಗಲಿ ಧರ್ಮಜನಾಗಲಿ ಫಲಾಕಾಂಕ್ಷೆಯುಳ್ಳವರಲ್ಲ. ಶ್ರೀಹರಿಯನ್ನು ಬಿಟ್ಟು ವೈಕುಂಠಾದಿ ಪುಣ್ಯಲೋಕಗಳು ನಮಗೆ ಇಷ್ಟವೂ ಸುಖಪ್ರದವೂ ಆಗಲಾರವು. ಆದಕಾರಣ ಸರ್ವದಾ ನಿನ್ನ ಸಹವಾಸವೇ ನಮಗಿರಲಿ, ಎಂದು ಹೇಳಿದನು. ಬಳಿಕ ಯುಧಿಷ್ಠಿರನು ಹರ್ಷಗೊಂಡು ಶ್ರೀಕೃಷ್ಣನೊಡನೆ ಭೋಜನಮಾಡಿ ಮನೆಯಲ್ಲಿ ಸುಖದಿಂದ ನಿದ್ರಿಸಿದನು.

ಬೆಳಗಾಗುತ್ತಲೆ ಭೀಮನೂ ವೃಷಕೇತುವೂ ಮೇಘವರ್ಣನೂ ಕುಂತಿಗೂ ಧರ್ಮರಾಜನಿಗೂ ಕೃಷ್ಣನಿಗೂ ಉಳಿದವರಿಗೂ ನಮಸ್ಕರಿಸಿ ಸಂತೋಷದಿಂದ ಪ್ರಯಾಣ ಮಾಡಿದರು. ಭೀಮನಿಗೆ ಕುಂತೀದೇವಿಯು ಭಕ್ಷ್ಯಗಳನ್ನು ಬುತ್ತಿ ಕಟ್ಟಿಕೊಟ್ಟಳು. ತಾಯಿಯು ಕೈಮುಟ್ಟಿ ಕೊಟ್ಟರಲ್ಲದೆ ಮತ್ತೊಬ್ಬರ ಕೈಯಿಂದ ತೆಗೆದುಕೊಂಡರೆ ಭೀಮನಿಗೆ ತೃಪ್ತಿಯಾಗಲಾರದಾಗಿ ಆಕೆಯ ಕೈಯಿಂದ ತೆಗೆದುಕೊಂಡು ತಿಂದು ತೃಪ್ತನಾದನು. ಉಳಿದ ಬುತ್ತಿಯನ್ನು ಮೇಘನಾದನ ವಶಕ್ಕೆ ಕೊಟ್ಟು ಅರ್ಜುನನನ್ನು ಆಲಿಂಗಿಸಿ ಭೀಮನು-ಎಲೈ

ಪಾರ್ಥನೇ ದೊರೆಯನ್ನು ರಕ್ಷಿಸಿಕೊಂಡಿರು. ಬ್ರಾಹ್ಮಣರನ್ನು ಆದರಿಸು. ಕುದುರೆಯನ್ನು ತೆಗೆದುಕೊಂಡು ಮನೆಗೆ ನಾನು ಬಂದೆನೆಂದೇ ತಿಳಿ. ನಮ್ಮಲ್ಲಿ ಪ್ರಸನ್ನನಾದ ಕೃಷ್ಣನನ್ನು ನೋಡಿ ನನ್ನ ಮನಸ್ಸು ಸಂತುಷ್ಟವಾಗಿದೆ. ನನಗೆ ಸಹಾಯಕರಾಗಿ ಈ ಕಾರ್ಯಕ್ಕೆ ನನ್ನೊಡನೆ ಬರುವ ಇವರಿಬ್ಬರೂ ಸಂತೋಷದಿಂದಿರುವರು. ಶ್ರೀಕೃಷ್ಣನ ಸ್ಮರಣೆಯಿಂದ ಬಾಧೆಗಳೆಲ್ಲವೂ ಪರಿಹಾರವಾಗುವುವು, ಪಾಪವು ಓಡುವಂತೆ ಶತ್ರುಗಳು ಪಲಾಯನ ಮಾಡುವರು. ಶ್ರೀಕೃಷ್ಣನ ಅನುಗ್ರಹದಿಂದ ಸೇನಾಸಮೇತನಾದ ಯೌವನಾಶ್ವನು ಕುದುರೆಯೊಡನೆ ಸಿಕ್ಕಿದನೆಂದು ತಿಳಿ. ಈ ವಿಷಯದಲ್ಲಿ ನನಗೆ ಸಂದೇಹವಿಲ್ಲ, ಎಂದು ಹೇಳಿ ಭೀಮನು ವೃಷಕೇತು ಮೇಘವರ್ಣರೊಡನೆ ಭದ್ರಾವತಿಗೆ ಪ್ರಯಾಣ ಮಾಡಿ ಪೂರ್ವಾಭಿಮುಖವಾಗಿ ಹೊರಟನು. ಎರಡು ದಿನಗಳು ನಡೆದು ದೇಶಗಳನ್ನು ದಾಟಿ ಮೂರನೆಯ ದಿನ ಕೆಲವು ಮಂದಿ ಶೂರರೊಡನೆ ರಮ್ಯವಾದ ಆ ಪಟ್ಟಣವನ್ನು ಸೇರಿದನು.

ಸಾವಿರಾರು ವನಗಳಿಂದಲೂ, ತುಂಬಿದ ಸರೋವರಗಳಿಂದಲೂ ಶೋಭಿಸುತ್ತ ಯೌವನಾಶ್ವನಿಂದ ಪಾಲಿತವಾಗಿರುವ ರಮ್ಯವಾದ ಆ ಭದ್ರಾವತೀ ಪುರವನ್ನು ಭೀಮನು ಬೆಟ್ಟದ ಮೇಲೆ ನಿಂತು ನೋಡಿದನು. ಯೂಪಸ್ತಂಭಗಳು ಎಡೆಬಿಡದಂತಿದ್ದುವು. ಹೋಮ ಧೂಮವು ಮುಚ್ಚಿಕೊಂಡು ಮಾರ್ಗವು ಕಾಣಿಸದಂತಿದ್ದಿತು. ಧನುಷ್ಟಂಕಾರದಂತೆ ಹೊರಡುತ್ತಿರುವ ಗಂಭೀರವಾದ ವೇದಘೋಷದಿಂದ ಇತರ ಶಬ್ದಗಳು ಹೊರಕ್ಕೆ ಕೇಳಿಸದಂತಿದ್ದುವು. ರಮ್ಯವಾದ ತೋರಣಗಳಿಂದಲೂ ದೇವತಾಯತನಗಳಿಂದಲೂ ಮಂಟಪಗಳಿಂದಲೂ ಮರಗಳಿಂದಲೂ ಕೋಟೆಯ ಪ್ರಾಕಾರದಿಂದಲೂ ಕಂದಕದಿಂದಲೂ ಮೆರೆಯುತ್ತ, ಯಜ್ಞದಿಂದ ಮನೋಹರವಾಗಿರುವ ಆ ಪುರವನ್ನು ನೋಡಿ ಮೂವರು ಆನಂದಭರಿತರಾದರು. ಭೀಮನು ಅನೇಕ ಫಲಪುಷ್ಪ ವೃಕ್ಷಗಳಿಂದ ರಮ್ಯವಾದ ವನವನ್ನು ನೋಡಿದನು. ಸುಗುಣಗಳ ಭಾರದಿಂದ ನಮ್ರರಾಗಿರುವ ಸಜ್ಜನರಂತೆ ತಮ್ಮ ತಮ್ಮ ಗೊನೆಗಳ ಭಾರದಿಂದ ಬಗ್ಗಿರುವ ಬಾಳೆಯ ಮರಗಳು ಅಲ್ಲಿ ಶೋಭಿಸುತ್ತಿದ್ದುವು. ಸತ್ಪುರುಷರಿಂದ ವಂಶವು ಸರಳವಾಗಿಯೂ ಸುವೃತ್ತವಾಗಿಯೂ ದೀರ್ಘವಾಗಿಯೂ ಪ್ರಕಾಶಿಸುವಂತೆ, ಫಲಭರದಿಂದ ಕೂಡಿದ ತೆಂಗಿನಮರಗಳು ಕಂಗೊಳಿಸುತ್ತಿದ್ದುವು. ಅಲ್ಲಿಯ ಅಡಕೆಯ ಮರಗಳು ಫಲಭರಿತಗಳಾಗಿದ್ದು, ಜನಗಳು ಹೇಳಿದಂತೆ ಕೇಳುತ್ತ ಸಕಲ ಕಾರ್ಯಗಳನ್ನೂ ಮಾಡುತ್ತಿದ್ದುವು. ಪರರನ್ನು ತೃಪ್ತಿಗೊಳಿಸುವುದಕ್ಕಾಗಿ ಸರ್ವಾಂಗಗಳಲ್ಲಿಯೂ ಫಲಗಳನ್ನು ಯಾವಾಗಲೂ ಧರಿಸಿರುವ ಹಲಸಿನ ಮರಗಳು ಭೀಮನ ದೃಷ್ಟಿಗೆ ಗೋಚರವಾದುವು. ಸಂಕುಚಿತವಾದ ಫಲಗಳಿಂದಲೇ ಜನರ ಪಾಪ ಪರಿಹಾರಕಗಳಾದ ಸಾವಿರಾರು ಖರ್ಜೂರ ವೃಕ್ಷಗಳೂ, ತುಂಬಿದ ಬೀಜಗಳಿಂದ ಕೂಡಿ ಕೆಂಪಗೆ ಹೊಳೆಯುತ್ತ ಬಿರಿದು, ಗಿಳಿಗಳಿಗೆ ಆಶ್ರಯವಾಗಿರುವ ಹಣ್ಣುಗಳಿಂದ ದಾಳಿಂಬೆಯ ಗಿಡಗಳೂ ಜನಕ್ಕೆ ಹಿತಕರವಾಗಿದ್ದುವು. ಶ್ರೀಹರಿಯ ಸದ್ಗುಣಗಳನ್ನು ಸುಜನರು ಸೇವಿಸುವಂತೆ ಮಾವಿನ ಮರಗಳನ್ನು ಕೋಗಿಲೆ, ಸಾರಂಗ, ನವಿಲು ಮೊದಲಾದ ಪಕ್ಷಿಗಳು ಫಲಾಪೇಕ್ಷೆಯಿಂದ ಸೇವಿಸುತ್ತಿದ್ದವು. ಐದು ಭಾಗವಾಗಿ ಕಾಣುತ್ತಿರುವ ಸಿಪ್ಪೆಯುಳ್ಳ ಕಮರಿಕೆಯ ಹಣ್ಣುಗಳು ಹರಿನಾಮಗಳಂತೆ ಬಹು

ರುಚಿಯನ್ನುಂಟುಮಾಡುತ್ತಿರುವುವು. ಜಲಯಂತ್ರಗಳಿಂದ ಹರಿಯುತ್ತಿರುವ ಸರೋವರದ ನೀರು, ಅತಿಥಿಗಳನ್ನು ಸತ್ಕರಿಸುವನಂತೆ ಬಗೆ ಬಗೆಯ ವೃಕ್ಷಗಳನ್ನು ತೃಪ್ತಿಗೊಳಿಸುತ್ತಿರುವುದು. ದಾಳಿಂಬೆ, ಕಿತ್ತಿಳೆ, ನಿಂಬೆ, ನೆಲ್ಲಿ, ನೇರಿಳೆ, ಬೇವು, ಕಡಹ, ಬಾದಾಮಿ, ಹುಣಿಸೆ, ಎಲಚಿ ಮೊದಲಾದ ವೃಕ್ಷಗಳನ್ನೂ ಹೂ ಬಿಟ್ಟಿರುವ ಅಶೋಕ, ಸಂಪಗೆ, ನಾಗಕೇಸರ, ಪುನ್ನಾಗ, ಬಕುಳ, ಪಾದರಿ ಮೊದಲಾದ ಗಿಡಗಳನ್ನೂ, ತುಂಬಿ, ಗಿಳಿ, ನವಿಲು, ಸಾರಿಕೆ ಮೊದಲಾದವು ಧ್ವನಿಮಾಡುತ್ತ ಕುಳಿತಿರುವ ಚಿನ್ನದ ಕೇದಗೆ, ಜಾಜಿ, ಶತಪತ್ರಿ, ಸುಪುತ್ರಿ ಕರ್ಣಿಕೆ ಮೊದಲಾದ ಹೂಗಿಡಗಳನ್ನೂ ನೋಡಿ, ಭೀಮನು ಸುವಾಸನೆಯುಳ್ಳ ಆ ಹೂಗಿಡಗಳಿಂದ ಸಂತೋಷಭರಿತನಾದನು. ಆ ಮಹಾವನವನ್ನೂ ರಮ್ಯವಾದ ಆ ನಗರವನ್ನೂ ರತ್ನಗಳಿಂದಲೂ ಬೆಳ್ಳಿಯ ಕಲ್ಲುಗಳಿಂದಲೂ ಕಟ್ಟಿದುದಾಗಿಯೂ, ಅನೇಕ ಖಲಚರಗಳಿಗೆ ಆಶ್ರಯವಾಗಿಯೂ, ಶೀತಜಲವುಳ್ಳದಾಗಿಯೂ, ಶ್ರೀಹರಿಯ ಮನಸ್ಸಿನಂತೆ ನಿರ್ಮಲವಾಗಿಯೂ ಇರುವ, ಯಜ್ಞದ ಕುದುರೆಗೆ ನೀರನ್ನು ಕುಡಿಸುವ ದಿವ್ಯವಾದ ಸರೋವರವನ್ನೂ ವೀರನಾದ ವೃಷಕೇತುವಿಗೆ ತೋರಿಸಿ, ಎಲೈ ವೃಷಕೇತುವೇ-ಈಗ ನಾನು ಏನು ಮಾಡಲಿ. ಮಧ್ಯಾಹ್ನದಲ್ಲಿ ನೀರನ್ನು ಕುಡಿಯುವುದಕ್ಕಾಗಿ ಕುದುರೆಯು ಇಲ್ಲಿಗೆ ಬರುವುದು. ಬಲಿಷ್ಠರಾಗಿಯೂ ಯುದ್ಧದಲ್ಲಿ ಗಟ್ಟಿಗರಾಗಿಯೂ ಇರುವ ಯೋಧರು ಸುತ್ತಲೂ ಕಾವಲಿರುವರು. ಕೃಪಣನು ಧನವನ್ನು ಬಿಡದಂತೆ ಅವರು ಕುದುರೆಯನ್ನು ಬಿಡರು. ಕುದುರೆಯು ಇಲ್ಲಿಗೆ ಬರುವವರೆಗೂ ನಾವು ಮೂವರೂ ಗಿಡಬಳ್ಳಿಗಳಿಂದ ಮರೆಯಾಗಿರುವ ಈ ಪರ್ವತದಲ್ಲಿರೋಣ. ಕುದುರೆಯನ್ನು ಅವರು ಹೇಗೆ ಕಾದಿದ್ದರೂ ನಾವು ಅದನ್ನು ಗ್ರಹಿಸುವುದರಲ್ಲಿ ಸಂದೇಹವಿಲ್ಲ. ನಾನು ಮೊದಲು ಹೋಗಿ ಮಧ್ಯೆ ನಿಂತು ಯುದ್ಧಕ್ಕೆ ಆರಂಭಿಸುವೆನು. ನನ್ನ ಬೆಂಗಾವಲಾಗಿ ನೀವಿಬ್ಬರೂ ಇರಿ. ಈ ಆಲೋಚನೆಯೇ ಸುಖಕರವಾಗಿಯೂ ಕೀರ್ತಿಪ್ರದವಾಗಿಯೂ ಇರುವುದು ಎಂದು ಹೇಳಿದನು.

# ಯೌವನಾಶ್ವ ವೃಷಕೇತು ವಾಕ್ಯವರ್ಣನ

ವೃಷಕೇತುವು ಭೀಮನ ಮಾತನ್ನು ಕೇಳಿ-ಈ ಯೌವನಾಶ್ವನಿಗೆ ಹತ್ತು ಅಕ್ಷೌಹಿಣೀ ಸೈನ್ಯವಿರುವುದೆಂದು ತಿಳಿಯಬರುತ್ತದೆ. ಅದರಲ್ಲಿ ಕೆಲವರು ಅಶ್ವರಕ್ಷಾರ್ಥವಾಗಿ ಬರುವರು. ನಿನ್ನ ಬಾಹುಬಲದಿಂದ ಅವರೆಲ್ಲರೂ ಯುದ್ಧದಲ್ಲಿ ನಾಶವಾಗುವರು. ಎಲೈ ಭೀಮನೇ, ಗಂಗಾನದಿಯ ದಡಕ್ಕೆ ಬಂದ ಜನರ ಪಾಪ ಸಮೂಹದಂತೆ ನಿನ್ನ ಶತ್ರುಗಳು ನಾಶವನ್ನು ಪಡೆಯುವರು. ಕಾಲಕೂಟವೆಂಬ ವಿಷವು ಶಿವನೆದುರಿಗೆ ಬರುವವರೆಗೂ ತಾಪಕರವಾಗಿಯೂ ಕ್ರೂರವಾಗಿಯೂ ಇರುವುದಲ್ಲದೆ ಬಂದಮೇಲೆ ತಾಪಕರವಾಗಲಾರದು. ಕಾಮುಕರಾದ ಪ್ರಾಣಿಗಳು ಬ್ರಹ್ಮವಸ್ತು ವಿಚಾರವಿಲ್ಲದಿರುವಾಗ ವಿಷಯಬದ್ಧರಾಗುವರಲ್ಲದೆ ಬಳಿಕ ಹಾಗೆ ಬದ್ಧರಾಗರು. ವಾಸುದೇವನ ಸ್ಮರಣೆಯು ಎಲ್ಲಿಯುವರೆಗೂ ರುಚಿಸುವುದಿಲ್ಲವೋ ಅಲ್ಲಿಯವರೆಗೆ ಪ್ರಾಣಿಗಳಿಗೆ ಜನನ ಮರಣಗಳುಂಟಾಗುವುವು. ಪಿತೃಗಳು ಬಂಧದಲ್ಲಿ ಸಿಕ್ಕಿ ನರಕದಲ್ಲಿ ಬಿದ್ದಿರುವುದು, ತಮ್ಮ ವಂಶದಲ್ಲಿ ಹುಟ್ಟಿದ ಯೋಗ್ಯನಾದ ಮಗನು ಗಯೆಗೆ ಹೋಗಿ ಪಿಂಡಪ್ರದಾನ ಮಾಡುವವರೆಗಷ್ಟೆ. ಧರ್ಮರಾಜನ ನಿಮಿತ್ತವಾಗಿಯೂ ಶ್ರೀಕೃಷ್ಣನ ಪ್ರೀತ್ಯರ್ಥವಾಗಿಯೂ ಮಾಡುವ ಈ ಅಶ್ವಗ್ರಹಣಕಾರ್ಯವು ಸಿದ್ಧಿಸುವುದರಲ್ಲಿ ಸಂದೇಹವಿಲ್ಲ. ಭೃಂಗಗಳು ಮುತ್ತಿಕೊಂಡಿರುವ ಮದಿಸಿದ ಆನೆಗಳೂ ಹೆಣ್ಣಾನೆಗಳೂ ಅವುಗಳ ಮರಿಗಳೂ ಅಂಜನ ಪರ್ವತಗಳಂತೆ ಇಲ್ಲಿ ಬರುತ್ತಿರುವುವು. ನೋಡು, ಇವುಗಳ ಮೇಲೆ ಮಾವಟಿಗರು ಕುಳಿತಿರುವರು, ಕಾಮುಕರಾದ ಪುರುಷರು ಸ್ತ್ರೀಯರ ಪ್ರೇಮವೆಂಬ ಜಲದಲ್ಲಿ ಹೇಗೆ ಮುಳುಗಿ ತೇಲುತ್ತಿರುವರೋ ಹಾಗೆ ಈ ಆನೆಗಳು ಈ ಸರೋವರದ ನೀರಿನಲ್ಲಿ ಮುಳುಗಿ ತೇಲುತ್ತಿರುವುವು. ಇವು ನಿರ್ಮಲವಾದ ಜಲವನ್ನು ಪಾನಮಾಡವು. ಕೊಳೆಯ ನೀರನ್ನೇ ಕುಡಿಯುವುವು. ಇವು ತಾವು ಯಾವ ನೀರನ್ನು ಕುಡಿದು ಜೀವಿಸುತ್ತಿರುವುವೋ ಆ ನೀರನ್ನೇ ತಮ್ಮ ಕಪೋಲ ಪ್ರದೇಶದಿಂದ ಬೀಳುತ್ತಿರುವ ಕೆಂಪು ಬಣ್ಣದ ಚುಂದ್ರದಿಂದ ಕೊಳೆಯಾಗಿ ಮಾಡುತ್ತಿರುವುವು. ಭ್ರಮರಗಳು ಮದಹೀನವಾದ ಗಜಕುಂಭಸ್ಥಳಗಳನ್ನು ಬಿಟ್ಟು ಕಮಲವನ್ನು ಸೇರಿದುವು. ಮಲಿನರಿಗೆ ಸ್ನೇಹವೆಲ್ಲಿಯದು! ಹಂಸಗಳು, ತಾವರೆಯ ದಂಟುಗಳನ್ನು ತೆಗೆದುಕೊಂಡು ಪ್ರಾಣಿಗಳೆಲ್ಲವೂ ಸಮಾನವೆಂದು ಸರ್ವಸಮಬುದ್ಧಿಯಿಂದ ತಿಳಿದಿವೆಯೋ ಎಂಬಂತೆ ತುಂಬಿಗಳಿಗೆ ಕೊಡುತ್ತಿರುವುವು. ಈ ಸರೋವರದಲ್ಲಿ ಮೀನುಗಳು, ಬಡವನು ನಿಧಿಯನ್ನು ಪಡೆದಂತೆ ನೀರನ್ನು ಆಶ್ರಯಿಸಿಕೊಂಡಿರುವುವು. ಹೆಣ್ಣು ಗಂಡು ಚಕ್ರವಾಕಗಳು ಪರಸ್ಪರ ಪ್ರೇಮಭಾವದಿಂದ ಕೂಡಿಕೊಂಡಿರುವುವು. ಮಹಾಬಲಶಾಲಿಯಾದ ಭೀಮಸೇನನೇ? ಹಿಂದೆ ಹಸುವಿನ ಹಾಲಿನಂತೆಯೂ ಮಂಜಿನಂತೆಯೂ ಬಿಳುಪಾದ ಕುದುರೆಗಳು ಮಹಾರಥರ ಕಾವಲಿನೊಡನೆ ವೇಗವಾಗಿ ಬರುತ್ತಿರುವುವು. ಕುದುರೆಗಳಿಂದ ಬಹಳವಾಗಿ ಧೂಳಿಯೆದ್ದಿದೆ, ನೋಡು. ವಾದ್ಯಗಳ ಘೋಷವು ಆಕಾಶವನ್ನು ವ್ಯಾಪಿಸುತ್ತಿದೆ. ಧ್ವಜಪಟಗಳು ಯಮನ ನಾಲಗೆಯಂತೆ ಮೇಲೆ ಚಲಿಸುತ್ತಿರುವುವು. ಯೌವನಾಶ್ವನು ಬರುವನು, ಸಂದೇಹವಿಲ್ಲ. ಧೀರರಾದ ಶೂರರ ಗುಂಪು ಸಾವಿರಾರು ಕಾಣಬರುತ್ತವೆ. ಇಲ್ಲಿ ಕಾಣಿಸುತ್ತಿರುವ ಗೃಧ್ರಧ್ವಜವು

ಯಾರದೋ ತಿಳಿಯದು. ಮತ್ತೊಂದು ಧ್ವಜದಲ್ಲಿ ಗಿಣಿಯು ಪ್ರಕಾಶಿಸುತ್ತಿರುವುದು. ದುಂದುಭಿ ಧ್ವನಿಯಾಗುತ್ತಿರುವುದು. ಯುದ್ಧ ವಿಶಾರದರಾದ ಬಹುಮಂದಿ ಯೋಧರು ಬರುತ್ತಿರುವರು. ಹೀಗೆ ಕಾಣಿಸುವುದರಿಂದ ಶೂರರು ಬರುತ್ತಿರಬಹುದು, ಎಂದು ವೀರನಾದ ವೃಷಕೇತುವು ಹೇಳುತ್ತಿರಲಾಗಿ ಮಧ್ಯಾಹ್ನದಲ್ಲಿ ನೀರು ಕುಡಿಯುವುದಕ್ಕಾಗಿ ಯೌವನಾಶ್ವನ ಕುದುರೆಗಳು ಸಾವಿರಾರು, ಬಗೆಬಗೆಯ ಬಣ್ಣದಿಂದ ಕೂಡಿ ಅಲ್ಲಿಗೆ ಬಂದುವು. ಧ್ರುವಕವೆಂಬ ಹತ್ತು ಸುಳಿಗಳುಳ್ಳ ಆ ಕುದುರೆಗಳೊಂದೊಂದನ್ನು ಮೂರು ಮೂರು ಮಂದಿ ಹಿಡಿದಿದ್ದರು. ಬಲಿಷ್ಠರಾದ ಸಾದಿಗಳು ಅವನ್ನು ಶಾಸ್ತ್ರೋಕ್ತವಾಗಿ ಶಿಕ್ಷಿಸಿದ್ದರು. ಅಂದವಾದ ಕೊರಲು, ಚಲಿಸುತ್ತಿರುವ ಮೂಗುಗಳು ಉಳ್ಳ ಆ ಕುದುರೆಗಳು ಆಸ್ಕಂದಿತ ಮೊದಲಾದ ಐದು ಬಗೆಯ ಗಮನ ವಿಶೇಷಗಳಿಂದ ಬರುತ್ತಿರಲು ಅವುಗಳ ಗೊರಸುಗಳು, ಬ್ರಾಹ್ಮಣಮುಖದಿಂದ ಪದಕ್ರಮವು ಹೊರಡುವಂತೆ, ಅವುಗಳ ಮುಖದಿಂದ ಹೊರಟುಬರುತ್ತಿದೆಯೋ ಎಂಬಂತೆ ಕಾಣಿಸುತ್ತಿದ್ದಿತು. ನವಿಲು, ತಿತ್ತಿರಿ, ಒಂಟೆ, ಮುಂಗುಸಿ ಇವುಗಳ ನಡಿಗೆಯಂತೆ ನಡಿಗೆಯುಳ್ಳ ಆ ಕುದುರೆಗಳು ಸರೋವರಕ್ಕೆ ಬರುತ್ತಿದ್ದುವು. ಅವು ಕುತ್ತಿಗೆಯುದ್ದದ ನೀರಿಗಿಳಿದು ಸೊರ್‍ರೆಂದು ಶಬ್ದಮಾಡುತ್ತ ನೀರನ್ನು ಕುಡಿದುವು. ಹೀಗೆ ಬಂದು ಬಂದು ನೀರನ್ನು ಕುಡಿದು ಹೋಗುತ್ತಿರುವ ಕುದುರೆಗಳನ್ನೆಲ್ಲವನ್ನೂ ನೋಡಿ ಭೀಮನು ವೃಷಕೇತುವನ್ನು ಕುರಿತು-ಅಯ್ಯಾ ಬಹು ಕುದುರೆಗಳು ಬಂದುವು. ನಾವು ಮೂವರೂ ಯಾವ ಕುದುರೆಯ ಉದ್ದೇಶದಿಂದ ಇಲ್ಲಿಗೆ ಬಂದಿರುವೆವೋ ಅದನ್ನು ಕಾಣಲೇ ಇಲ್ಲ. ಅರಮನೆಯಲ್ಲಿಯೇ ಕಟ್ಟಿ ಅದಕ್ಕೆ ನೀರು ಕುಡಿಸುವರೋ ಏನೋ! ಹೇಗೆ ಮಕ್ಕಳಿಲ್ಲದವರಿಗೆ ಈ ಲೋಕದಲ್ಲಿ ಸುಖವುಂಟಾಗದೋ, ಔದಾರ್ಯವಿಲ್ಲದವರಿಗೂ ಬ್ರಹ್ಮಚಾರಿಗಳಿಗೂ ಹೇಗೆ ಕಾಮಗಳು ಸಿದ್ಧಿಸುವುದಿಲ್ಲವೋ, ಸ್ತ್ರೀಜಿತರಿಗೆ ಬಂಧು ಸಮಾಗಮವು ಹೇಗೆ ಸಹಿಸದೋ, ಮಂತ್ರಾಲೋಚನೆಯಿಲ್ಲದ ದೊರೆಗೆ ಹೇಗೆ ರಾಜ್ಯವು ಸ್ಥಿರವಲ್ಲವೋ, ಪುಣ್ಯವಿಲ್ಲದವರಿಗೆ ಕೀರ್ತಿಯೂ, ಅಪವಾದವು ಪ್ರಾಪ್ತವಾದವರಿಗೆ ಸುಖವೂ, ವಿಷ್ಣುಭಕ್ತಿಹೀನರಿಗೆ ಮೋಕ್ಷವೂ, ಶಂಕರಾರಾಧನೆ ಮಾಡದವರಿಗೆ ವಿಭವವೂ ಹೇಗೆ ಉಂಟಾಗದೋ ಹಾಗೆ ಕುದುರೆಯಿಲ್ಲದೆ ಹಸ್ತಿನಾಪುರಕ್ಕೆ ನಾವು ಹೋಗುವುದು ಯುಕ್ತವಲ್ಲ ಎಂದು ಹೇಳಲು, ಅದನ್ನು ಕೇಳಿ ವೃಷಕೇತುವು ಮಾತನಾಡುವಷ್ಟರಲ್ಲಿ ಆ ಕುದುರೆಯು ಬಂದಿತು.

ಅದರ ಸುತ್ತಲೂ ರಕ್ಷಣೆಗಾಗಿ ರಥಿಕರೂ ಮದಿಸಿದ ಆನೆಗಳೂ ಕುದುರೆಗಳ ಮೇಲೆ ಕುಳಿತಿರುವ ಸಾದಿಗಳೂ ಕಾಲ್ಬಲವೂ ನೆರೆದಿದ್ದುವು. ಆ ಕುದುರೆಗೆ ಚಾಮರಗಳನ್ನೂ ಕಿರುಗಂಟೆಗಳನ್ನೂ ಕಟ್ಟಿ ಚಾಮರಗಳಿಂದ ಅದನ್ನು ಬೀಸುತ್ತಿದ್ದರು. ಸ್ತ್ರೀಯರು ಚಂದನ ಗಂಧ ಕುಂಕುಮಗಳನ್ನು ತಮ್ಮ ಕೈಯಿಂದ ಅದಕ್ಕೆ ಲೇಪಿಸಿದ್ದರು. ಹೂವಿನಿಂದಲೂ ಪುಷ್ಪಹಾರಗಳಿಂದಲೂ ಅದನ್ನು ಅಲಂಕರಿಸಿದ್ದರು. ಕೆಲವರು ಮಂಗಳಕರವಾದ ಜಯಧ್ವನಿ ಮಾಡುತ್ತ ಮುಂದೆ ನಡೆಯುತ್ತಿದ್ದರು. ಕೃಷ್ಣಾಗರು ಮೊದಲಾದ ಧೂಪಗಳ ಹೊಗೆಯು ಅದರ ಸುತ್ತಲೂ ಸುತ್ತಿಕೊಂಡಿದ್ದಿತು. ಇಬ್ಬರು ಅದನ್ನು ಹಿಡಿದುಕೊಂಡು ಬರುತ್ತಿದ್ದರು.

ಅನೇಕ ವಾದ್ಯ ಧ್ವನಿಯಿಂದಲೂ ವೀರರ ಗರ್ಜನೆಯಿಂದಲೂ ಕುದುರೆಗಳ ಹೇಷಿತಗಳಿಂದಲೂ ಆನೆಗಳ ಬೃಂಹಿತಗಳಿಂದಲೂ ಮೆರೆಯುತ್ತ ಆ ಕುದುರೆಯು ಬಹು ಪ್ರೀತಿಯಿಂದ ಭೂಮಿಯನ್ನು ಗೊರಸಿನ ತುದಿಯಿಂದಲೂ ಮೆಟ್ಟದೆ ನಡೆಯುತ್ತಿರುವುದೋ ಎಂಬಂತೆ ಬರುತ್ತಿದ್ದಿತು. ಮುಂದೆ ತನಗಾಗುವ ಶ್ರೀಕೃಷ್ಣದರ್ಶನದ ಪುಣ್ಯದಿಂದಲೇ ಇದು ಧೂಪ ದೀಪಾದಿ ಪೂಜಾ ಸಾಮಗ್ರಿಯಿಂದ ಪೂಜೆಯನ್ನು ಪಡೆಯುತ್ತಿರುವುದೆಂಬುದಕ್ಕೆ ಸಂದೇಹವಿಲ್ಲ ಎಂದು ಹೇಳುತ್ತ ಭೀಮಪೌತ್ರನಾದ ಮೇಘವರ್ಣನು ಮಹಾರಥದಿಂದ ರಕ್ಷಿತವಾಗಿ ಬರುತ್ತಿದ್ದ ಆ ಕುದುರೆಯನ್ನು ಹಿಡಿಯಲು ಮನಸ್ಸು ಮಾಡಿದನು.

ಅವನ ಕುತೂಹಲವನ್ನು ನೋಡಿ ಭೀಮಸೇನನು-ಎಲೈ ಬಾಲನೇ ನೀನು ಏನು ಮಾಡಬೇಕೆಂದಿರುವೆ, ನನ್ನೆದುರಿಗೆ ಸತ್ಯವಾಗಿ ಹೇಳು ಎಂದು ಕೇಳಲು, ಆಗ ರಾಕ್ಷಸನಾದ ಮೇಘವರ್ಣನು-ಎಲೈ ಭೀಮಸೇನನೇ, ನಾನು ನಿನ್ನ ಅಪ್ಪಣೆಯನ್ನು ಪಡೆದು ಈ ವೀರರೆಲ್ಲರೂ ನೋಡುತ್ತಿರುವ ಹಾಗೆಯೇ ಕುದುರೆಯನ್ನು ಬೇಗನೆ ತೆಗೆದುಕೊಂಡು ಹೋಗಿ ಪರ್ವತದ ಮೇಲೆ ಬಾಲಕನಂತೆ ಇರುತ್ತೇನೆ. ಇವರೊಬ್ಬರೂ ನನಗೆ ಲಕ್ಷ್ಯವಿಲ್ಲ; ಇದೇ ನನ್ನ ಅಭಿಪ್ರಾಯವು ಎಂದು ಹೇಳಿ, ಬಳಿಕ ಆ ಕುದುರೆಯನ್ನು ನೋಡಿ-ಎಲೈ ಸ್ವಾಮಿಯೇ ಭೃತ್ಯನಿರುವಾಗ ಸ್ವಾಮಿಯು ಯುದ್ಧ ಮಾಡುವುದೇಕೆ? ನನಗೆ ಅಪ್ಪಣೆಯನ್ನು ಕೊಡು, ನೀವಿಬ್ಬರೂ ನೋಡುತ್ತಿರುವ ಹಾಗೆಯೇ ಯೌವನಾಶ್ವನನ್ನೂ ಅವನ ಮಗನನ್ನೂ ಹಿಡಿದು ಕಟ್ಟಿ ತರುವೆನು, ಅಥವಾ ಈ ಮಹಾಶತ್ರುವನ್ನು ಕ್ಷಾತ್ರಧರ್ಮದಿಂದ ಯುದ್ಧದಲ್ಲಿ ಗೆದ್ದು ಕುದುರೆಯನ್ನು ತಾರದೆ ಹೋದರೆ ನಾನು ನಿನ್ನ ಮಗನೇ! ಆ ಕುದುರೆಯನ್ನು ತಂದು ಮರಕ್ಕೆ ಕಟ್ಟಿಹಾಕುವೆನು, ಎಂದು ಹೇಳಿ ಅಲ್ಲಿಂದ ಹೊರಟನು. ಹೀಗೆ ಹೇಳಿ ಮೇಘವರ್ಣನು ಬೆಟ್ಟದಿಂದ ಹಾರಿ ರಾಕ್ಷಸಮಾಯೆಯನ್ನು ಸೃಜಿಸಿದನು. ಪ್ರಳಯ ಕಾಲದಂತೆ ಮೇಘಗಳು ಆಕಾಶದಲ್ಲಿ ತುಂಬಿಕೊಂಡುವು. ಗಾಢಾಂಧಕಾರವು ಕವಿಯಿತು. ಮಿಂಚು ಗುಡುಗುಗಳು ಅವಿಚ್ಛಿನ್ನವಾಗಿ ಹುಟ್ಟುತ್ತಿದ್ದುವು. ಆ ಮೇಘಮಂಡಲ ಮಧ್ಯದಲ್ಲಿ ಮೇಘವರ್ಣನು ಅಡಿಗಡಿಗೆ ಸಿಂಹನಾದ ಮಾಡುತ್ತಿದ್ದನು. ದಿಕ್ಕುಗಳೆಲ್ಲವೂ ವ್ಯಾಕುಲ ವಾಯಿತು. ದೇವಾಸುರ ಮನುಷ್ಯರು ಭಯಪಟ್ಟರು. ಯಾರಿಗೂ ಏನೂ ತೋರಲಿಲ್ಲ. ಆಕಾಶಮಂಡಲವು ಮೇಘನಾದದಿಂದ ವ್ಯಾಪ್ತವಾಯಿತು. ದೇವವಿಮಾನಗಳೆಲ್ಲವೂ ಕೆಳಕ್ಕೆ ಬಿದ್ದುಹೋದುವು. ಇಷ್ಟರಲ್ಲಿ ಒಬ್ಬ ದೇವತಾಪುರುಷನು ಬೇಗನೆ ಓಡಿಬಂದು ಸಭಾಮಧ್ಯದಲ್ಲಿ ಕುಳಿತಿದ್ದ ಇಂದ್ರನನ್ನು ಕುರಿತು ದುಃಖದಿಂದ-ಎಲೈ ಸ್ವಾಮಿಯೇ, ನಿನಗೊದಗಿರುವ ಶುಭಾಶುಭಗಳನ್ನು ನೀನು ವಿಚಾರಿಸುವುದಿಲ್ಲ. ಯಾವನೋ ಒಬ್ಬ ರಾಕ್ಷಸನು ಇಲ್ಲಿಗೆ ಬಂದು ಲೋಕವನ್ನೆಲ್ಲ ಬಾಧೆಪಡಿಸುತ್ತಿರುವನು. ಲೋಕವನ್ನು ನಾಶಪಡಿಸಬೇಕೆಂದು ಘೋರವಾದ ಮಾಯೆಯನ್ನು ಬೀರಿರುವನು. ನೀನು ಲೋಕ ರಕ್ಷಣಾರ್ಥವಾಗಿ ಅವನನ್ನು ಕೊಲ್ಲು ಎಂದು ಹೇಳಲು, ಆ ಮಾತನ್ನು ಕೇಳಿ ಇಂದ್ರನು ಕೋಪದಿಂದ ಅದರುತ್ತಿರುವ ತುಟಿಯುಳ್ಳವನಾಗಿ, ಬಂದಿರುವವನು ಯಾವನು? ತಿಳಿದು ಬನ್ನಿ ಎಂದು ದೇವತೆಗಳಿಗೆ ಹೇಳಿದನು.

ಆಗ ದೇವತೆಗಳು ಬಂದು ದೂರದಲ್ಲಿ ನಿಂತು ಅವನನ್ನು ನೋಡಿ ಒಬ್ಬ ದೂತನನ್ನು ಕರೆದು ಅವನು ಯಾರೆಂಬುದನ್ನು ವಿಚಾರಿಸಿ ತಿಳಿದುಕೊಂಡು ಬಾ, ಎಂದು ಹೇಳಿ ಕಳುಹಿಸಿದರು. ಅವನು ಮೇಘವರ್ಣನ ಬಳಿಗೆ ಬಂದು- ಎಲೈ ವೀರನೇ ನೀನು ಯಾರು? ಏತಕ್ಕಾಗಿ ಬಂದಿದ್ದೀಯೆ? ನಿನ್ನನ್ನು ನೋಡಿ ದೇವತೆಗಳೆಲ್ಲರೂ ಭಯಪಟ್ಟು ನನ್ನನ್ನು ನಿನ್ನ ಬಳಿಗೆ ಕಳುಹಿಸಿರುವರು. ನಿನ್ನಿಷ್ಟವೇನು? ಸತ್ಯವಾಗಿ ನನ್ನೊಡನೆ ಹೇಳು, ಎಂದು ಕೇಳಿದನು. ಅದಕ್ಕೆ ಅವನು- ಅಯ್ಯಾ! ದೇವತೆಗಳು ಹೆದರಬೇಕಾದುದಿಲ್ಲ. ನಾನು ಭೀಮಸೇನನ ಮೊಮ್ಮಗನು. ಹಿಡಿಂಬೆಯ ಮಗನ ಮಗನು. ನನ್ನ ಹೆಸರು ಮೇಘವರ್ಣನೆಂಬುದು. ಯೌವನಾಶ್ವನ ಬಳಿಯಲ್ಲಿರುವ ಕುದುರೆಯನ್ನು ಯಜ್ಞಸಹಾಯಾರ್ಥವಾಗಿ ತೆಗೆದುಕೊಂಡು ಹೋಗುವೆನು. ಧರ್ಮರಾಜನ ಯಜ್ಞಸಿದ್ಧಿಗಾಗಿ ನಾನು ಇಷ್ಟು ಸಂಭ್ರಮಪಡುತ್ತಿರುವೆನು ಎಂದು ಹೇಳಲು, ಅದನ್ನು ಕೇಳಿ ಆ ದೇವದೂತನು ಮನಸ್ಸಿನಲ್ಲಿ ಆನಂದಭರಿತನಾಗಿ ಧರ್ಮರಾಜನಿಗಾಗಿ ನಡೆದಿರುವ ಉತ್ತಮವಾದ ಆ ವೃತ್ತಾಂತವನ್ನು ಇಂದ್ರನಿಗೆ ಹೇಳಿದನು. ಅದನ್ನು ಕೇಳಿ ಇಂದ್ರಾದಿ ದೇವತೆಗಳು ಬಂದು ಮೇಘವರ್ಣನ ಯುದ್ಧಕೌಶಲವನ್ನು ನೋಡುತ್ತಿರಲು, ಅವನು ಆಕಾಶದಲ್ಲಿದ್ದು ಯಜ್ಞಾಶ್ವವನ್ನಪಹರಿಸಬೇಕೆಂದು ಅದು ಇರುವ ಸ್ಥಳಕ್ಕೆ ಬಂದು ಸುತ್ತಲೂ ಇದ್ದ ಕಾವಲುಗಾರರನ್ನು ಮೋಹಗೊಳಿಸಿ ನೆಲಕ್ಕೆ ಕೆಡಹಿ ಗಾಳಿಯಿಂದ ಬಹಳವಾಗಿ ಧೂಳಿಯನ್ನೆಬ್ಬಿಸಿದನು. ಸೈನಿಕರು ಭಯಗ್ರಸ್ತರಾದರು. ಕೆಲವರು ಆಯುಧಪಾಣಿಗಳಾಗಿ ದಿಕ್ಕು ದಿಕ್ಕಿಗೆ ಓಡಿದರು. ಹೀಗೆ ಬಿರುಗಾಳಿಯಿಂದಲೂ ಕಲ್ಲು ಮಳೆಯಿಂದಲೂ ಎಲ್ಲವನ್ನೂ ವ್ಯಾಕುಲಪಡಿಸಿ ಸಿಂಹನಾದ ಮಾಡುತ್ತ ಆ ಮೇಘವರ್ಣನು ಕುದುರೆಯನ್ನು ಹಿಡಿದುಕೊಂಡು ಆಕಾಶದಲ್ಲಿ ಹಾರಿಹೋಗಲು ನೀಲಮೇಘದಂತಿರುವ ಅವನನ್ನು ಎಲ್ಲರೂ ಕಂಡರು. ಕುಂಡಲಾಂಗದ ಕಿರೀಟಾದಿಗಳಿಂದ ಪ್ರಕಾಶಿಸುತ್ತ ಆಕಾಶದಲ್ಲಿರುವ ಮೇಘವರ್ಣನನ್ನು ನೋಡಿ ಅಲ್ಲಿದ್ದ ವೀರರು, ಇವನು ಯಾರು? ಎಲ್ಲಿಂದ ಬಂದನು? ಕಡಿ ! ಇರಿ ! ಎಂದು ಕೂಗಿಕೊಂಡರು. ಕುದುರೆಯನ್ನು ತೆಗೆದುಕೊಂಡು ಹೋಗುತ್ತಿರುವ ಅವನ ಮೇಲೆ ದೇವತೆಗಳು ಪುಷ್ಪವೃಷ್ಟಿಯನ್ನು ಸುರಿಸಿ-ಎಲೈ ಮೇಘವರ್ಣನೇ, ನಿನ್ನಂತಹ ಧರ್ಮಸಹಾಯಕನಾದ ಮೊಮ್ಮಗನು ಹುಟ್ಟಿದುದರಿಂದ ತಮ್ಮಂದಿರೊಡನೆ ಧರ್ಮರಾಜನು ಕೃತಕೃತ್ಯನಾದನು, ಎಂದು ಸ್ತುತಿಸುತ್ತ ತಂತಮ್ಮ ಮನೆಗಳಿಗೆ ಹೊರಟುಹೋದರು.

ಮೇಘನಾದನು ಆ ಕುದುರೆಯನ್ನು ತೆಗೆದುಕೊಂಡು ಬೇಗನೆ ಆಕಾಶದಲ್ಲಿ ಬರುತ್ತಿರುವುದನ್ನು ನೋಡಿ ಭೀಮ ವೃಷಕೇತುಗಳು ಹರ್ಷಿತರಾಗಿ ಅಡಿಗಡಿಗೆ ಸಿಂಹನಾದ ಮಾಡುತ್ತಿದ್ದರು. ಅಷ್ಟರಲ್ಲಿ ಕುದುರೆಯು ಇಲ್ಲದಿರುವುದನ್ನು ನೋಡಿ ಯೌವನಾಶ್ವನ ಸೇನೆಯಲ್ಲಿ ಗದ್ದಲವುಂಟಾಯ್ತು. ಭಟರು ಒಬ್ಬರಿಗೊಬ್ಬರು ಹೊಡೆದಾಡಿದರು. ಈ ವೃತ್ತಾಂತವೆಲ್ಲವೂ ದೊರೆಗೆ ತಿಳಿಯಿತು. ಕುದುರೆಯನ್ನು ಅಪಹರಿಸಿದುದನ್ನು ಕೇಳಿ ದೊರೆಯು ದುಃಖಿಸುತ್ತ ಕೋಪಾವಿಷ್ಟನಾಗಿ ಬೇಗನೆ ರಾಜಪುತ್ರರರೊಡನೆ ಅಲ್ಲಿಗೆ ಬಂದು, ನನ್ನ ಕುದುರೆಯನ್ನು ಯಾವನು ಅಪಹರಿಸಿದನೋ ಅವನ ಆಯುಃಪ್ರಮಾಣವು ಮುಗಿಯಿತು.

ಅವನು ದೇವತೆಗಳಲ್ಲಿಯಾಗಲಿ ಮನುಷ್ಯರಲ್ಲಿಯಾಗಲಿ ಯಾರಾಗಿದ್ದರೂ ಅವನನ್ನು ಯಮಪುರಕ್ಕೆ ಕಳುಹಿಸುವೆನು, ಎಂದು ಹೇಳಿ ಕ್ರೋಧಾವೇಶದಿಂದ ಕಾಲಾಂತಕನಿಗೆ ಸಮಾನಗಳಾದ ದಿವ್ಯರಥಗಳನ್ನು ತರಿಸಿದನು. ರಥಿಕರು ದೊರೆಗೆ ನಮಸ್ಕರಿಸಿ, ಸ್ವಾಮಿ? ಯಾರನ್ನು ಕೊಲ್ಲೋಣ, ಬೇಗನೆ ಅಪ್ಪಣೆಯಾಗಬೇಕು, ಎಂದು ಕೇಳಿದರು. ಅದಕ್ಕೆ ದೊರೆಯು-ಎಲೈ ವೀರರೇ, ಯಾರೋ ನಮ್ಮ ಕುದುರೆಯನ್ನಪಹರಿಸಿಕೊಂಡು ಆಕಾಶದಲ್ಲಿ ಹೋಗುತ್ತಿರುವರು, ನಿಲ್ಲದೆ ಬೇಗನೆ ಅವರನ್ನು ಬೆನ್ನಟ್ಟಿ ಓಡಿರಿ, ಎಂದನು. ಅದನ್ನು ಕೇಳಿ ನಾಲ್ಕು ಸಾವಿರ ಮಂದಿ ಯೋಧರು ಥಟ್ಟನೆ ಆಕಾಶಕ್ಕೆ ನೆಗೆದು ಮೇಘವರ್ಣನನ್ನು ಅಡ್ಡಗಟ್ಟಿ ಅವನ ಮೇಲೆ ಬಾಣವರ್ಷವನ್ನು ಸುರಿಸಿದರು. ಆ ವೀರರನ್ನು ನೋಡಿ ನಸುನಕ್ಕು ಮೇಘವರ್ಣನು ನೀವೆಲ್ಲರೂ ಯಮಲೋಕಕ್ಕೆ ಹೋಗುವುದರಲ್ಲಿ ಸಂದೇಹವಿಲ್ಲ, ಎಂದು ಹೇಳಿ ಕೈಯಿಂದಲೂ ಮುಷ್ಟಿಯಿಂದಲೂ ಬಾಣಗಳಿಂದಲೂ ಕಲ್ಲುಗಳಿಂದಲೂ ಎಲ್ಲರನ್ನೂ ಹೊಡೆದು ಕೊಂದನು. ಶಾಪಗ್ರಸ್ತರಾಗಿ ಮನುಷ್ಯರಾಗಿದ್ದರೊ ಎಂಬಂತೆ ಅವರೆಲ್ಲ ದೇಹತ್ಯಾಗಮಾಡಿ ಪರಲೋಕವನ್ನೈದಿದರು. ಮೇಘವರ್ಣನು ಅವರನ್ನು ಕೊಂದು ಕುದುರೆಯೊಡನೆ ಭೀಮನಿರುವ ಸ್ಥಳಕ್ಕೆ ಹೊರಡಲು ಯತ್ನಿಸಿದನು. ಅದನ್ನು ನೋಡಿ ಇತರ ಸೈನಿಕರು ಯುದ್ಧಕ್ಕೆ ಉಪಕ್ರಮಿಸಿದರು. ಎಲ್ಲೆಲ್ಲಿಯೂ ಹಾಹಾಕಾರವುಂಟಾಯ್ತು. ನಮ್ಮೆದುರಿಗೆ ಕುದುರೆಯನ್ನಪಹರಿಸಿದವನು ಯಾವನು? ಅವನೆಲ್ಲಿ ಹೋದನು? ಅವನು ತನ್ನ ನಾಶಕ್ಕಾಗಿಯೇ ಕುದುರೆಯನ್ನಪಹರಿಸಿದನು. ಇದು ಸತ್ಯ. ಅವನು ದೇವತೆಯಾಗಿದ್ದರೂ ಅವನನ್ನು ಯಮಪುರಿಗೆ ಸಾಗಿಸುವೆವು. ಆ ಅಶ್ವಾಪಹಾರಕನನ್ನು ಹಿಡಿಯಿರಿ! ಎಂದು ಎಲ್ಲರೂ ಕೂಗಿಕೊಳ್ಳುತ್ತಿದ್ದರು. ಹೀಗೆ ಕೂಗಿಕೊಳ್ಳುತ್ತ ಅವರೆಲ್ಲರೂ ಆಕಾಶಮಾರ್ಗದಲ್ಲಿ ರಾಕ್ಷಸನೊಬ್ಬನು ಕುದುರೆಯನ್ನಪಹರಿಸಿಕೊಂಡು ಹೋಗುತ್ತಿರುವುದನ್ನು ಕಂಡು ಕುಪಿತರಾಗಿ ಅವನನ್ನು ಹತ್ತು ದಿಕ್ಕುಗಳಲ್ಲಿಯೂ ಮುತ್ತಿ ತಡೆದು, ಆಕಾಶವನ್ನು ಬಾಣಗಳಿಂದ ತುಂಬಿಸಿ ಅವನ ಮೇಲೆ ಬಾಣವೃಷ್ಟಿಯನ್ನು ಸುರಿಸಿದರು.

ಅಷ್ಟರಲ್ಲಿ ವೃಷಕೇತುವು ನಗುತ್ತ ಭೀಮನನ್ನು ಕುರಿತು, ಎಲೈ ಭೀಮಸೇನನೇ ಮೇಘವರ್ಣನು ಕುದುರೆಯನ್ನು ತೆಗೆದುಕೊಂಡು ಬಂದುದು ಒಳ್ಳೆಯ ಕೆಲಸವಾಯ್ತು. ಅವನೇ ಧನ್ಯನು. ಅವನನ್ನು ಯುದ್ಧದಲ್ಲಿ ಕೆಡಹುವವರು ಯಾರು? ನೋಡು, ಈಗ ಇಲ್ಲಿಗೆ ಯುದ್ಧಕ್ಕಾಗಿ ಬಂದಿರುವ ಶೂರರಾದ ಯೋಧರನ್ನು ಪ್ರತಿಭಟಿಸಿ ನಿನ್ನೆದುರಿಗೆ ಕೆಡಹುವೆನು. ಇದಕ್ಕೆ ಸಂಶಯವಿಲ್ಲ, ಎಂದು ಹೇಳಿ ಶ್ರೇಷ್ಠವಾದ ಧನುವನ್ನು ತೆಗೆದುಕೊಂಡು, ಪರಮೇಶ್ವರನು ರಾಕ್ಷಸರ ಸಮೂಹದ ಮೇಲೆ ಯುದ್ಧಕ್ಕೆ ಹೊರಡುವಂತೆ ಭೀಮನೆದುರಿಗೆ ತಾನೊಬ್ಬನೇ ಹೊರಟನು. ಎಲೈ ವೀರರೇ ಈಗ ಯುದ್ಧಕ್ಕೆ ನಿಲ್ಲಿ. ಇಲ್ಲದಿದ್ದರೆ ಹಿಂದಿರುಗಿರಿ. ಏಕೆ ವ್ಯರ್ಥವಾಗಿ ಪ್ರಾಣಗಳನ್ನು ಕಳೆದುಕೊಳ್ಳುವಿರಿ; ಎಂದು ಕೂಗಿ ಹೇಳುತ್ತಿರುವ ವೃಷಕೇತುವಿನ ಮಾತುಗಳನ್ನು ಕೇಳಿ ಆ ವೀರರು ಆಶ್ಚರ್ಯದೃಷ್ಟಿಯಿಂದ ನೋಡುತ್ತ-ಇವನು ಯಾರು? ಯಾರ ಮಗನು? ಮಹಾಶೂರನಂತೆ ನಮ್ಮೆದುರಿಗೆ ನಿಂತು ಆಜ್ಞೆ ಮಾಡುತ್ತ ಯಮನಂತೆ ನಮ್ಮನ್ನು ಯುದ್ಧಕ್ಕೆ ಕರೆಯುತ್ತಿರುವನು! ಎಂದು ಹೇಳಿಕೊಳ್ಳುತ್ತ ಕರ್ಣಪುತ್ರನಾದ

ಯಜ್ಞೇಶ್ವರನೇ ಇಲ್ಲಿಗೆ ಬರುತ್ತಿರುವನು. ಹೊಗೆಯಿಂದ ಮುಚ್ಚಿಹೋದ ಕಣ್ಣುಗಳಿಗೆ ಆ ಯಜ್ಞನಾಯಕನು ಹೇಗೆ ಗೋಚರನಾಗುವನು? ಭಕ್ತನಾದ ಧರ್ಮನಂದನನು ಈ ಜನಾರ್ದನನನ್ನು ಹೇಗೆ ತೋರಿಸಿದನೋ ಹಾಗೆ ಯಜ್ಞದಲ್ಲಿ ನಮ್ಮಿಂದ ಬಹಳ ತೃಪ್ತನಾದ ಅಗ್ನಿಯೂ ತೋರಿಸಲಿಲ್ಲ. ಸಪ್ತಜಿಹ್ವನೆಂದು ಪ್ರಸಿದ್ಧನಾದ ಅಗ್ನಿಯು ಕೃಷ್ಣನನ್ನರಿಯನೇನು? ದ್ವಿಜಿಹ್ವನು (ಸರ್ಪವು) ಸಾಕ್ಷಾತ್ತಾಗಿ ಕ್ಷೀರವನ್ನು ಪಾನಮಾಡಿ ವಿಷವನ್ನು ಕಕ್ಕುವನು. ಇನ್ನು, ಸಪ್ತಜಿಹ್ವನು ಅಗ್ನಿಯಿಂದ ಶ್ರೀಕೃಷ್ಣನನ್ನು ಹೇಗೆ ತೋರಿಸಬಲ್ಲನು?" ಎಂದು ಹೇಳಿಕೊಳ್ಳುತ್ತಿದ್ದರು. ಅವರಲ್ಲೊಬ್ಬ ಬ್ರಾಹ್ಮಣನು, "ಇದು ಅಗ್ನಿಯ ದೋಷವಲ್ಲ; ನಾವು ಮಾಡುವ ಕರ್ಮಗಳನ್ನು ಭಗವದರ್ಪಣ ಮಾಡದಿರುವ ನಮ್ಮ ತಪ್ಪು" ಎಂದು ನುಡಿದನು. ಮತ್ತೊಬ್ಬನು ಅವರೆಲ್ಲರನ್ನೂ ಕುರಿತು, "ಎಲ್ಲರೂ ಶ್ರೀಕೃಷ್ಣನ ದರ್ಶನ ಮಾಡಿರಿ; ಯಜ್ಞಾರ್ಜಿತವಾದ ಪುಣ್ಯವೆಲ್ಲವನ್ನೂ ಆತನಿಗೆ ಕೂಡಲೆ ಸಮರ್ಪಿಸಿರಿ; ಯಾವಾಗ ಬಿದ್ದುಹೋಗುವೆವೋ ಎಂಬ ಭಯವುಳ್ಳ ನಶ್ವರವಾದ ಆ ಸ್ವರ್ಗದಿಂದ ಪ್ರಯೋಜನವೇನು? ಶ್ರೀಕೃಷ್ಣನೊಡನೆ ನಾವೆಲ್ಲರೂ ನಿರ್ಭಯವಾಗಿ ಸಂಚರಿಸೋಣ" ಎಂದನು.

ಹೀಗೆ ಒಬ್ಬರಿಗೊಬ್ಬರು ಮಾತನಾಡಿಕೊಳ್ಳುತ್ತ ಶ್ರೀಕೃಷ್ಣನನ್ನು ಕಂಡರು. ಆತನು ಇವರೆಲ್ಲರಿಗೂ ನಮಸ್ಕರಿಸಲು, "ಎಲೈ ಚರಾಚರಗಳಿಗೊಡೆಯನಾಗಿಯೂ ಜಗತ್ಪತಿಯಾಗಿಯೂ ಇರುವ ಶ್ರೀಕೃಷ್ಣನೇ! ನೀನು ಬ್ರಾಹ್ಮಣಾಶೀರ್ವಾದ ಬಲದಿಂದ ಗಮ್ಯಾಗಮ್ಯಗಳನ್ನು ಖಂಡಿಸು; ನಿನಗೆ ಮಂಗಳವಾಗಲಿ" ಎಂದು ಹೇಳಿದರು. ತಮಗೆ ನಮಸ್ಕರಿಸಿದ ಶ್ರೀಕೃಷ್ಣನನ್ನು ನೋಡಿ ಸಂನ್ಯಾಸಿಗಳೆಲ್ಲರೂ "ನಮೋನಾರಾಯಣ" ಎಂದು ಹೇಳುತ್ತ, "ಎಲೈ ಕೃಷ್ಣನೇ! ನೀನು ನಾರಾಯಣನು; ನೀನು ನಿನ್ನಿಂದಲೇ ನಮಸ್ಕೃತನಾಗುತ್ತೀಯೆ. ವೇದವಾಕ್ಕುಗಳೂ ನಿನ್ನನ್ನು ಕಾಣದೆ ವಿಮುಖಗಳಾಗುತ್ತಿರುವುದರಿಂದ ನಿನ್ನನ್ನು ನಾರಾಯಣ ಎಂದು ಮಾತಿನಿಂದ ಹೇಳುವುದಕ್ಕೂ ನಮಗೆ ಸಾಧ್ಯವಲ್ಲ. ಅಂತಹ ನೀನು ನಮ್ಮ ಪಾದಗಳಿಗೆ ನಮಸ್ಕರಿಸಿದೆ. ವೇದಾಂತವೇದ್ಯನಾಗಿಯೂ ಭಯನಾಶಕನಾಗಿಯೂ ಇರುವ ನಿನ್ನನ್ನು ನಾವು ಸೇವಿಸುತ್ತೇವೆ. ವಾಸುದೇವನಾದ ನಿನಗೆ ಚಲವೆಂದೂ ಅಚಲವೆಂದೂ ಎರಡು ರೂಪಗಳುಂಟು: ಸಂನ್ಯಾಸಿಗಳ ರೂಪವೇ ಚಲವು, ಪ್ರತಿಮೆ ಮೊದಲಾದುವು ಅಚಲವು. ನಾವು ಪ್ರಣವಾಭ್ಯಾಸ ನಿರತರು. ಪ್ರಣವವಾದರೋ ಸರ್ವದಾ ನಿನ್ನ ಪಾದವನ್ನೇ ನೆನೆಯುತ್ತ ಈಗಲೂ ನಿನ್ನ ಪಾದವನ್ನರಿಯದುದಾಗಿದೆ" ಎಂದರು. ಅದಕ್ಕೆ ಶ್ರೀಕೃಷ್ಣನು, "ಕರ್ಮಫಲಪರಿತ್ಯಾಗದಿಂದ ಶ್ರೀಹರಿಯ ದೇಹವು ಪೋಷಿತವಾಗಿದೆ. ಅದು ಧ್ಯಾನಾರೂಢರಾದ ನಿಮ್ಮಿಂದ ವಿಶ್ವರೂಪವೆನಿಸಿಕೊಳ್ಳುವುದು. ನೀವು ಹಂಸರೆಂದು ಲೋಕದಲ್ಲಿ ಪ್ರಖ್ಯಾತಿ ಪಡೆದಿರುವಂತೆಯೇ ನಾನೂ ಕೃಷ್ಣನೆನಿಸಿರುವೆನು. ನಮ್ಮಿಬ್ಬರ ಸಮಾಗಮವು ಸರ್ವದಾ ಹಸ್ತಿನಾಪುರದಲ್ಲಾಗಲಿ" ಎಂದು ಹೇಳಿ, ಅವರ ಅನುಜ್ಞೆಯನ್ನು ಪಡೆದು ರಾಜಮಾರ್ಗದಲ್ಲಿ ನಡೆದನು. ಪುರಸ್ತ್ರೀಯರೂ ವೇಶ್ಯಾಂಗನೆಯರೂ ಪ್ರಾಸಾದಗಳ ಮೇಲೆ ನಿಂತು ಶ್ರೀಕೃಷ್ಣನನ್ನು ನೋಡುತ್ತಿದ್ದರು. ವೇಶ್ಯೆಯರು ಶ್ರೀಕೃಷ್ಣನನ್ನು

ನೋಡಿ, "ಶುಭಕರನೂ ದಾತೃವೂ ಕಾಮುಕನೂ ವಂಚಕನೂ ಆದ ಶ್ರೀಕೃಷ್ಣನು ಬರುತ್ತಿರುವನು; ಅವನನ್ನು ಹಿಡಿದುಕೊಳ್ಳಿರಿ. ಕಮಲಲೋಚನನೂ ಸುಂದರನೂ ಬಲಶಾಲಿಯೂ ಧನಿಕನೂ ಆದ ಆತನು ಸದಾ ಸ್ತ್ರೀಲೋಲನು" ಎಂದು ಹೇಳಿಕೊಂಡರು. ಅವರಲ್ಲಿ ಕುಂಟಣಿಯೊಬ್ಬಳು, "ಈ ನಾರಿಯರು ಪುರಾಣಪುರುಷನಾದ ಈತನನ್ನು ಹಿಡಿಯಲು ವ್ಯರ್ಥವಾಗಿ ಚಿಂತಿಸುತ್ತಿರುವರು. ಹಿಡಿಯಲು ಇವನು ಸಾಧ್ಯನಲ್ಲ. ಮುಕ್ತನಾಗಿದ್ದಾನೆ. ಇಂತಹವನನ್ನು ನಿರ್ಬಂಧಿಸುವುದು ಹೇಗೆ? ಪೂರ್ವದಲ್ಲಿ ಇವನು ಯೌವನಸ್ಥನಾಗಿದ್ದಾಗ ಭೂಲೋಕದಲ್ಲಿ ಹದಿನಾರು ಸಾವಿರ ಮಂದಿ ಸ್ತ್ರೀಯರನ್ನುಪಭೋಗಿಸಿದನು. ಬಹು ಮಂದಿ ಮಕ್ಕಳನ್ನು ಪಡೆದು ಈಗ ವೃದ್ಧನಾಗಿರುವ ಈತನಿಂದ ಫಲವೇನು? ಆದರೆ ಈತನನ್ನು ಹಿಡಿಯಲು ನಮಗೊಂದು ಕಾರಣವುಂಟು; ಹಾಗೆ ಹಿಡಿಯುವುದರಿಂದ ನಾವು ಪೂರ್ಣ ಕಾಮರಾಗಿ ಮುಕ್ತರಾಗುವೆವು; ಆ ಪುರಾಣಪುರುಷನಿಂದ ನಮಗೆ ಪರಮ ಪ್ರಯೋಜನವಾಗುವುದು. ಪುರುಷನು ಯೌವನಸ್ಥನಾಗಲಿ ವೃದ್ಧನಾಗಲಿ ಆತನ ಸಂಗದಲ್ಲಿ ನಮಗೆ ಆಸೆಯೇನೂ ಇಲ್ಲ. ಯುವತಿಯರಾಗಲಿ ವೃದ್ಧೆಯರಾಗಲಿ ಶ್ರೀಕೃಷ್ಣನನ್ನು ಬಿಡಕೂಡದು. ಈತನಿಗಿಂತ ವೃದ್ಧರಾದ ಜನರು ಯಾರೂ ಇಲ್ಲವೆಂದು ಮೂಢಜನವು ಹೇಳುತ್ತಿರುವುದು. ಈತನ ಚೇಷ್ಟೆಯನ್ನು ನಾನು ಚೆನ್ನಾಗಿ ಬಲ್ಲೆನು, ಮತ್ತಾವಳೂ ಅರಿಯಳು; ಕುಬ್ಜೆಯನ್ನೂ ವಾನರಕನ್ನೆಯನ್ನೂ ಬಯಸಿದ ಈ ಕೃಷ್ಣನು ಸುಂದರಿಯರಾದ ಸ್ತ್ರೀಯರನ್ನು ಬಿಡುವುದುಂಟೆ?" ಎಂದು ಹೇಳುತ್ತ ಅವಳು ಎಲ್ಲ ಸ್ತ್ರೀಯರನ್ನೂ ಕರೆದುಕೊಂಡು ತಾನು ಮುಂದೆ ಹೊರಟು ಶ್ರೀಕೃಷ್ಣನಿಗೆ ನಮಸ್ಕಾರ ಮಾಡಿ ನಿಲ್ಲಲು, ಆತನು ಅವಳನ್ನು ಆದರಿಸಿದನು. ಶ್ರೀಕೃಷ್ಣನ ಬಳಿಯಲ್ಲಿ ವಂದಿಗಳ ದೊಡ್ಡ ಗುಂಪಿದ್ದಿತು. ಅದರಲ್ಲಿ ವೃದ್ಧನಾದವನೊಬ್ಬನು ಶ್ರೀಕೃಷ್ಣನನ್ನು ಸ್ತುತಿಸುತ್ತ ಇಂತೆಂದನು:

"ಕಂಸಮರ್ದನನಾದ ಶ್ರೀಕೃಷ್ಣನು ಬಂದಿರುವನು. ಈಗ ಯಾಚಕರ ಸಂಸಾರ ದುಃಖವು ತೊಲಗುವುದು. ಮೋಹವೆಂಬ ರೋಗದಿಂದ ಪೀಡಿತರಾದ ಜನಗಳು ತಮಗೆ ಬೇಕಾದ ಇಷ್ಟಾರ್ಥಗಳನ್ನು ಬಯಸುವರು. ತನ್ನ ನಾಮೋಚ್ಚಾರಣೆಯೆಂಬ ಔಷಧವನ್ನು ಕೊಡುವ ಈ ಕೃಷ್ಣನೆಂಬ ವೈದ್ಯನಿಂದ ಅವರೆಲ್ಲರೂ ಸಂದೇಹವಿಲ್ಲದೆ ರೋಗರಹಿತರಾಗಿ ಸುಖವನ್ನು ಪಡೆದರು, ಇದು ಸತ್ಯವು. ನಾವಾಗಿ ಬಯಸುತ್ತಿರುವುದರಿಂದುಂಟಾಗುವ ವ್ಯಾಧಿಗಳೆಲ್ಲವೂ ಆತನನ್ನು ನೆನೆವುದರಿಂದ ನಾಶಹೊಂದುವುವು. ಶ್ರೀಹರಿಯನ್ನು ಬ್ರಹ್ಮಾಯುವಾಗೆಂದು ಹೇಗೆ ಹರಸುವುದು? ಅವನ ನಾಭಿಕಮಲದಲ್ಲಿ ಬ್ರಹ್ಮನು ಹುಟ್ಟಿದನು. ಹೀಗಿರುವಾಗ, ಹರಿಯ ತಾತನೂ ಪಿತಾಮಹನೂ ಯಾರಾಗಿರಬಹುದೋ ತಿಳಿಯದು. ನಮ್ಮ ಇಷ್ಟಸಿದ್ಧಿಗಾಗಿ ಆತನ ನಾಮಸ್ಮರಣೆಯನ್ನೇ ಮಾಡಬೇಕಾದುದು ಆವಶ್ಯಕವು. ಆತನ ನಾಮದ ಮಹಿಮೆಯನ್ನು ವರ್ಣಿಸಲರಿಯೆನು. ಆತನ ಪ್ರತಾಪಗಳನ್ನು ಸೂಚಿಸುವ ನಾಮಗಳು ಲೋಕದಲ್ಲಿ ಅಪಾರವಾಗಿವೆ. ಶಂಖನು ವೇದಗಳನ್ನು ಕದ್ದೊಯ್ದುದನ್ನು ಕಂಡು

ಆತನು ಆದಿಮತ್ಸ್ಯನಾದನು. ಆ ಮೀನಿನ ಜನ್ಮವನ್ನು ಮನುಷ್ಯ ಮಧ್ಯದಲ್ಲಿ ವರ್ಣಿಸುವುದು ಹೇಗೆ? ಕೂರ್ಮನೂ ವರಾಹನೂ ಆಗಿ ಅವತಾರ ಮಾಡಿದ ಆತನ ಪರಾಕ್ರಮವೂ ಪ್ರಸಿದ್ಧವಾಗಿದೆ. ಆತನು ಅರ್ಧಸಿಂಹರೂಪನಾಗಿಯೂ ಬ್ರಾಹ್ಮಣ ವಟುವಾಗಿಯೂ ಇದ್ದನು. ಆ ಮಹಾತ್ಮನ ಈ ಜನ್ಮಗಳನ್ನು ಕೇಳಿದವನು ಸಕಲ ಸಂಪತ್ತುಗಳನ್ನೂ ಪಡೆವುದರಲ್ಲಿ ಸಂಶಯವಿಲ್ಲ. ನಾನು ಹೇಳಿದ ಮಾತಿನಿಂದಾಗಲಿ, ಅಥವಾ ಮತ್ತೊಬ್ಬರಾಡುವ ಮಾತಿನಿಂದಾಗಲಿ ಕೃಷ್ಣನು ದೋಷರಹಿತನೆಂಬುದು ವ್ಯಕ್ತವಾಗುವುದು. 'ಈ ವಂದಿಯು ಕುರೂಪವಾದ ನನ್ನ ಜನ್ಮಗಳನ್ನು ಸತ್ಯವೆಂದು ತಿಳಿದು ಎಲ್ಲರಿಗೂ ಹೇಳಿದನಲ್ಲಾ!' ಎಂದು ಶ್ರೀಕೃಷ್ಣನು ಕೋಪಿಸಿಕೊಳ್ಳಬಹುದು. ಅದರಿಂದೇನು? ನನ್ನ ವಾಗ್ದೋಷವನ್ನಲ್ಲದೆ ಕಾಯಿಕ ಮಾನಸಿಕ ದೋಷಗಳೆಲ್ಲವನ್ನೂ ಅದು ಪರಿಹರಿಸುವುದರಲ್ಲಿ ಸಂದೇಹವಿಲ್ಲ. 'ರಾಮ', 'ರಾಮ' ಎಂದು ಆತನ ನಾಮಗಳನ್ನು ಪುನಃ ಕೀರ್ತನೆ ಮಾಡುವೆನು. ಸರ್ವಜ್ಞನಾದ ಶಂಕರನೂ ರಾಮನಾಮ ಸಂಕೀರ್ತನೆಯಿಂದ ಸಂತುಷ್ಟನಾಗುವನು; ಗೋಪಾಲಮೂರ್ತಿಯಾದ ಶ್ರೀಕೃಷ್ಣನು ಸಂತುಷ್ಟನಾಗದಿರುವನೇ?" ಎಂದು ಹೇಳುತ್ತಿರುವ ವಂದಿಯನ್ನಾದರಿಸಿ ಶ್ರೀಕೃಷ್ಣನು ತನ್ನ ಕಂಠದಲ್ಲಿ ಧರಿಸಿದ್ದ ಮುಕ್ತಾಹಾರವನ್ನು ಆತನಿಗೆ ಕೊಟ್ಟು ಉಳಿದವರೆಲ್ಲರಿಗೂ ಮುಕ್ತಾಫಲಗಳನ್ನು ಕೊಟ್ಟು, ಅಲ್ಲಿದ್ದ ಧರ್ಮಾಧಿಕಾರಿಗಳನ್ನು ಕಂಡು ಅವರೆಲ್ಲರೊಡನೆ ಸೇರಿ ಅಲ್ಲಿಂದ ಹೊರಟನು.

# ಅನುಸಾಲ್ವ ಗಮನ

ಅನಂತರದಲ್ಲಿ ಜನಮೇಜಯನು ಜೈಮಿನಿ ಮುನಿಯನ್ನು ಕುರಿತು, "ಎಲೈ ಜೈಮಿನಿಯೇ! ಮುಂದೆ ನಡೆದ ಸಂಗತಿಯೇನು? ಸದಾಚಾರ ಸಂಪನ್ನರಾದ ಜನರು ಶ್ರೀಕೃಷ್ಣನೊಡನೆ ಆಡಿದ ಮಾತುಗಳೇನು? ಅದಕ್ಕೆ ಆತನು ಹೇಳಿದ ಉತ್ತರವೇನು?" ಎಂದು ಕೇಳಲು, ಅದಕ್ಕೆ ಜೈಮಿನಿಯು, "ಎಲೈ ರಾಜೇಂದ್ರನೇ! ಕೇಳು, ಆ ಹಸ್ತಿನಪುರದಲ್ಲಿ ಆಚಾರಶೀಲರಾದ ಬ್ರಾಹ್ಮಣರೇ ಶ್ರೀಕೃಷ್ಣನನ್ನು ನೋಡಿ, "ಎಲೈ ಕೃಷ್ಣನೇ! ನಮ್ಮ ಸದಾಚಾರ ಸದ್ವರ್ತನಗಳಿಂದಲೂ ಪ್ರಾಯಶ್ಚಿತ್ತ ದಾನಾದಿಗಳಿಂದಲೂ ನಮಗೆ ನಿನ್ನ ದರ್ಶನವಾಯಿತು. ಧರ್ಮರಾಜನ ಆಜ್ಞಾನುಸಾರವಾಗಿ ಪ್ರಜೆಗಳೆಲ್ಲರೂ ಧರ್ಮಮಾರ್ಗಪ್ರವರ್ತಕರಾಗಿರುವರು. ಲೋಕದಲ್ಲಿ ಧರ್ಮ ಸಂರಕ್ಷಣಾರ್ಥವಾಗಿಯೇ ನೀನು ಅವತಾರ ಮಾಡಿರುವೆ. ಬ್ರಹ್ಮಹತ್ಯೆ, ಸ್ವರ್ಣಸ್ತೇಯ, ಸುರಾಪಾನ, ಗುರುತಲ್ಪ ಗಮನ, ಈ ನಾಲ್ಕು ಪಾಪಗಳನ್ನು ಮಾಡುವವನ ಸಹವಾಸ-ಈ ಐದೂ ಮಹಾಪಾತಕಗಳೆನಿಸುವುವು. ಇಂತಹ ಮಹಾಪಾತಕ ಮಾಡಿದವರ ಪಾಪವೆಲ್ಲವೂ ನಿನ್ನ ನಾಮವನ್ನು ಸ್ಮರಿಸಿದ ಮಾತ್ರಕ್ಕೆ ನಾಶವಾಗಿ ಅಂತಹ ಪಾಪಿಷ್ಠರೂ ಪರಿಶುದ್ಧರಾಗುವರು. 'ನೀವು ನಮಗೆ ಯಾವ ಪ್ರಾಯಶ್ಚಿತ್ತವನ್ನು ದಯೆಮಾಡಿ ವಿಧಿಸುವಿರೋ ಅದೆಲ್ಲಕ್ಕಿಂದಲೂ ಭಗವನ್ನಾಮ ಸ್ಮರಣೆಯು ಶ್ರೇಷ್ಠವಾದುದಲ್ಲವೆ?' ಎಂದು ಇವರೆಲ್ಲರೂ ನಮ್ಮನ್ನು ಕೇಳುವರು. ಪಾಪಕ್ಕೆ ತಕ್ಕ ಪ್ರಾಯಶ್ಚಿತ್ತವನ್ನು ವಿಧಿಸಬೇಕು. ಮೇಲೆ ಹೇಳಿದ ಪಾತಕಗಳೆಲ್ಲವೂ ಹರಿನಾಮಸ್ಮರಣೆಯ ಫಲದ ದೃಷ್ಟಿಯಿಂದ ಅಲ್ಪ ದೋಷಗಳೆನಿಸುವುವು. ದ್ವಾದಶಾಬ್ದ ಮೊದಲಾದ ವ್ರತಗಳನ್ನಾಚರಿಸುವುದರಿಂದ ಆಯಾ ಪಾತಕಗಳು ನಾಶವಾಗುವುವು; ಇವುಗಳಿಂದ ಶುದ್ಧರಾದವರ ದೇಹಗಳು ಮಾತ್ರ ನಾಶವಾಗದೆ ನಿಲ್ಲುವುವು. ಭಗವನ್ನಾಮಸಂಕೀರ್ತನೆಯಿಂದ ದೇಹವೇ ನಷ್ಟವಾಗುವುದರಿಂದ ಆ ದೇಹಕ್ಕೆ ಪಾಪ ಸಂಪರ್ಕವುಂಟಾಗಲವಕಾಶವೇ ಇಲ್ಲ. ಆದರೆ ಪ್ರಾಯಶ್ಚಿತ್ತಾದಿಗಳಿಂದ ಹೋಗಲಾರದೆ ದೋಷವೊಂದಿರುವುದೆಂಬ ಸಂಶಯವು ಮನಸ್ಸಿನಲ್ಲಿ ಸರ್ವದಾ ನಿಂತುಹೋಗಿರುವುದು: ಹರಿನಾಮಸ್ಮರಣೆ ಮಾಡದೆ ಅಜ್ಞಾನದಿಂದ ಮೋಹಿತರಾದ ಆತ್ಮದ್ರೋಹಿಗಳಿಗೆ ಪ್ರಾಯಶ್ಚಿತ್ತವೆಲ್ಲಿಯದು; ಎಲೈ ಕೃಷ್ಣನೇ! ಎಲ್ಲ ಪಾತಕಗಳಿಗೂ ಪ್ರಾಯಶ್ಚಿತ್ತವುಂಟು; ನಿನ್ನನ್ನು ಸ್ಮರಣೆ ಮಾಡದ ಅಧಮರಿಗೆ ಯಾವ ಧರ್ಮಶಾಸ್ತ್ರಗಳನ್ನು ಹುಡುಕಿದರೂ ಪ್ರಾಯಶ್ಚಿತ್ತವೊಂದು ದೊರೆಯಲಾರದು" ಎಂದು ಹೇಳಿದರು.

ಶ್ರೀಕೃಷ್ಣನು ಇವರ ಮಾತುಗಳನ್ನು ಕೇಳಿ ಪ್ರಸನ್ನನಾಗಿ ಅವರೊಡನೆ ಮುಂದಕ್ಕೆ ನಡೆಯುತ್ತ, ಮುಂದಿರುವ ನರ್ತಕಿಯರ ಗುಂಪನ್ನು ನೋಡಿ, ಶ್ರೀಕೃಷ್ಣನ ಆಗಮನವನ್ನೇ ನಿರೀಕ್ಷಿಸುತ್ತ ನಾಟ್ಯವಾಡುತ್ತಿರುವ ಆ ಸ್ತ್ರೀಯರ ಆರು ಬಗೆಯ ತಾಳ ಭೇದದಿಂದ ಕೂಡಿದ ನಾಟ್ಯಕ್ಕೆ ತೃಪ್ತನಾಗಿರಲು, ಆಗ ನರ್ತಕಿಯೊಬ್ಬಳು ಶ್ರೀಕೃಷ್ಣನನ್ನು ಕಂಡು, ಉದ್ಯಾನವನದಲ್ಲಿ ಪುಷ್ಪಾಲಂಕಾರವನ್ನು ಹೊಂದಿ ಕೈಗಳನ್ನುಳಿದ ಲತೆಯು ಶೋಭಿಸುವಂತೆ ಪ್ರಕಾಶಿಸುತ್ತ, ಭ್ರಮರಗಳಂತಿರುವ ಕಣ್ಣುಗಳನ್ನು ಬಾರಿಬಾರಿಗೂ ತಿರುಗಿಸುತ್ತ ಕೀಚಕ ಧ್ವನಿಯಂತೆ ಮೃದು

ಮಧುರವಾದ ಮೃದಂಗ ಶಬ್ದದಿಂದ ಶ್ರೀಕೃಷ್ಣನನ್ನು ಸಂತೋಷಗೊಳಿಸುತ್ತಿರುವವಳಾಗಿ, ಶ್ರೀಕೃಷ್ಣನನ್ನು ಕುರಿತು, "ಎಲೈ ಶ್ರೀಕೃಷ್ಣನೇ! ನಿನ್ನೆದುರಿಗೆ ನರ್ತಿಸುತ್ತಿರುವ ನನ್ನನ್ನು ನೋಡಿ ಎಲ್ಲರೂ ನಗುತ್ತಿರುವರು. ನನ್ನ ನಾಟ್ಯದಿಂದ ಶ್ರೀಹರಿಯು ಸುಪ್ರೀತನಾಗುವನೆಂಬುದನ್ನು ಆ ಮೂಢರು ಅರಿಯರು. ಗೋವಿಂದನನ್ನು ಈ ಲೋಕದಲ್ಲಿ ದರ್ಶನ ಮಾಡಲು ಯಾವ ಧ್ಯಾನ ದಾನ ತಪೋವ್ರತಗಳೂ ಇಲ್ಲ; ಯೋಗಿಗಳೂ ಧ್ಯಾನದಿಂದ ಸುಲಭವಾಗಿ ಕಾಣಲಾರರು. ನನ್ನ ನಾಟ್ಯವನ್ನು ನೋಡುತ್ತ ಇಲ್ಲಿಯೇ ನಿಂತಿರುವ ಶ್ರೀಹರಿಯನ್ನು ಅವರೆಲ್ಲರೂ ನೋಡಲಿ. ನೃತ್ತ ಗೀತ ವಾದ್ಯಗಳನ್ನು ಮಾಡುತ್ತಿರುವವರಿಗೆ ಸಂತುಷ್ಟನಾಗುವಂತೆ, ದೇವರು ಧ್ಯಾನಾದಿಗಳಿಗೆ ಮೆಚ್ಚುವುದಿಲ್ಲವೆಂದು ತಿಳಿದವರು ಹೇಳುತ್ತಾರೆ. ಎಲೈ ಜನಾರ್ದನನೇ! ನಿನ್ನ ಕೈಯಲ್ಲಿ ಸುದರ್ಶನ ಚಕ್ರವೊಂದೇ ಇರುವುದು; ನನ್ನ ಕೈಕಾಲುಗಳಲ್ಲಿ ನಾಲ್ಕು ಚಕ್ರಗಳಿರುವುವು, ನೋಡು! ನಿನ್ನ ಪಾದದಲ್ಲಿ ಗಂಗೆಯಿರುವುದು; ನನ್ನ ಕಪೋಲದಲ್ಲಿಯೂ ತಲೆಯಲ್ಲಿಯೂ ಗಂಗೆ ನೆಲಸಿರುವಳು. ನೀನು ಅಚಲನು; ಅಬಲೆಯಾದ ನಾನು ಸರ್ವದಾ ಚಂಚಲೆಯಾಗಿದ್ದೇನೆ. ನೀನು ಒಂದು ಬ್ರಹ್ಮಾಂಡವನ್ನು ಚಲಿಸುವಂತೆ ಮಾಡುವೆ; ನಿನ್ನೆದುರಿಗೆ ನಾನು ಏಳು ಗೋಳಗಳನ್ನು ಚಲಿಸುವಂತೆ ಮಾಡುತ್ತೇನೆ. ನಿನ್ನ ದೃಷ್ಟಿಗೆ ಇಪ್ಪತ್ತಾರು ಭಾವಗಳುಂಟೆಂದು ತಿಳಿದಿದೆ; ನಾನು ಅವೆಲ್ಲವನ್ನೂ ಮಾಡುವುದಿಲ್ಲ, ಏಕಭಾವದಿಂದ ನಿನ್ನನ್ನು ನೋಡುತ್ತೇನೆ. ನೆಲದ ಮೇಲಿರುವ ಎರಡು ಹೂಗಳನ್ನು ನನ್ನೆರಡು ಕಣ್ಣುಗಳಿಂದ ತೆಗೆದುಕೊಳ್ಳುತ್ತ ನಿನ್ನನ್ನು ನೋಡುತ್ತಿರುವೆನು; ಇದು ನನಗೆ ವಿಸ್ಮಯವನ್ನುಂಟುಮಾಡುತ್ತದೆ" ಎಂದು ಹೇಳಿದಳು. ಅದನ್ನು ಕೇಳಿ ಶ್ರೀಕೃಷ್ಣನು, "ಎಲೈ ಸುಂದರೀ! ನೀನು ನನ್ನ ನಾಮಗಳನ್ನು ಹಾಡಿಕೊಂಡು ನರ್ತಿಸುತ್ತ ನಮ್ಮ ಮನೆಯಲ್ಲಿಯೇ ಇರು, ಮತ್ತೆಲ್ಲಿಯೂ ಹೋಗಬೇಡ" ಎಂದು ಹೇಳಿ ಅಲ್ಲಿಂದ ಹೊರಟು ಧರ್ಮರಾಜನ ಮನೆಗೆ ಬಂದನು.

ಅಲ್ಲಿ ಧೃತರಾಷ್ಟ್ರ, ವಿದುರ, ಕೃಪರೊಡನೆ ಕುಳಿತಿದ್ದ ವೀರನಾದ ಧರ್ಮರಾಜನನ್ನು ನೋಡಿ, ಶ್ರೀಕೃಷ್ಣನು ಎಲ್ಲರಿಗೂ ನಮಸ್ಕರಿಸಿ ಸುಖಾಸನದಲ್ಲಿ ಕುಳಿತುಕೊಂಡನು. ಉಳಿದ ಪಾಂಡವರು ಶ್ರೀಕೃಷ್ಣನಿಗೆ ನಮಸ್ಕರಿಸಲು, ಆತನು ಅವರೆಲ್ಲರನ್ನೂ ಹರಸಿ ಆಲಿಂಗಿಸಿದನು. ಧರ್ಮರಾಜನು ಶ್ರೀಕೃಷ್ಣನನ್ನು ಮೂರ್ಧಾಘ್ರಾಣಮಾಡಿ ಬಹು ಸಂತೋಷಗೊಳಿಸಿದನು. ಸಂತೋಷಚಿತ್ತರಾಗಿರುವ ಕುಂತಿಯನ್ನೂ ದ್ರೌಪದಿಯನ್ನೂ ನೋಡಿ ಹರ್ಷದಿಂದ ಧರ್ಮಪುತ್ರನು ಶ್ರೀಕೃಷ್ಣನನ್ನು, "ಎಲೈ ಶ್ರೀಕೃಷ್ಣನೇ! ನಾನು ಮಾಡಬೇಕಾದ ಯಾಗ ಕಾರ್ಯಕ್ಕಾಗಿ ನಿನ್ನನ್ನು ಭೀಮಸೇನನ ಮೂಲಕ ಇಲ್ಲಿಗೆ ಕರೆಯಿಸಿಕೊಂಡೆನು. ವಸುದೇವಾದಿಗಳೆಲ್ಲರೂ ಕುಶಲರಾಗಿರುವರೇ! ನಿಮ್ಮ ತಾಯಿಯೂ ಭಾರ್ಯೆಯರೂ ಇತರ ಸ್ತ್ರೀಯರೂ ಬರಲಿಲ್ಲವಲ್ಲಾ!" ಎಂದು ಕೇಳಿದನು. ಅದಕ್ಕೆ ಕೃಷ್ಣನು, "ವಸುದೇವನೂ ಬಲರಾಮನೂ ದ್ವಾರಕೆಯಲ್ಲಿಯೇ ಇರುವರು; ಉಳಿದ ಸ್ತ್ರೀ ಪುರುಷರೆಲ್ಲರೂ ಬಂದಿರುವರು; ಅವರೆಲ್ಲರೂ ಭೀಮನೊಡನೆ ಗಂಗಾನದಿಯ ದಡದಲ್ಲಿ ಬಂದಿಳಿದಿರುವರು; ನಾನು ನಿನ್ನನ್ನು

ನೋಡಬೇಕೆಂಬ ಕುತೂಹಲದಿಂದ ಮುಂದೆ ಬಂದೆನು" ಎಂದು ಹೇಳಿದನು. ಆಗ ಧರ್ಮರಾಜನು, ಎಲೈ ಅರ್ಜುನನೇ! ಶ್ರೀಕೃಷ್ಣನು ಹೇಳಿದಂತೆ ಎಲ್ಲರೂ ಬಂದಿರುವರೇ ನೋಡು. ನಮ್ಮ ನಾಥನಾದ ಶ್ರೀಕೃಷ್ಣನಿಂದ ಲೋಕದಲ್ಲಿ ನಾವು ಧನ್ಯರೆಂಬುದಕ್ಕೆ ಸಂಶಯವಿಲ್ಲ. ನಾವು ಆ ನಮ್ಮ ಸ್ನೇಹಿತರನ್ನು ಎದುರುಗೊಳ್ಳಲು ಈಗಲೇ ಹೊರಡೋಣ. ಕುಂತಿಯೂ ಪ್ರಭಾವತಿಯೂ ದ್ರೌಪದಿಯೂ ದೇವಕಿಯನ್ನೆದುರುಗೊಳ್ಳಲು ಹೊರಡಲಿ. ಸ್ವಜನವನ್ನು ಆದರಿಸಲು ಮಹಾಜನವೆಲ್ಲವೂ ನನ್ನ ಆಜ್ಞೆಯಂತೆ ಹೊರಡಲಿ" ಎಂದಾಜ್ಞಾಪಿಸಿ, ಶ್ರೀಕೃಷ್ಣನೊಡನೆ ತಾನೂ ಹೊರಟನು. ಪುರದ ಬಹಿರ್ಭಾಗದಲ್ಲಿ ಶೂರನಾದ ಯೌವನಾಶ್ವನು ಸೇನಾ ಸಮೇತನಾಗಿ ಎದುರುಗೊಳ್ಳುವ ಸಮಾರಂಭದಲ್ಲಿ ಸಕಲ ವಾದ್ಯಗಳನ್ನೂ ಬಾರಿಸುವಂತೆ ತನ್ನ ಪರಿವಾರದವರಿಗೆ ತಿಳಿಸಿದನು. ದ್ರೌಪದಿಯು ಶ್ರೀಕೃಷ್ಣನೊಡನೆ ರಥದಲ್ಲಿ ಕುಳಿತು ಮುಂದೆ ಹೊರಟಳು. ಆಗ ಗಾಯಕರು ಗಾನ ಮಾಡುತ್ತಿದ್ದರು, ನಾಟ್ಯಕುಶಲರು ನರ್ತನ ಮಾಡುತ್ತಿದ್ದರು. ವಂದಿಗಳೂ ಸೂತಮಾಗಧಿಗಳೂ ಸ್ತುತಿಪಾಠಗಳನ್ನು ಹೇಳುತ್ತಿದ್ದರು. ಧರ್ಮರಾಜನ ಸೈನ್ಯವು ಹೊರಡಲು, ಶಂಖ, ದುಂದುಭಿ ಮೊದಲಾದ ವಾದ್ಯಗಳು ಮೊಳಗುತ್ತಿದ್ದುವು. ಇತರ ಜನರೆಲ್ಲರೂ ಸಂತೋಷದಿಂದ ಉಬ್ಬಿ ನಾನಾವಿಧ ಚೇಷ್ಟೆಗಳನ್ನು ಮಾಡುತ್ತ ಹೊರಟರು. ಪ್ರಭಾವತಿಯು ದೇವಕಿ ರುಕ್ಮಿಣಿಯರನ್ನು ನೋಡುವುದಕ್ಕಾಗಿ ರತ್ನಾದಿಗಳನ್ನು ತೆಗೆದುಕೊಂಡು ತನ್ನ ಬಂಧುಗಳೊಡನೆ ಹೊರಟಳು; ನಾನಾಲಂಕಾರ ಭೂಷಿತರಾದ ಹತ್ತುಸಾವಿರ ಮಂದಿ ಇತರ ಸ್ತ್ರೀಯರೂ ಹೊರಟರು.

ಬಳಿಕ ಯಾದವರೆಲ್ಲರೂ ಸೇನೆಯನ್ನು ಸನ್ನಾಹಗೊಳಿಸುತ್ತಿದ್ದರು. ದೇವಕಿ ಮೊದಲಾದವರಿಗೆ ಸ್ವರ್ಣರತ್ನಖಚಿತವಾಗಿಯೂ ಚಿತ್ರಚೀನಾಂಬರಗಳನ್ನು ಸುತ್ತಿ ಅಲಂಕೃತವಾಗಿಯೂ ಇರುವ ಪಲ್ಲಕ್ಕಿಗಳು ಸಿದ್ಧವಾದುವು. ಕೈಯಲ್ಲಿ ಚಾಮರ ವ್ಯಜನಗಳನ್ನು ಹಿಡಿದು ಸೇವಿಸುತ್ತಿರುವ ನಾರೀಶತದಿಂದ ಪರಿವೃತವಾದ ಪಲ್ಲಕ್ಕಿಯೊಂದರಲ್ಲಿ ಕುಳಿತಿರುವ ದೇವಕಿಯನ್ನು ನೋಡಿ ಧರ್ಮರಾಜನು ಬಂದು ನಮಸ್ಕರಿಸಿ, ಭೃತ್ಯನಂತೆ ಮುಂದೆ ನಿಂತನು. ಭೀಮನು ನೆಲದ ಮೇಲೆ ನಿಂತಿರುವ ಧರ್ಮನಂದನನ್ನು ನೋಡಿ ಆನೆಯಿಂದಿಳಿದು ಆತನ ಪಾದಕ್ಕೆರಗಿದನು; ಪ್ರದ್ಯುಮ್ನಾದಿ ವೀರರು ಧರ್ಮರಾಜನಿಗೆ ನಮಸ್ಕರಿಸಿದರು; ಅರ್ಜುನಾದಿ ಪಾಂಡವರು ದೇವಕಿಗೆ ನಮಸ್ಕರಿಸಿದರು; ಯಶೋದೆಯೂ ದೇವಕಿಯೂ ಕುಂತಿಗೆ ನಮಸ್ಕರಿಸಿ, ಪ್ರಭಾವತಿಗೂ ಕುಂತಿಗೂ ಉಡುಗೊರೆಗಳನ್ನು ಕೊಟ್ಟರು. ದ್ರೌಪದಿಯು ಪ್ರಭಾವತಿಯೊಡನೆ ದೇವಕೀದೇವಿಗೆ ನಮಸ್ಕರಿಸಿ ಕಾಣಿಕೆಗಳನ್ನೊಪ್ಪಿಸಿದಳು. ರುಕ್ಮಿಣಿಯೇ ಮೊದಲಾದ ಶ್ರೀಕೃಷ್ಣನ ಸ್ತ್ರೀಯರೆಲ್ಲ ಕುಂತಿಯನ್ನಾದರಿಸಿ ನಮಸ್ಕಾರಮಾಡಿ ಕಾಣಿಕೆಗಳನ್ನೊಪ್ಪಿಸಿ, ದ್ರೌಪದಿಯನ್ನು ನೋಡುವುದಕ್ಕಾಗಿ ಹೊರಟು, ರತ್ನಚಂದನ ವಸ್ತ್ರಾದಿಗಳನ್ನು ತೆಗೆದುಕೊಂಡು ಹೋಗಿ ಕೊಟ್ಟು ಆದರಿಸಿದರು. ಸತ್ಯಭಾಮೆಯು ನಸುನಗುತ್ತ ದ್ರೌಪದಿಯನ್ನು ಕುರಿತು, "ಎಲೈ ದ್ರೌಪದಿಯೆ! ಜಗತ್ಪತಿಯಾದ ಶ್ರೀಕೃಷ್ಣನೊಬ್ಬನನ್ನು ಸ್ವಾಧೀನ ಮಾಡಿಕೊಳ್ಳುವುದೇ ನಮಗೆ ಅಸಾಧ್ಯವಾಗಿರುವಾಗ ನೀನು ಐದು ಮಂದಿ

ಪತಿಗಳನ್ನು ಹೇಗೆ ವಶಪಡಿಸಿಕೊಂಡಿರುವೆ? ಶ್ರೀಕೃಷ್ಣನನ್ನು ನೀನು ವಶ ಮಾಡಿಕೊಂಡಿರುವ ಹಾಗಿದೆ. ತಂಗಿಯಾದ ನಿನ್ನನ್ನು ಆತನು ಬಿಟ್ಟಿರಲಾರನು; ನೀನೂ ಅವನನ್ನುಳಿದು ಜೀವಿಸಲಾರೆ. ನಿನ್ನ ಅಂತರ್ಯಕ್ಕೊಳಗಾಗಿರುವ ನಿನ್ನ ಪತಿಗಳೈದು ಮಂದಿಗಳೆದುರಿಗೆ ಯಾವ ಉಪಾಯದಿಂದ ಶ್ರೀಕೃಷ್ಣನನ್ನೊಲಿಸಿಕೊಂಡಿದ್ದೀಯೆ? ಅದನ್ನು ನನಗೆ ತಿಳಿಸು. ಇಂತಹ ಕಾರ್ಯ ಮಾಡುತ್ತಿದ್ದರೂ ಜನಕ್ಕೆ ನೀನು ನಾಚುವುದಿಲ್ಲ, ನಮಗೆ ಹೆದರುವುದಿಲ್ಲ, ಧರ್ಮಪರರಾದವರ ಆದರಣೆಗೊಳಗಾಗಿದ್ದೀಯೆ; ಅದು ಹೇಗೆ?" ಎಂದು ಕೇಳಿದಳು.

ಅದನ್ನು ಕೇಳಿ ದ್ರೌಪದಿಯು ಸತ್ಯಭಾಮೆಯನ್ನು ಕುರಿತು, "ಎಲೈ ಸತ್ಯಭಾಮೆಯೆ! ನಿನ್ನ ಮನಸ್ಸು ಶ್ರೀಕೃಷ್ಣನನ್ನು ಬಿಟ್ಟು ಸವತಿಯಲ್ಲಿ ಪ್ರವೇಶಿಸುವುದು; ಇದು ಪ್ರಬಲವಾದ ದುಷ್ಕರ್ಮದ ಫಲವು. ಕೃಷ್ಣನನ್ನು ನೀನು ಅವಮಾನಗೊಳಿಸುವೆ; ನಾನು ಆತನನ್ನು ಆಶ್ರಯಿಸುವೆನು. ಆದಕಾರಣ ಆತನು ತನ್ನ ಮನೋಗತವನ್ನೆಲ್ಲ ನನಗೆ ತಿಳಿಸುವನು. ದುರ್ಯೋಧನ ಸಭಾಮಧ್ಯದಲ್ಲಿ ಅಕ್ಷಯ ವಸ್ತ್ರವನ್ನು ಕೊಟ್ಟು ನನ್ನ ಮಾನವನ್ನು ರಕ್ಷಿಸಿದವನು ಶ್ರೀಕೃಷ್ಣನೊಬ್ಬನೇ. ನೀನು ಹಾಗೆ ವಸ್ತ್ರ ಮೊದಲಾದುವನ್ನು ಕೊಡಲಾರೆ. ನಮ್ಮಣ್ಣನು ನಿನ್ನನ್ನು ವಂಚಿಸಿ ನನಗೆ ವಸ್ತ್ರಗಳನ್ನು ಕೊಟ್ಟನು. ಅಂತಹ ಧರ್ಮಜ್ಞನಾದ ನಿನ್ನ ಪತಿಯನ್ನು ನೀನು ಎಲ್ಲರೆದುರಿಗೂ ನಾರದನಿಗೆ ದಾನ ಮಾಡಿದೆ; ಹಿಂದೆ, ದೇವತೆಗಳ ಅಲಂಕಾರಾರ್ಥವಾಗಿದ್ದ ಪಾರಿಜಾತವನ್ನು ಹರಣ ಮಾಡಿಸಿದೆ. ದೇವ ಬ್ರಾಹ್ಮಣ ಗುರು ದ್ರವ್ಯವನ್ನು ವಿವೇಕಿಗಳು ಆಕ್ರಮಿಸರು; ನೀನು ಹಾಗೆ ಅಪಹರಿಸಿದ್ದರೂ ನಿನಗೆ ನಾಚಿಕೆಯಿಲ್ಲ. ಕೃಷ್ಣದಾನವನ್ನು ಪರಿಗ್ರಹಿಸಿ ಪುನಃ ದತ್ತಾಪಹಾರರೂಪವಾಗಿ ಶ್ರೀಕೃಷ್ಣನನ್ನು ನಿನ್ನ ಸ್ವಾಧೀನ ಮಾಡಿದ ಮೂಢನಾದ ಆ ನಾರದನು ನಿಂದ್ಯನಲ್ಲವೆ? ನಾರದನಿಗೆ ಶ್ರೀಕೃಷ್ಣನಿಗಿಂತ ಹೆಚ್ಚಾದ ವಸ್ತುವು ಯಾವುದು ಸಿಕ್ಕಿತು? ಇದರಿಂದಲೇ, 'ವಿಪ್ರಾಃ ಪಶ್ಚಿಮ ಬುದ್ಧಯಃ' ಎಂಬ ನೀತಿ ವಾಕ್ಯವು ಸಿದ್ಧವಾಗುವುದು" ಎಂದು ಹೇಳಿದಳು.

ಹೀಗೆ ಹೇಳುತ್ತಿರುವ ದ್ರೌಪದಿಯನ್ನು ನೋಡಿ ಬಾಣಪುತ್ರಿಯಾದ ಉಷೆಯು ಆಕೆಗೆ ನಮಸ್ಕರಿಸಿ, ಕುಂತಿಯ ಬಳಿಗೆ ಬಂದು ಆಕೆಗೆ ನಮಸ್ಕಾರ ಮಾಡಿ, ದುಕೂಲರತ್ನ ಭೂಷಣಗಳನ್ನೊಪ್ಪಿಸಿದಳು. ಆಗ ಸತ್ಯಭಾಮೆಯು ಸಖಿಯರೊಡನೆ ಮೇನಾವನ್ನು ಹತ್ತಿ ಕುಳಿತು, "ನಾವೆಲ್ಲರೂ ದೇವಕಿಯೊಡನೆ ಹೊರಟು ಯಜ್ಞಾಶ್ವವನ್ನು ನೋಡಿಬರಬೇಕೆಂಬ ಕುತೂಹಲವಿದೆ" ಎಂದು ಹೇಳಲು, ಕೃಷ್ಣನು ಧರ್ಮರಾಜನನ್ನು ನೋಡಿ, "ಅಯ್ಯಾ ಧರ್ಮನಂದನನೇ! ದೇವಕಿ ಮೊದಲಾದ ನಮ್ಮ ಸ್ತ್ರೀಯರೆಲ್ಲರೂ ಅಶ್ವವನ್ನು ನೋಡಬೇಕೆಂದು ಕುತೂಹಲ ಪಡುವರು" ಎಂದು ಹೇಳಿದನು. ಆಗ ಧರ್ಮರಾಜನು ತಮ್ಮ ಪರಿವಾರದವರನ್ನು ನೋಡಿ, "ಎಲೈ ವೀರರಿರಾ! ಈ ಸ್ತ್ರೀಯರೆಲ್ಲರೂ ಅಶ್ವವನ್ನು ನೋಡಬೇಕೆಂದಿರುವರು; ಇವರೆಲ್ಲರಿಂದಲೂ ಧೌಮ್ಯನು ಅಶ್ವಪೂಜೆಯನ್ನು ಮಾಡಿಸಲಿ; ಆಗ ಇವರೆಲ್ಲರೂ ಅದನ್ನು ನೋಡಿ ಸಂತೋಷಪಡಲಿ. ನೀವು ಆವರೆಗೂ ಶಸ್ತ್ರಪಾಣಿಗಳಾಗಿ ಆನೆಗಳ ಮೇಲೆಯೂ ರಥಗಳ ಮೇಲೆಯೂ ಅಂಗರಕ್ಷಕರಾಗಿದ್ದು ನೋಡಿಕೊಳ್ಳುತ್ತಿರಿ"

ಎಂದು ಆಜ್ಞೆ ಮಾಡಿದನು. ಸ್ತ್ರೀಯರೆಲ್ಲರೂ ಅಶ್ವವನ್ನು ಪೂಜಿಸುತ್ತಿರುವಾಗ ವೀರರೆಲ್ಲರೂ ಆಯುಧಪಾಣಿಗಳಾಗಿ ಕಾವಲಿದ್ದರು. ಆಗ ಸ್ತ್ರೀಯರು ಮೇನಾಗಳನ್ನು ಹತ್ತಿ ಅದರ ಕಿಟಕಿಗಳಿಂದ, ನೆಲದ ಮೇಲೆ ಕುಣಿದಾಡುತ್ತಿದ್ದ ಕುದುರೆಯನ್ನು ವಿನೋದವಾಗಿ ನೋಡುತ್ತಿದ್ದರು.

ಅಷ್ಟರಲ್ಲಿ, ಅನುಸಾಲ್ವನೆಂಬ ದೊರೆಯು ದೊಡ್ಡ ಸೇನೆಯೊಡನೆ ಅಲ್ಲಿಗೆ ಬಂದು, ತಮ್ಮ ಅಣ್ಣನ ವೈರವನ್ನು ನೆನೆದು, ಶ್ರೀಕೃಷ್ಣನು ಹಸ್ತಿನಪುರದಲ್ಲಿರುವುದನ್ನು ಕಂಡು ಹರ್ಷಿಸಿ, ಅವನ ಮೇಲಣ ಹಗೆಯನ್ನು ಸಾಧಿಸುತ್ತ ನಸುನಕ್ಕು, ಆ ಯಜ್ಞಾಶ್ವವನ್ನು ಹಿಡಿದುಕೊಂಡು ತನ್ನ ಹಿಂದೆ ಕಟ್ಟಿಹಾಕಿ, ಗೃಧ್ರವ್ಯೂಹವನ್ನು ರಚಿಸಿ, ತನ್ನ ಮಂತ್ರಿಯಾದ ಸುರಥನನ್ನು ಕರೆದು- "ಶ್ರೀಕೃಷ್ಣನು ನಮ್ಮ ಅಣ್ಣನಾದ ಸಾಲ್ವನನ್ನು ನೀರಿನಲ್ಲಿ ಸಂಹರಿಸಿ, ವಿಮಾನವನ್ನು ಹತ್ತಿ ಹೋಗಿ ದೇವಲೋಕದಲ್ಲಿ ಈಗಲೂ ಕಾಣಿಸುತ್ತಿರುವನು; ಈಗ ಧರ್ಮರಾಜನ ಯಜ್ಞಾರ್ಥವಾಗಿ ಸಂಸಾರ ಸಮೇತವಾಗಿ ಬಂದಿದ್ದಾನೆ. ಅವನು ಈಗ ಹೋಗದೆ ಇರಲಿ. ಗೃಧ್ರನನ್ನು ನೋಡಿ ಗರುಡನು ಯುದ್ಧಕ್ಕೆ ಸಿದ್ಧವಾಗಿ ನಿಲ್ಲಬೇಕಷ್ಟೆ! ಶ್ರೀಕೃಷ್ಣನನ್ನೂ ಧರ್ಮರಾಜನನ್ನೂ ಸೆರೆಹಿಡಿಯಬೇಕು. ಅದಕ್ಕೆ ಅನುಕೂಲವಾಗುವಂತೆ ನಮ್ಮ ಸೇನೆಯನ್ನೇರ್ಪಡಿಸು. ಶೂರರಾದ ಭೀಮಾದಿಗಳು ಪ್ರದ್ಯುಮ್ನಾದಿಗಳೊಡನೆ ಸೇರಿ ಧರ್ಮರಾಜನ ಸೇನೆಯನ್ನು ರಕ್ಷಿಸುತ್ತಿರುವರು. ಆದಕಾರಣ ನಮ್ಮವರೆಲ್ಲರೂ ಸೇರಿ ಆ ಬಂಧುಘಾತುಕನಾದ ಕೃಷ್ಣನನ್ನು ಬಿಡಕೂಡದು. ಯುದ್ಧದಲ್ಲಿ ಯಾವನು ಕೃಷ್ಣನನ್ನು ರಕ್ಷಿಸುವುದಕ್ಕೆ ಶಕ್ತನಾಗುವನೋ ಆ ದುಷ್ಟನನ್ನು ಹೊಡೆದು ಕೆಡಹುವೆನು. ಕೃಷ್ಣನನ್ನು ಹಿಡಿಯದವನು ಸಹೋದರನಾಗಲಿ ಮಗನಾಗಲಿ ಮಿತ್ರನಾಗಲಿ ನನಗೆ ಅವನಲ್ಲಿ ಇಷ್ಟವಿಲ್ಲ. ಆ ಕಾರ್ಯವನ್ನು ಮಾಡದ ಚತುರಂಗ ಸೈನ್ಯದಿಂದ ಪ್ರಯೋಜನವೇನು? ಈವರೆಗೆ ಸೇನೆಯವರು ರಾಜ ದ್ರವ್ಯಾಪಹಾರಕವಾದ ಅಕಾರ್ಯಗಳೆಷ್ಟನ್ನೇ ಮಾಡಿರಲಿ, ಈಗ ಅವರು ಕೃಷ್ಣನನ್ನು ಹಿಡಿದುಕೊಂಡರೆ ಅವೆಲ್ಲವನ್ನೂ ಕ್ಷಮಿಸಿಬಿಡುವೆನು. ನಮ್ಮ ಭೃತ್ಯರು ಯಾರೇ ಆಗಲಿ ಶ್ರೀಕೃಷ್ಣನ ಎದುರಿಗೆ ನಿಂತು ಶತ್ರುಗಳೊಡನೆ ಯುದ್ಧ ಮಾಡಿದರೆ ಅವರು ಯಾವ ಅಪರಾಧಕ್ಕೂ ಗುರಿಯಾಗರು; ಅಂತಹವರಿಗೆ ನಾನು ಯಥೇಚ್ಛವಾಗಿ ಧನವನ್ನು ಕೊಡುವೆನು. ದೊರೆಯು ಕುಲೀನರಾಗಿಯೂ ಧರ್ಮಾತ್ಮರಾಗಿಯೂ ಯುದ್ಧ ಪರಾಯಣರಾಗಿಯೂ ಇರುವ ಶೂರರಿಗೆ ತನ್ನ ಸರ್ವಸ್ವವನ್ನೂ ಕೊಟ್ಟು ಯುದ್ಧಕ್ಕೆ ನಿಲ್ಲಿಸಬೇಕು; ಅವರು ಯುದ್ಧದಲ್ಲಿ ಜಯಶೀಲರಾಗಿ ದೊರೆಗೆ ಕೀರ್ತಿಯನ್ನು ತರುವರು. ಶ್ರೀಕೃಷ್ಣನಲ್ಲದೆ ನಮ್ಮ ಸುಖವನ್ನು ನಾಶ ಮಾಡುವವರು ಯಾರೂ ಇಲ್ಲ. ಆದಕಾರಣ, ಎಲ್ಲರೂ ಸೇರಿ ಅವನ ಮೇಲೆ ಬಿದ್ದು ಅವನನ್ನು ಹಿಡಿಯಿರಿ; ಇದರಿಂದ ಯಾವ ದೋಷವೂ ಇಲ್ಲ; ಇದೇ ಯುಕ್ತವಾದ ಧರ್ಮವು. ಈ ಕೃಷ್ಣನು ದಾತೃವಾಗಿ ಯಾವ ಯಾಚಕನಿಗೂ ವಿಮುಖನಾಗದೆ ಪ್ರಸನ್ನನಾಗಿರುವನು; ಇವನು ಯಾವಾಗಲೂ ಆಯುಧಪಾಣಿಯಾಗಿಯೇ ಇರುವನು; ರಥವಿದ್ದರೂ ಪಕ್ಷಿವಾಹನವಾಗಿರುವನು; ಇವನು ಯಾವಾಗಲೂ

ಛೇದಿಸುವುದಕ್ಕೂ ನೆನೆಯಿಸುವುದಕ್ಕೂ ಸಾಧ್ಯನಲ್ಲ. ಇಂತಹವನನ್ನು ಒಬ್ಬನೇ ಯುದ್ಧದಲ್ಲಿ ಜಯಿಸುವುದಕ್ಕೆ ಹೇಗೆ ಸಾಧ್ಯವು? ಇವನನ್ನು ಸ್ವಾಧೀನ ಮಾಡಿಕೊಳ್ಳುವ ರೀತಿಯನ್ನು ಧ್ರುವನು ಬಲ್ಲನು; ಆ ಹುಡುಗನು ದೂರದಲ್ಲಿರುವನು; ವಿಭೀಷಣನೂ ಸ್ವಲ್ಪ ಬಲ್ಲನು; ಪ್ರಹ್ಲಾದನು ಚೆನ್ನಾಗಿ ತಿಳಿದಿರುವನು. ಸತ್ಯಭಾಮೆಯು ತನ್ನ ಕೈಗೆ ಒಪ್ಪಿಸಿ ಕೊಟ್ಟ ಕೃಷ್ಣನನ್ನು ಸ್ವಾಧೀನದಲ್ಲಿಟ್ಟುಕೊಳ್ಳುವುದಕ್ಕೆ ಶಕ್ತಿಯಿಲ್ಲದೆ ಪುನಃ ಹಿಂದಕ್ಕೆ ಕೊಟ್ಟನಾದ ಕಾರಣ, ನಾರದನು ಈತನನ್ನು ಸ್ವಾಧೀನಪಡಿಸಿಕೊಂಡಿರುವನೆಂದು ಹೇಳುವ ಮಾತು ಸುಳ್ಳು. ಈಗ ಶ್ರೀಕೃಷ್ಣನನ್ನು ಹಿಡಿದುಕೊಳ್ಳುವ ಸಾಮರ್ಥ್ಯ ಯಾರಿಗೂ ಇಲ್ಲವೆಂದು ಬಲ್ಲೆನು. ಆದಕಾರಣ ನಾನು ಸ್ವಶಕ್ತಿಯಿಂದಲೇ ಈತನನ್ನು ಅವನ ಸೇನೆಯ ಸಹಿತವಾಗಿ ಹಿಡಿದುಕೊಳ್ಳುವೆನು" ಎಂದು ಹೇಳಿ ಆ ದೊರೆಯು ಯುದ್ಧಕ್ಕೆ ನಿಂತು, ಗೃಧ್ರವ್ಯೂಹ ರಚನೆ ಮಾಡಿ, ಶ್ವೇತಚ್ಛತ್ರಧರ ನಾಗಿದ್ದನು; ಆನೆಗಳು ಬೃಂಹಿತಧ್ವನಿ ಮಾಡಿದುವು, ಕುದುರೆಗಳು ಹೇಷಾರವವನ್ನು ಮಾಡಿದುವು, ರಥಚಕ್ರಗಳು ಚೀತ್ಕಾರ ಶಬ್ದ ಮಾಡಿದುವು, ಪದಾತಿಗಳು ಸಿಂಹನಾದ ಮಾಡುತ್ತಿದ್ದರು; ಎಲ್ಲರೂ ದಿವ್ಯಾಂಬರಗಳನ್ನು ಧರಿಸಿ ಪ್ರಳಯಕಾಲದ ಸೂರ್ಯನಂತೆ ಹೊಳೆಯುತ್ತ, ಕೋಪದಿಂದ, "ಅರ್ಜುನನೆಲ್ಲಿ? ಕೃಷ್ಣನೆಲ್ಲಿ?" ಎಂದು ಆರ್ಭಟಿಸುತ್ತ ಕೃಷ್ಣನು ಬರುವ ಮಾರ್ಗವನ್ನೇ ನೋಡುತ್ತ ಕುದುರೆಯನ್ನು ರಕ್ಷಿಸುತ್ತಿದ್ದರು.

# ಸತ್ಯಭಾಮಾ ವಾಕ್ಯ

ಬಳಿಕ ಜನಮೇಜಯನು ಜೈಮಿನಿಯನ್ನು ಕುರಿತು, "ಎಲೈ ತಪೋಧನನೇ! ಕುದುರೆಯನ್ನು ಹಿಡಿದು ಕಟ್ಟಿದ ಬಳಿಕ ಕೃಷ್ಣನು ಅದನ್ನು ಬಿಡಿಸಿದುದು ಹೇಗೆ? ಯುದ್ಧಕ್ಕೆ ಬಂದವರಾರಾರು?" ಎಂದು ಕೇಳಲು, ಜೈಮಿನಿಯು, "ಎಲೈ ಜನಮೇಜಯನೆ! ಕೇಳು, ಆಗ ಶ್ರೀಕೃಷ್ಣನು ಪಾಂಡವರ ಕುದುರೆಯು ಅಪಹೃತವಾದುದನ್ನು ಕಂಡು ನಾಚಿಕೆಪಟ್ಟು ದಾರುಕನೆಂಬ ಸಾರಥಿಯೊಡನೆ ತನ್ನ ದಿವ್ಯರಥವನ್ನೇರಿ ಪಾಂಚಜನ್ಯ ಶಂಖಧ್ವನಿ ಮಾಡಿ ಧರ್ಮರಾಜನನ್ನು ಕುರಿತು, "ಶೂರನಾದ ಅನುಸಾಲ್ವನು ಈಗ ವೀರರಾದ ಪಾಂಡವರೆದುರಿಗೆ ಕುದುರೆಯನ್ನು ಹಿಡಿದುಕೊಂಡನು. ಸ್ತ್ರೀಯರೆಲ್ಲರೂ ಇದನ್ನು ನೋಡಿದುದರಿಂದ ನನಗೆ ಬಹಳ ನಾಚಿಕೆಯಾಗಿದೆ. ನೀನು ರಥದಲ್ಲಿ ಕುಳಿತು ಈ ಯುದ್ಧ ಚಮತ್ಕಾರವನ್ನು ನೋಡುತ್ತಿರು. ಸಾತ್ಯಕಿ, ಕೃತವರ್ಮ, ಯೌವನಾಶ್ವ, ಮೇಘವರ್ಣ, ನಕುಲ, ಸಹದೇವ ಮೊದಲಾದವರು ನಿನ್ನ ಸೇನೆಗೆ ರಕ್ಷಕರಾಗಿರಲಿ. ನಾನು, ಭೀಮ, ಅರ್ಜುನ, ಪ್ರದ್ಯುಮ್ನ, ಸುಜಯ, ಬಾಲನಾದ ವೃಷಕೇತು, ಸಾಂಬ, ನಿಶ್ಶಠ ಮೊದಲಾದ ಮಹಾ ಬಲಶಾಲಿಗಳಾದ ಈ ನಾವು ಕುದುರೆಯನ್ನು ಬಿಡಿಸುವೆವು. ಯಾವನಾದರೂ ಒಬ್ಬ ಶೂರನು ನನ್ನ ಕೈಯಲ್ಲಿರುವ ತಾಂಬೂಲವನ್ನು ತೆಗೆದುಕೊಳ್ಳಲಿ" ಎಂದು ಹೇಳಿ ಪುನಃ "ಎಲೈ ಬಲಿಷ್ಠರೂ ಶೂರರೂ ಆದ ಯೋಧರೇ! ಕೇಳಿರಿ: ಕುದುರೆಯನ್ನು ಬಿಡಿಸಿ ತರುವ ವೀರನು ಯಾರಿದ್ದರೂ ಅವನು ಈ ತಾಂಬೂಲವನ್ನು ತೆಗೆದುಕೊಳ್ಳಬಹುದು" ಎಂದನು. ಆ ವೀರರೆಲ್ಲರೂ ಆ ಕಠಿನೋಕ್ತಿಯನ್ನು ಕೇಳಿ ಏನೂ ತೋರದೆ ಅಡಿಗಡಿಗೆ ಚಿಂತಿಸುತ್ತ ನಿಂತಿದ್ದರು. ಆದಕಾರಣ, ಆ ತಾಂಬೂಲವು ಒಂದು ಮುಹೂರ್ತ ಮಾತ್ರ ಶ್ರೀಕೃಷ್ಣನ ಕೈಯಲ್ಲಿಯೇ ಇದ್ದಿತು.

ಆಗ ಕೃಷ್ಣನ ಮಗನಾದ ಪ್ರದ್ಯುಮ್ನನು ಆ ತಾಂಬೂಲವನ್ನು ತೆಗೆದುಕೊಂಡು, "ಸಾಲ್ವ ಸೈನ್ಯದಲ್ಲಿರುವ ಆ ಕುದುರೆಯನ್ನು ನಾನು ಬಿಡಿಸಿ ತರುವೆನು" ಎಂದು ಹೇಳಿ ಆ ವೀರರ ಗುಂಪಿನಲ್ಲಿ ಅನುಸಾಲ್ವನನ್ನು ತೃಣವಾಗಿ ಎಣಿಸಿ, ತನ್ನ ರಥವನ್ನು ಸಜ್ಜುಗೊಳಿಸಿ, ಅನುಸಾಲ್ವನನ್ನು ಪ್ರತಿಭಟಿಸಲು ಹೊರಟನು. ರತ್ನಾಭರಣಗಳಿಂದ ಹೊಳೆಯುತ್ತ ಪಾರಿವಾಳಗಳಿಗೆ ಸಮಾನವಾಗಿರುವ ಕುದುರೆಗಳನ್ನು ಹೂಡಿರುವ ಆ ಪ್ರದ್ಯುಮ್ನನ ರಥವನ್ನು ನೋಡಿ ಶ್ರೀಕೃಷ್ಣನು, "ಮತ್ತೊಬ್ಬ ಪೌರುಷಶಾಲಿಯಾದ ವೀರನು ಯಾರಾದರೂ ಇದ್ದರೆ ತಾಂಬೂಲವನ್ನು ನನ್ನ ಕೈಯಿಂದ ತೆಗೆದುಕೊಂಡು ಅವನ ಸಹಾಯಾರ್ಥವಾಗಿ ಹೋಗಲಿ" ಎಂದು ಹೇಳಿದನು. ಶ್ರೀಕೃಷ್ಣನ ಮಾತನ್ನು ಕೇಳಿ, ತಾಂಬೂಲವನ್ನು ನೋಡಿ ವೃಷಕೇತುವು, "ಎಲೈ ಕೃಷ್ಣನೇ! ಈ ಪ್ರದ್ಯುಮ್ನನ ಸಹಾಯಾರ್ಥವಾಗಿ ನಾನು ಯುದ್ಧಕ್ಕೆ ಹೋಗುವೆನು; ಶೂರನಾದ ಅನುಸಾಲ್ವನನ್ನು ಸೆರೆಹಿಡಿದು ನಿನ್ನ ಸನ್ನಿಧಿಗೆ ನಾನು ತಾರದೆಹೋದರೆ, ಬ್ರಾಹ್ಮಣ ಸ್ತ್ರೀಸಂಗದಿಂದ ಶೂದ್ರನಿಗುಂಟಾಗುವ ಗತಿಯೂ, ಶ್ರಾದ್ಧನಿಮಂತ್ರಣ ಭೋಜನ ಮಾಡಿ ಸ್ತ್ರೀಸಂಗ ಮಾಡಿದವನ ಗತಿಯೂ, ಋತುಕಾಲದಲ್ಲಿ ತನ್ನ ಭಾರ್ಯೆಯ ಸಂಗವನ್ನು ಪರಿತ್ಯಜಿಸಿದ ಮೂಢನಿಗುಂಟಾದ ಗತಿಯೂ, ವಾಸುದೇವನಾದ ವಿಷ್ಣುವನ್ನು ಬಿಟ್ಟು

ಅನ್ಯದೈವವನ್ನು ಭಜಿಸಿದವನಿಗಾಗುವ ದುರ್ಗತಿಯೂ ನನಗೆ ಬರಲಿ; ಇದು ಸುಳ್ಳಲ್ಲ; ನನಗೆ ತಾಂಬೂಲವನ್ನು ಕೊಡು" ಎಂದನು. ಕೃಷ್ಣನು ಸಂತೋಷದಿಂದ ವೃಷಕೇತುವಿಗೆ ತಾಂಬೂಲವನ್ನು ಕೊಡಲು, ಅವನು ಅದನ್ನು ತೆಗೆದುಕೊಂಡು ನಮಸ್ಕರಿಸಿ ಹೊರಟುಹೋದನು.

ಬಳಿಕ, ಭಯಂಕರವಾದ ಆ ಅನುಸಾಲ್ವನ ಸೇನೆಯನ್ನು ಹೊಕ್ಕು ತನ್ನ ಹೆಸರನ್ನು ಕೂಗಿ ತಿಳಿಸುತ್ತ ವೃಷಕೇತುವು ಶಂಖಧ್ವನಿ ಮಾಡಿದನು. ಆಗ ವೃಷಕೇತುವಿನೊಡನೆ ಯುದ್ಧಕ್ಕೆ ನಿಂತು, ನಿಲ್ಲು ನಿಲ್ಲೆಂದು ಹೇಳುತ್ತ ತನ್ನ ಸೈನ್ಯವನ್ನು ಹೊಡೆದು ಕೆಡಹುತ್ತಿರುವ ಪ್ರದ್ಯುಮ್ನನನ್ನು ಕುರಿತು ಅನುಸಾಲ್ವನು, "ರಮ್ಯವಾದ ನಿನ್ನ ಪಟ್ಟಣವನ್ನು ಬಿಟ್ಟು ನನ್ನನ್ನು ಶತ್ರುವೆಂದು ಭಾವಿಸಿ ಪುನಃ ನನ್ನೆದುರಿಗೆ ಬಂದು ಏಕೆ ಯುದ್ಧಕ್ಕೆ ನಿಂತೆ? ಅನಂಗನಾಗಿಯೂ ಪುಷ್ಪಬಾಣನಾಗಿಯೂ ಇರುವ ನೀನು ಪೂರ್ವದಲ್ಲಿಯೇ ಈಶ್ವರನ ನೇತ್ರಾಗ್ನಿಯಿಂದ ಸುಟ್ಟು ಕೃಷ್ಣ ಹ್ರದದಲ್ಲಿ ಬಿದ್ದುಹೋದೆಯೆಂದು ನಾನು ಕೇಳಿ ಬಲ್ಲೆನು. ತಪಸ್ವಿಗಳೂ ಪತಿವ್ರತೆಯರೂ ವಿವೇಕಶೂನ್ಯರಾದವರೂ ಎಲ್ಲಿರುವರೋ ಅಲ್ಲಿ ನಿನ್ನ ಪೌರುಷವು" ಎಂದನು. ಅದನ್ನು ಕೇಳಿ ಬಲಶಾಲಿಯಾದ ಪ್ರದ್ಯುಮ್ನನು ಸಾಲ್ವನ ತಮ್ಮನನ್ನು ಐದು ಬಾಣಗಳಿಂದ ಹೊಡೆದನು. ಅನುಸಾಲ್ವನು ಆ ಬಾಣಗಳನ್ನು ಮಧ್ಯಮಾರ್ಗದಲ್ಲಿಯೇ ಕತ್ತರಿಸಿ ಬೇಗನೆ ಒಂದು ಬಾಣದಿಂದ ಪ್ರದ್ಯುಮ್ನನ ಎದೆಯನ್ನು ಭೇದಿಸಿದನು. ಎದೆಯು ಸೀಳಿಹೋಗಲು, ಪ್ರದ್ಯುಮ್ನನು ಖಿನ್ನನಾಗಿ ಭ್ರಾಂತನಾಗುತ್ತ ಯುದ್ಧದಲ್ಲಿ ಕೃಷ್ಣನೆದುರಿಗೆ ಬಿದ್ದು ಮೂರ್ಛೆಹೋದನು. ಅದನ್ನು ನೋಡಿ ಕೃಷ್ಣನು ನಾಚಿಕೆಯನ್ನು ಹೊಂದಿ, ಪ್ರದ್ಯುಮ್ನನನ್ನು ರಥದಿಂದ ನೆಲಕ್ಕಿಳಿಸಿ, ಬಹಳ ಕೋಪದಿಂದ ಒದೆದು ಗದರಿಸುತ್ತ, "ಎಲೈ ಮೂಢನೇ! ಏಳು ಏಳು! ಇದು ನೀನು ಕ್ರೀಡಿಸುತ್ತಿರುವ ದ್ವಾರಕೆಯಲ್ಲ; ಪ್ರದ್ಯುಮ್ನನ ಪ್ರಭಾವದಿಂದ ನನಗೆ ಭಯವಾಗಲಿ ನಾಚಿಕೆಯಾಗಲಿ ಬರುವಹಾಗಿಲ್ಲ ಎಂದು ಯಾವಾಗಲೂ ಚಿಂತಿಸುತ್ತಿದ್ದೆನು. ದುಷ್ಪುತ್ರನಾದ ನಿನ್ನಿಂದ ಶೂರರೆದುರಿಗೆ ನನಗೆ ಮಹಾಭಯವೂ ನಾಚಿಕೆಯೂ ಉಂಟಾಯ್ತು. ನಿನ್ನ ಬಾಲ್ಯದಲ್ಲಿಯೇ ಶಂಬರಾಸುರನು ನಿನ್ನನ್ನು ರಾತ್ರಿಯಲ್ಲಿ ನಮ್ಮ ಮನೆಯಲ್ಲಿ ಅಪಹರಿಸಿಕೊಂಡು ಹೋದಾಗಲೇ ನಿನ್ನನ್ನು ಬಿಟ್ಟುಬಿಡದೆ ಪುನಃ ನಿನ್ನನ್ನು ಕರೆತಂದು ನಾನು ಏಕೆ ರಕ್ಷಿಸಿದೆನೋ! ಜನಮಧ್ಯದಲ್ಲಿ ವಾಸಮಾಡುವ ಯೋಗ್ಯತೆಯು ನಿನಗಿಲ್ಲ. ಕಾಡಿಗೆ ಹೋಗಿ ಮುನಿಯಾಗಿ ಗೆಡ್ಡೆಗೆಣಸುಗಳನ್ನು ತಿಂದು ಜೀವಿಸು. ನೀನು ಕಾಡಿಗೆ ಹೋದರೆ ಮುನಿಗಳು, ಶತ್ರುವಾದ ನಿನ್ನನ್ನು ನೋಡಿ ತಪೋಜ್ವಾಲೆಯಿಂದ ಸುಟ್ಟು ಬೂದಿ ಮಾಡುವರು; ಇಲ್ಲದಿದ್ದರೆ, ಬಾಣಾಸುರನ ಪಟ್ಟಣಕ್ಕೆ ಹೋಗು. ಅಲ್ಲಿರುವ ಮಹಾಜನರು ಭಂಗಪಟ್ಟು ಬಂದಿರುವ ನಿನ್ನನ್ನು ಆ ಬಾಣನ ಸಂಬಂಧಿಯೆಂದು ತಿಳಿದು ರಕ್ಷಿಸುವರು; ಇತರರು ಯಾರೂ ರಕ್ಷಿಸರು. ಶಿವಪೂಜಾ ಧುರಂಧರರಾದವರು ತಮ್ಮ ಸ್ವಾಮಿಯಾದ ಶಂಕರನಿಗೆ ನೀನು ಶತ್ರುವಾಗಿರುವುದನ್ನು ತಿಳಿದು ನಿನ್ನನ್ನು ಹೊಡೆಯುವರು. ರುಕ್ಮಿಣಿಯ ಗರ್ಭದಿಂದ ಪತನವನ್ನು ಪಡೆಯದೆ ಏಕೆ ಹುಟ್ಟಿದೆ! ನೀನು ಮಾಡಿದ ಪ್ರತಿಜ್ಞೆ ಏನು? ಅದನ್ನು ನೀನು ನಡೆಯಿಸದೆ ಹೋದಮೇಲೆ

ಹೇಗೆ ಇನ್ನೂ ಜೀವಿಸುತ್ತಿದ್ದೀಯೆ? ಶೂರರೊಬ್ಬರೂ ನನ್ನ ಕೈಯಿಂದ ವೀಳೆಯವನ್ನು ತೆಗೆದುಕೊಳ್ಳದಿದ್ದರೂ ನೀನು ಮೊದಲೇ ಹೇಗೆ ತೆಗೆದುಕೊಂಡೆ?" ಎಂದನು.

ಹೀಗೆ ಹೇಳುತ್ತಿರುವ ಕೃಷ್ಣನ ಮಾತನ್ನು ಕೇಳಿ ಮಹಾಬಲನಾದ ಭೀಮಸೇನನು ಶ್ರೀಕೃಷ್ಣನ ಕೈಯನ್ನು ಹಿಡಿದುಕೊಂಡು ಆತನ ಕೋಪವನ್ನು ಸಮಾಧಾನಪಡಿಸಲು ಆತನನ್ನು ಕುರಿತು, "ಎಲೈ ಕೃಷ್ಣನೇ! ಮಾನಿಷ್ಠನಾದ ಪ್ರದ್ಯುಮ್ನನನ್ನು ಹೀಗೆ ದೂಷಿಸಬೇಡ. ಇವನು ಶತ್ರುವಿಗೆ ಹೆದರಿ ಭಗ್ನನಾಗಿಲ್ಲ. ಬಾಣದ ಪೆಟ್ಟಿನಿಂದ ವಿಮುಖನಾಗಿದ್ದಾನೆ. ನೀನು ಕೋಪಿಷ್ಠನಾಗಿ ಬಾಲಕನನ್ನು ಕಾಲಿನಿಂದ ಒದೆದೆ. ನೀನು ಆತನ ಪೌರುಷವನ್ನು ಬಲ್ಲವನಾಗಿದ್ದರೂ ಸುಮ್ಮನೆ ಪಾದಪ್ರಹಾರ ಮಾಡಿದೆ. ಜರಾಸಂಧನಿಗೆ ಹೆದರಿ ನೀನು ನಿನ್ನ ವಾಸಸ್ಥಾನವನ್ನು ಬಿಟ್ಟು ಸಾಗರದ ತೀರದಲ್ಲಿ ದ್ವಾರವತೀಪುರವನ್ನು ಕಲ್ಪಿಸಿಕೊಂಡೆ. ಎಲ್ಲರಿಗೂ ಸುಖಂಕರನಾದ ನೀನು ಇತರರ ಕಷ್ಟವನ್ನು ಮಾತ್ರ ಅರಿಯೆ. ನಿನಗಿಂತ ಬಲಿಷ್ಠನು ಯಾವನಿರುವನು? ಆದರೂ ನೀನು ಏಕೆ ಓಡಿದೆ?" ಎಂದನು. ಅದನ್ನು ಕೇಳಿ ಕೃಷ್ಣನು ಭೀಮನನ್ನು ಕುರಿತು, "ಎಲೈ ಭೀಮನೇ! ನಾನು ಇವನನ್ನು ಕ್ಷಮಿಸಿದೆನು. ವೃಷಕೇತುವಿನ ಪೌರುಷವನ್ನು ನೋಡು. ನೀನು ಹೋಗಿ ಅನುಸಾಲ್ವನ ಮೇಲೆ ಯುದ್ಧ ಮಾಡು" ಎಂದು ಹೇಳಿದನು.

ಬಳಿಕ ಯುದ್ಧವಿಶಾರದನಾದ ಭೀಮನು ಪ್ರದ್ಯುಮ್ನನೊಡನೆ ಯುದ್ಧಭೂಮಿಗೆ ಹೋಗಿ ಕೃಷ್ಣನ ಮಾತಿನಂತೆ ತಾನೊಬ್ಬನೇ ನಿಂತು ಕ್ರೋಧಾವಿಷ್ಟನಾಗಿ ಗದೆಯನ್ನು ಹಿಡಿದು ಶತ್ರು ಸೈನ್ಯವನ್ನು ಹೊಡೆದು ಕೆಡಹಿದನು: ಆನೆಗಳನ್ನು ಕತ್ತರಿಸಿ ಹಾಕಿದನು, ರಥಗಳನ್ನು ಸೀಳಿಹಾಕಿದನು, ಕುದುರೆಗಳು ಪುಡಿಪುಡಿಯಾಗಿ ಬಿದ್ದುವು, ಪದಾತಿಗಳನ್ನು ರೋಷದಿಂದ ಕೊಂದನು, ಆನೆಗಳನ್ನು ಹಿಡಿದು ಆಕಾಶಕ್ಕೆಸೆದನು, ರಥಿಕರನ್ನು ಹಯ ಸಾರಥಿಗಳೊಡನೆ ಸಜೀವವಾಗಿ ಕೈಯಿಂದ ಹಿಡಿದು ಬಡಿದು ಕೊಂದನು. ಭೀಮನು ಆನೆ, ಕುದುರೆ, ರಥ-ಇವುಗಳನ್ನು ವಿನೋದವಾಗಿ ಕೈಯಲ್ಲಿ ತೆಗೆದುಕೊಂಡು ನೆಲಕ್ಕೊಗೆದನು; ಇತರರನ್ನು ರೋಷದಿಂದ ಕಾಲಿನಲ್ಲಿ ತುಳಿದು ಚೂರ್ಣ ಮಾಡಿದನು; ಅನೇಕರು ಜೀರ್ಣದೇಹ ವುಳ್ಳವರಾಗಿ ರಕ್ತವನ್ನು ಕಾರುತ್ತ ನೆಲಕ್ಕೆ ಬಿದ್ದು ಐದು ಹೆಡೆಯುಳ್ಳ ಸರ್ಪಗಳಂತೆ ಹೊಳೆಯುತ್ತಿದ್ದರು. ಆ ವೀರರ ಭಯಂಕರವಾದ ಕೊಲೆಯಲ್ಲಿ ಭೀಮನ ಕಾಲ್ತುಳಿತದಿಂದ ಒಡೆದ ತಲೆಬುರುಡೆಗಳ ಶಬ್ದವು, ಭೂಕಂಪದಿಂದ ಉರುಳಿಕೊಂಡು ಒಡೆವ ಗಡಿಗೆ ಮಡಕೆಗಳ ಶಬ್ದದಂತೆ ಕೇಳಿಬರುತ್ತಿದ್ದಿತು. ಬಿರುಗಾಳಿ ಬೀಸುವುದರಿಂದ ಧ್ವಜಗಳೆಲ್ಲವೂ ಕಣಕಣ ಶಬ್ದ ಮಾಡುತ್ತಿದ್ದುವು. ಗಜಾರೋಹಕರು, ಅಶ್ವಾರೋಹಕರು, ರಥಿಕರು, ಪದಾತಿಗಳು-ಇವರೆಲ್ಲರ ಮಾಂಸವನ್ನು ಒಂದು ಕಡೆ ಸೇರಿಸಿ ಭೀಮನು ಒಟ್ಟಿಗೆ ತುಳಿದು ಮುದ್ದೆ ಮಾಡಿದನು. ಅಷ್ಟರಲ್ಲಿ ವೃಷಕೇತುವು ಭೀಮನನ್ನು ನೋಡಿ ಅವನು ಸಂತೋಷಪಡುವಂತೆ ಹೀಗೆ ಹೇಳಿದನು : "ಎಲೈ ಬುದ್ಧಿಶಾಲಿಯಾದ ಭೀಮಸೇನನೆ! ನನ್ನಿಂದ ಪ್ರಯೋಜನವಿರುವುದಾದರೆ ಈ ಯುದ್ಧವನ್ನು ನಾನು ವಹಿಸುವೆನು. ಲೋಭಾವಿಷ್ಟತೆಯಿಂದ ಕೂಡಿ ಮಗನ ಕೈಯಿಂದ ಕಿತ್ತುಕೊಳ್ಳುವ ತಂದೆಯು ನಿನ್ನನ್ನು

ಬಿಟ್ಟು ಮತ್ತಾವನಿರುವನು? ಈ ಯುದ್ಧವನ್ನು ನೀನು ತೆಗೆದುಕೊಳ್ಳುವುದರಿಂದ ನಿನಗೆ ತೃಪ್ತಿಯಾಗಲಾರದು. ಇಂತಹ ಸಹಸ್ರಯುದ್ಧಗಳು ಪ್ರಾಪ್ತವಾದರೂ ನಿನ್ನೆದುರಿಗೆ ಅವು ಅಲ್ಪವೆಂದು ಭಾವಿಸುವೆನು. ಒಂದು ಯುದ್ಧವು ನಿನ್ನೆದುರಿಗೆ ಯಾವ ಸುದ್ದಿ? ಎಲೈ ತಂದೆಯೇ! ಪಾಂಡವನು ಮಗನ ಕೈಯಿಂದ ಹಣ್ಣನ್ನು ಕಿತ್ತುಕೊಂಡನೆಂದು ನಿನಗೆ ಅಪಕೀರ್ತಿಯುಂಟಾಗುವುದು; ಜನರೆಲ್ಲರೂ ಹಾಗೆಯೇ ಆಡಿಕೊಳ್ಳುವರು. ಆದಕಾರಣ, ನೀನು ಈ ಯುದ್ಧವನ್ನು ನನಗಾಗಿ ಬಿಟ್ಟುಕೊಡಬೇಕು. ಸಿಂಹವು ಅಲ್ಪ ಮಾಂಸವನ್ನೆಂದಿಗೂ ಸ್ವೀಕರಿಸದು. ಅದಕ್ಕೆ ಹಸಿವು ಹೆಚ್ಚಾದರೂ ಆನೆಯನ್ನೇ ಕೊಲ್ಲುವುದಲ್ಲದೆ ಬಾಯಿಗೆ ಸಿಕ್ಕಿದ ಸರ್ಪವನ್ನೂ ಬಿಟ್ಟುಬಿಡುವುದು. ಮಹಾತ್ಮರ ಪೌರುಷವು ಲೋಕದ ಜನರೆಲ್ಲರಿಗೂ ಹಿತಕರವಾಗುತ್ತದೆ.''

ಆಗ ಭೀಮನು ವೀರನಾದ ವೃಷಕೇತುವನ್ನು ಕುರಿತು, ``ತಂದೆಯು ಹಣ್ಣನ್ನು ಹಿಂಡಿ ರಸವನ್ನು ಮಗನ ಕೈಗೆ ಕೊಡುವನು. ಆ ಹಣ್ಣನ್ನು ಬಾಲಕನೇ ತೆಗೆದುಕೊಳ್ಳುವುದಾದರೆ ತೆಗೆದುಕೊಳ್ಳಲಿ. ನಾನು ಅನುಸಾಲ್ವನ ಮೇಲೆ ಯುದ್ಧಕ್ಕೆ ಹೋಗುತ್ತೇನೆ'' ಎಂದು ಹೇಳಿ ಅನುಸಾಲ್ವನ ಬಳಿಗೆ ಹೋದನು. ಅನುಸಾಲ್ವನು ಭೀಮನು ಬರುತ್ತಿರುವುದನ್ನು ಕಂಡು ಒಂದು ಬಾಣದಿಂದ ಅವನ ಎದೆಗೆ ಬಲವಾಗಿ ಹೊಡೆಯಲು, ಭೀಮನು ಆ ಏಟನ್ನು ತಡೆಯಲಾರದೆ ಮೂರ್ಛಿತನಾಗಿ ಬಿದ್ದನು. ಶ್ರೀಕೃಷ್ಣನು ಮೂರ್ಛಿತನಾದ ಭೀಮನನ್ನು ನೋಡಿ ಕ್ರೋಧಾವಿಷ್ಟನಾಗಿ ತಾನೇ ಯುದ್ಧಕ್ಕೆ ಹೊರಟನು. ಆ ಅದ್ಭುತವನ್ನೇನು ಹೇಳಲಿ? ದಾರುಕನು ಗರುಡಧ್ವಜದಿಂದ ಮೆರೆವ ರಥವನ್ನು ತೆಗೆದುಕೊಂಡು ಬಂದನು. ಮಹಾಬಾಹುವಾದ ಅನುಸಾಲ್ವನು ಕೃಷ್ಣನನ್ನು ನೋಡಿ ``ಎಲೈ ಜನಾರ್ದನನೇ! ನಿಲ್ಲು, ನಿಲ್ಲು! ನೀನು ನನ್ನ ಬಂಧುವನ್ನು ಕೊಂದೆ; ಸೌಧಪುರವನ್ನೂ ನಾಶಮಾಡಿದೆ. ಆಗ ನಾನು ಸಮೀಪದಲ್ಲಿಯೇ ಇದ್ದೆನು. ಈಗ ನಿನ್ನೆದುರಿಗೆ ನಿನ್ನ ಮಗನನ್ನೇ ಹೊಡೆದು ಕೆಡಹಿದೆನು. ಎರಡನೆಯ ಪಾಂಡವನಾದ ಭೀಮನು ಈ ಅದ್ಭುತವನ್ನು ಕಂಡನು. ನಮ್ಮ ಪೂರ್ವಜರನ್ನು ನೀನು ಕೊಂದಾಗ ನಾನು ನಿನ್ನೆದುರಿಗಿರಲಿಲ್ಲ. ಕೃಷ್ಣನು ಎದುರಿಗೆ ಇರುವಾಗ ಎಂದಿಗೂ ಯಾರಿಗೂ ಭಂಗವಾಗುವುದಿಲ್ಲವೆಂದು ಮಹಾಜನವು ಹೇಳುತ್ತಿರುವುದು. ನಿನ್ನೆದುರಿಗೇ ನಾನು ನಿನ್ನ ಬಂಧುಗಳಿಬ್ಬರನ್ನೂ ಹೊಡೆದು ಕೆಡಹಿದೆನು. ಯೌವನಸ್ಥನಾದ ನಾನು ಯುದ್ಧಕ್ಕೆ ಸಿದ್ಧನಾಗಿ ನಿಂತಿದ್ದೇನೆ. ಪುರಾಣಪುರುಷನಾದ ನೀನು ನನ್ನೆದುರಿಗೆ ಹೇಗೆ ಯುದ್ಧಕ್ಕೆ ನಿಲ್ಲುವೆ? ನಮ್ಮಿಬ್ಬರಿಗೂ ಸಮತ್ವವಿಲ್ಲ. ನಾನು ಐದು ಬಾಣಗಳಿಂದ ನಿನ್ನನ್ನು ಹೊಡೆದರೆ ನೀನು ಎಲ್ಲಿ ಹೋಗುವೆ? ಓಡುತ್ತಿರುವ ದೇವನಾದ ನಿನಗೆ ಸತ್ಪುರುಷರ ಮನಸ್ಸೇ ಆಶ್ರಯವು. ಭಯಂಕರವಾದ ಲೋಭವೆಂಬ ಯಂತ್ರಾದಿಗಳಿಂದಲೂ, ಪ್ರಪಂಚ ಮೊದಲಾದ ಪದಾತಿಯಿಂದಲೂ ಶತ್ರುಗಳು ಜಯಿಸಲಸಾಧ್ಯವಾದ ನಿನ್ನ ಕೋಟೆಯು ಅದೇ. ಆ ಸತ್ಪುರುಷರನ್ನಾಶ್ರಯಿಸಿದರೆ ಅವರು ತಮ್ಮ ಹೃದಯದಲ್ಲಿ ಅಡಗಿಕೊಂಡಿರುವ ನಿನ್ನನ್ನು ತೋರಿಸಿಬಿಡುವರು. ನಿನ್ನ ಗುಟ್ಟನ್ನು ಯಾವಾಗಲೂ ಹೊರಪಡಿಸುವವರು ಅವರೇ. ಒಳ್ಳೆಯ ಆಲೋಚನಾಶಕ್ತಿಯಿಲ್ಲದೆ ಮಾಯಾಮೋಹಿತರಾದ ದೊರೆಗಳು ಅವರ ಸಂಗವನ್ನು

ಮಾಡುವುದಿಲ್ಲವೆಂಬುದರಲ್ಲಿ ಸಂಶಯವಿಲ್ಲ" ಎಂದು ಹೇಳುತ್ತ, ನಾಲ್ಕು ಬಾಣಗಳಿಂದ ಕೃಷ್ಣನ ಕುದುರೆಗಳನ್ನು ಹೊಡೆಯಲು, ಅವುಗಳ ದೇಹವು ಬಿರಿದುಹೋದುದರಿಂದ ಅವು ಬೆದರಿದುವು. ಆಗ ಶ್ರೀಕೃಷ್ಣನು ಯುದ್ಧವನ್ನು ಬಿಟ್ಟು ದೂರದಲ್ಲಿ ನಿಂತನು. ಆಗ ಯುದ್ಧಭೂಮಿಯಲ್ಲಿ ಕೃಷ್ಣನನ್ನು ಕಾಣದೆ ಅನುಸಾಲ್ವನು, "ಇದೇನು! ಕೃಷ್ಣನು ಕಾಣಿಸುತ್ತಿದ್ದ ಹಾಗೆಯೇ ಅದೃಶ್ಯನಾದನು! ಈಗ ಇಲ್ಲಿ ನನ್ನಿಂದಲೂ ಇತರರಿಂದಲೂ ಯಾವ ತಪ್ಪೂ ನಡೆದಿಲ್ಲ. ನಮ್ಮ ರಾಜ್ಯದಲ್ಲಿ ಶೂದ್ರನು ಯಾವನಾದರೂ ಬ್ರಾಹ್ಮಣೀ ಸಂಗಮ ಮಾಡಿದನೆ? ಅಥವಾ ನನ್ನ ರಾಷ್ಟ್ರದಲ್ಲಿ ದುಷ್ಟನು ಯಾವನಾದರೂ ಧನವನ್ನು ತೆಗೆದುಕೊಂಡು ತನ್ನ ಮಗಳನ್ನು ಯಾರಿಗಾದರೂ ಕೊಟ್ಟನೇ? ಇಲ್ಲವೇ, ಬುದ್ಧಿಹೀನನಾದವನು ಯಾವನಾದರೂ ರಜಸ್ವಲೆಯಾದ ತನ್ನ ಮಗಳನ್ನು ವಿವಾಹ ಮಾಡದೆ ತನ್ನ ಮನೆಯಲ್ಲಿಯೇ ಇಟ್ಟುಕೊಂಡಿರುವನೇ? ಅಥವಾ, ದುರ್ವೃತ್ತರಾಗಿಯೂ ಪಾಪಿಷ್ಠರಾಗಿಯೂ ಇರುವ ನನ್ನ ಭೃತ್ಯರಿಂದ ಪುತ್ರಹೀನನಾದವನ ಧನವು ಯಾವುದಾದರೂ ನನ್ನ ಭಂಡಾರಕ್ಕೆ ಬಂದು ಸೇರಿದೆಯೆ? ಯಾವನಾದರೊಬ್ಬ ಮೂಢನು ರಜಸ್ವಲೆಯಾದ ತನ್ನ ಪತ್ನಿಯನ್ನು ದಿವಾಗಮನ ಮಾಡಿದನೇ? ತನ್ನ ಪತ್ನಿಯು ಶುದ್ಧಸ್ನಾನ ಮಾಡಿದ ಮೇಲೆ ರಾತ್ರಿಯಲ್ಲಿ ಆಕೆಯ ಸಂಗವನ್ನು ಯಾವನಾದರೂ ತ್ಯಜಿಸಿದನೇ? ಕಾಮಿಗಳಿಗೆ ಲೋಕದಲ್ಲಿ ಭ್ರೂಣಹತ್ಯಾ ದೋಷವು ಬಂದೇ ಬರವುದು. ನಾನು ಪ್ರಜೆಗಳ ಪಾಪದ ಆರನೆಯ ಒಂದು ಭಾಗಕ್ಕೆ ಗುರಿಯಾದುದರಿಂದ ಆ ದೋಷವು ನನಗೆ ಕೃಷ್ಣನು ಕಾಣಿಸದಂತೆ ಮಾಡಿರುವುದೇ? ಯುದ್ಧದಲ್ಲಿ ಕಾಣಿಸುತ್ತಿದ್ದ ಕೃಷ್ಣನು ಹಾಗೆಯೇ ಕಾಣಿಸದೆ ಹೋಗಿರುವನಲ್ಲಾ? ಯಾರನ್ನು ಕೇಳಲಿ? ಯಾವನು ನನಗೆ ಕೃಷ್ಣನನ್ನು ತೋರಿಸುವನೋ ಅವನಿಗೆ ನನ್ನಿಂದಾರ್ಜಿತವಾದ ಪುಣ್ಯವನ್ನೆಲ್ಲ ಕೊಟ್ಟುಬಿಡುವೆನು. ಸರ್ವಪಾಪ ಪ್ರಣಾಶಕನಾದ ಶ್ರೀಕೃಷ್ಣನ ದರ್ಶನವಾಗದೆ ಹೋದ ಮೇಲೆ ಅಂತಹ ಪುಣ್ಯದಿಂದ ಲೋಕದಲ್ಲಿ ಪ್ರಯೋಜನವೇನು? ಹಂಸ ತೀರ್ಥೋದಕವನ್ನು ಪಾನ ಮಾಡಿದವನು ಹೇಗೆ ಸರ್ವ ಪಾಪ ಕ್ಷಯವನ್ನು ಹೊಂದಿ ಶುದ್ಧನಾಗುವನೋ ಹಾಗೆಯೇ ಶ್ರೀಕೃಷ್ಣದರ್ಶನದಿಂದ ಶುದ್ಧನಾಗುವನು" ಎಂದು ಹೇಳುತ್ತಿರುವಷ್ಟರಲ್ಲಿ ಶ್ರೀಕೃಷ್ಣನು ಪುನಃ ಯುದ್ಧಕ್ಕೆ ನಿಂತು ನಗುತ್ತ ಅನುಸಾಲ್ವನ ಮೇಲೆ ಮೂರು ಬಾಣಗಳನ್ನು ಪ್ರಯೋಗಿಸಿದನು. ಅನುಸಾಲ್ವನು ಅವುಗಳನ್ನು ಒಂದೇ ಬಾಣದಿಂದ ಕತ್ತರಿಸಿ ಶ್ರೀಕೃಷ್ಣನನ್ನು ಕುರಿತು ಇಂತೆಂದನು:

"ಎಲೈ ಕೃಷ್ಣನೇ! ನನ್ನ ಪರಾಕ್ರಮವನ್ನು ನೋಡಿದೆಯಾ? ಈ ಯುದ್ಧದಲ್ಲಿ ನಿನ್ನ ಮೂರು ಬಾಣಗಳನ್ನೂ ನಾನು ವೇಗವುಳ್ಳ ಒಂದೇ ಬಾಣದಿಂದ ನಾಶಮಾಡಿದೆನು. ನನ್ನ ಒಂದು ಬಾಣವನ್ನು ಕೆಡಹುವುದಕ್ಕೂ ನಿನಗೆ ಶಕ್ತಿ ಇಲ್ಲ. ಈ ಯುದ್ಧದಲ್ಲಿ ಸ್ಥಿರವಾಗಿ ನಿಂತು ಈ ಬಾಣವನ್ನು ಸಹಿಸು" ಎಂದು ಕೃಷ್ಣನ ಎದೆಗೆ ಪ್ರಯೋಗಿಸಿದನು. ಅದರ ಏಟಿನಿಂದ ಸಂತುಷ್ಟನಾದನೋ ಎಂಬಂತೆ ಕೃಷ್ಣನು ಮೂರ್ಛೆಹೋಗಲು, ದಾರುಕನು ನೋಡಿ, ಶ್ರೀಕೃಷ್ಣನು ಸಂತುಷ್ಟನಾಗಿರುವುದನ್ನು ಅವನ ತೇಜೋ ವಿಶೇಷದಿಂದ ತಿಳಿದು ರಣಭೂಮಿಯಿಂದ ರಥವನ್ನು ಹಿಂದಿರುಗಿಸಿಕೊಂಡು ಧರ್ಮರಾಜನಿದ್ದೆಡೆಗೆ ಬಂದನು.

ಕೃಷ್ಣನ ಸ್ಥಿತಿಯನ್ನು ನೋಡಿ ಹಾಹಾಕಾರವುಂಟಾಯಿತು. ಪಾಂಡವರೆದುರಿಗೇ ಅವರ ಸೈನ್ಯವು ಹೆದರಿ ಓಡುತ್ತಿದ್ದಿತು. ಯುದ್ಧದಲ್ಲಿ ಮೃತರಾದ ತಂದೆ, ಮಗ, ಬಂಧು, ಮಿತ್ರ, ಬಾಂಧವ ಮೊದಲಾದವರನ್ನು ಬಿಟ್ಟು ಓಡುತ್ತ, ಕೆಲವರು ಒಬ್ಬರೊಬ್ಬರಿಗೆ ತಂದೆಯು, "ಎಲೈ ಮಗನೇ! ನಾನು ಬಿದ್ದೆನು. ನನ್ನನ್ನು ಇಲ್ಲಿಂದ ತೆಗೆದುಕೊಂಡುಹೋಗು" ಎಂದು ಕೂಗಿಕೊಳ್ಳುತ್ತಲೂ, ಮಗನು ತಂದೆಯನ್ನು ಬಿಟ್ಟು ಓಡುತ್ತ ಹಾಗೆಯೇ ನಿಂತು, "ತಂದೆಯೇ! ನಿನಗೆ ಗಯಾ ಕ್ಷೇತ್ರದಲ್ಲಿ ಶ್ರಾದ್ಧ ಮಾಡುವೆನು" ಎಂದು ಹೇಳಿ ಹೋಗುತ್ತಲೂ ಇದ್ದರು. ಅಷ್ಟರಲ್ಲಿ ಅನುಸಾಲ್ವನಿಗೆ ಹೆದರಿ ಬೇರೆ ಕೆಲವರು ಓಡಿಬಂದರು. ಬುದ್ಧಿಶಾಲಿಯಾದ ದಾರುಕನು ಶ್ರೀಕೃಷ್ಣನನ್ನು ಮೇನಾದಲ್ಲಿ ಕರೆದುಕೊಂಡು ಬಂದನು. ಶ್ರೀಕೃಷ್ಣನನ್ನು ನೋಡಿ ರುಕ್ಮಿಣಿ ಮೊದಲಾದ ಆತನ ಪತ್ನಿಯರೆಲ್ಲರೂ ಹಾಹಾಕಾರ ಮಾಡುತ್ತ ಓಡಿಬಂದರು. ಸತ್ಯಭಾಮೆಯು ಎಚ್ಚತ್ತಿದ್ದ ಕೃಷ್ಣನನ್ನು ನೋಡಿ, "ವಿಮುಖನಾಗಿ ಬಂದ ರಣಧೀರನಾದ ಪ್ರದ್ಯುಮ್ನನನ್ನು ಕುರಿತು, ನೀನು ಕಠಿನವಾಗಿಯೂ ದುಃಖಕರವಾಗಿಯೂ ಇರುವ ಮಾತುಗಳನ್ನಾಡಿದೆಯಷ್ಟೆ! ಈಗ ನೀನು ಏಕೆ ಅನುಸಾಲ್ವನಿಗೆ ಹೆದರಿ ಹಿಂದಿರುಗಿ ಬಂದೆ? ಮೃತ್ಯುವನ್ನು ಕಂಡಂತೆ ಎಲ್ಲರೂ ಹೆದರಿ ಓಡುತ್ತಿರುವರು. ಎಲೈ ಜಗನ್ನಾಥನೇ! ನಿನ್ನನ್ನು ಹೆದರಿಸಿ ಓಡಿಸಿದ ಆ ಅನುಸಾಲ್ವನನ್ನು ಮಹಾಯುದ್ಧದಲ್ಲಿ ಕೊಲ್ಲಲು ನಾನು ಕಾಳಿಯಾಗಿ ಹೊರಡಲೇ? ನಿನ್ನನ್ನು ಆಯುಧಗಳು ಕತ್ತರಿಸಲಾರವು, ಬೆಂಕಿಯು ಸುಡಲಾರದು, ಎಲೈ ಕೃಷ್ಣನೇ! ಹೀಗಿದ್ದರೂ ನೀನೇಕೆ ಓಡಿ ಬಂದೆ? ನೀನು ಹೇಗೆ ನಿನ್ನ ಮಗನನ್ನು ಕಾಲಿನಿಂದ ಬಹಳವಾಗಿ ಒದೆದೆಯೊ ಹಾಗೆ ನಿನ್ನನ್ನೊದೆಯಲು ವಸುದೇವನು ದೂರದಲ್ಲಿರುವನಷ್ಟೆ! ಕಳೆದುದು ಕಳೆದೇ ಹೋಗಲಿ. ಅನುಸಾಲ್ವನಿಂದ ಕುದುರೆಯನ್ನು ಹಿಂದಿರುಗಿಸಲು ಮುಂದೆ ಏನು ಉಪಾಯವೋ ಅದನ್ನು ಚಿಂತಿಸು" ಎಂದು ಹೇಳಿದಳು.

# ತುರಗಗ್ರಹಣ

ಸತ್ಯಭಾಮೆಯ ಮಾತನ್ನು ಕೇಳಿ ಶ್ರೀಕೃಷ್ಣನು ಪುನಃ ಅನುಸಾಲ್ವನ ಮೇಲೆ ಯುದ್ಧ ಮಾಡಲು ಹೊರಟನು. ಯುದ್ಧಭೂಮಿಗೆ ಬಂದ ಕೃಷ್ಣನನ್ನು ನೋಡಿ ವೃಷಕೇತುವು, ಅನುಸಾಲ್ವನನ್ನು ನಿಲ್ಲುನಿಲ್ಲೆಂದು ಕೂಗಿ ನಸುನಗುತ್ತ, ಅವನನ್ನು ಏಳು ಬಾಣಗಳಿಂದ ಹೊಡೆದನು. ಅವನು ಅದನ್ನು ಸಹಿಸಿಕೊಂಡು ಹರಿತವಾದ ಹತ್ತು ಬಾಣಗಳಿಂದ ವೃಷಕೇತುವಿನ ಎದೆಗೆ ಹೊಡೆದು, ನಾಲ್ಕು ಬಾಣಗಳನ್ನು ಪ್ರಯೋಗಿಸಿ ಅವನ ಕುದುರೆಗಳನ್ನು ಕೆಡಹಿದನು; ಸಾರಥಿಯ ತಲೆಯನ್ನು ಕತ್ತರಿಸಲು, ವಿರಥನಾದ ವೃಷಕೇತುವನ್ನು ನೋಡಿ ಸೂರ್ಯನ ಸಾರಥಿಯಾದ ಅರುಣನು ಮತ್ತೊಂದು ರಥವನ್ನು ತೆಗೆದುಕೊಂಡು ಬಂದನು. ಬಲಶಾಲಿಯಾದ ವೃಷಕೇತುವು ಆ ರಥವನ್ನು ಹತ್ತಿ ಪುನಃ ಅನುಸಾಲ್ವನನ್ನು ತೀಕ್ಷ್ಣಗಳಾದ ಬಾಣಗಳಿಂದ ಮುಚ್ಚಿದನು; ಅವನ ಸಾರಥಿಯನ್ನೂ ಕುದುರೆಗಳನ್ನೂ ಲೀಲಾಮಾತ್ರದಿಂದ ನಗುತ್ತ ಹೊಡೆದು ಕೆಡಹಲು, ಆ ದೈತ್ಯನು ರಥದಲ್ಲಿ ನಿಂತಿದ್ದ ವೃಷಕೇತುವನ್ನು ಥಟ್ಟನೆ ಹಿಡಿದು ಮೇಲಕ್ಕೆತ್ತಿ ಕೋಪದಿಂದ ನೆಲಕ್ಕೊಗೆದನು. ಅದಕ್ಕೆ ಅವನು ಕೋಪಿಸಿಕೊಂಡು ಆ ಅನುಸಾಲ್ವನನ್ನು ರಥಸಹಿತವಾಗಿ ನೆಲಕ್ಕೆ ಕೆಡಹಿ ಮತ್ತೆ ಅವನನ್ನು ಹಿಡಿದು ಕೃಷ್ಣನ ಬಳಿಗೆ ತೆಗದುಕೊಂಡು ಹೋಗಿ ಅವನ ಕೈಗೆ ಕೊಟ್ಟು, “ಎಲೈ ಕೃಷ್ಣನೇ! ನಮ್ಮ ಕುದುರೆಯನ್ನು ಹಿಡಿದುಕೊಂಡಿದ್ದ ಸಮರ್ಥನಾದ ಇವನನ್ನು ನೋಡು, ನಿನ್ನ ಅನುಗ್ರಹದಿಂದ ಇವನು ಸಿಕ್ಕಿದನು. ನನ್ನ ಪ್ರತಿಜ್ಞೆಯು ಸಫಲವಾಗಲಿ” ಎಂದನು. ಅದಕ್ಕೆ ಕೃಷ್ಣನು, “ಎಲೈ ವೃಷಕೇತುವೇ! ನೀನು ಆಡಿದ ಮಾತನ್ನುಳಿಸಿಕೊಂಡೆ. ನೀನೇ ಧನ್ಯನು. ನಿನ್ನನ್ನು ಬಿಟ್ಟು ಅನುಸಾಲ್ವನನ್ನು ಯುದ್ಧದಿಂದ ಹಿಡಿದು ತರುವ ಸಾಮರ್ಥ್ಯವು ಮತ್ತಾರಿಗಿರುವುದು?” ಎಂದು ಹೇಳುತ್ತಿರುವಾಗ, ಅನುಸಾಲ್ವನು ಎಚ್ಚತ್ತು ಮೇಘಶ್ಯಾಮನಾಗಿಯೂ ಜಗತ್ಪತಿಯಾಗಿಯೂ ಯದುಶ್ರೇಷ್ಠನಾಗಿಯೂ ಇರುವ ಶ್ರೀಕೃಷ್ಣನನ್ನು ತನ್ನ ಮುಂದೆ ಕಂಡು, ವಿವೇಕಿಯಾದ ಕರ್ಣಪುತ್ರನನ್ನು ಕುರಿತು, “ಎಲೈ ವೀರನೇ! ನಾನು ನಿನಗೆ ಸೋತು ಕೃಷ್ಣನಿಗೆ ಶರಣಾಗತನಾಗಿದ್ದೇನೆ. ತಂದೆ ತಾಯಿ ಗುರು ಬಾಂಧವರು ದೇವತೆಗಳು ಮೊದಲಾದವರು ಯಾರೂ ಇಷ್ಟು ಬೇಗನೆ ಈ ದೇವದೇವನನ್ನು ತೋರಿಸಲಾರರು. ಶತ್ರುವಾದ ನೀನು ನನ್ನನ್ನು ಜಯಿಸಿ ಶ್ರೀಕೃಷ್ಣನ ದರ್ಶನವನ್ನು ಮಾಡಿಸಿದೆ. ಇದರಿಂದ ನಮ್ಮ ಬಂಧುಗಳೆಲ್ಲರಿಗೂ ಸದ್ಗತಿಯುಂಟಾಯಿತು. ಶ್ರೀಕೃಷ್ಣನ ಸಾನ್ನಿಧ್ಯವು ಸಿಕ್ಕಿದುದು ನನಗೆ ಆಶ್ಚರ್ಯವನ್ನುಂಟು ಮಾಡಿದೆ. ಇನ್ನು ಶುಭವೂ ಸಂತೋಷವೂ ಉಂಟಾಗುವುವು. ಯಾರಿಬ್ಬರಿಗೆ ಪರಸ್ಪರ ಶತ್ರುತ್ವವಿದ್ದಿತೋ ಅವರಿಬ್ಬರಿಗೂ ನಿನ್ನ ಪೌರುಷದಿಂದ ಸ್ನೇಹವಾಯ್ತು. ಪ್ರಭುಗಳ ಮಹಿಮೆಯಿಂದ ಅವರೊಡನೆ ಸೇರಿದ ಯುಕ್ತಾಯುಕ್ತ ವಸ್ತುಗಳೆರಡೂ ಸಮಾನಗಳಾಗುವುವು. ಈಶ್ವರನಲ್ಲಿ ಅಮೃತವೂ ವಿಷವೂ ಸರ್ವದಾ ಸೇರಿಕೊಂಡಿರುವುವಷ್ಟೆ! ದಾತೃಗಳು ಶ್ರೀಹರಿಯ ಪಾದಕಮಲವನ್ನು

ತೋರಿಸಬಲ್ಲರೇ? ನಿನಗೆ ಸಮಾನನಾದ ದಾತೃವು ಮತ್ತಾವನಿರುವನು?" ಎಂದು ಹೇಳಿದನು.

ಅದನ್ನು ಕೇಳಿ ವೃಷಕೇತುವು, "ಎಲೈ ವೀರನೇ! ಶೇಷನೇ ಮೊದಲಾದ ಯೋಗಿಗಳೆಲ್ಲರೂ ಶ್ರೀಕೃಷ್ಣನನ್ನು ನೋಡಿ ಮೂಕರಂತೆ ಸುಮ್ಮನಿರುವರು. ನೀನು ಈತನ ಪಾದಸಾನ್ನಿಧ್ಯವನ್ನು ಪಡೆದು ಮಾತನಾಡುತ್ತಿರುವುದು ನನಗೆ ಬಹಳ ಆಶ್ಚರ್ಯಕರವಾಗಿ ತೋರುತ್ತಿದೆ" ಎನ್ನಲು ಅನುಸಾಲ್ವನು, "ಎಲೈ ವೃಷಕೇತುವೇ! ಧ್ರುವನಿಗೆ ಕೊಟ್ಟಂತೆ ಈತನು ನನಗೆ ಶುಭಲೋಕಗಳನ್ನು ಕೊಟ್ಟಿರುವುದರಿಂದ ನಾನು ಈತನನ್ನು ಸ್ತುತಿಸುವುದಕ್ಕಾಗಿ ನಿನ್ನೆದುರಿಗೆ ಮಾತನಾಡಲುಪಕ್ರಮಿಸಿರುವೆನು. ಲೋಕಸ್ರಷ್ಟ್ರು ವಾಗಿಯೂ ಶಾಸ್ತ್ರಕರ್ತೃ ವಾಗಿಯೂ ಇರುವ ಈ ಕೃಷ್ಣನು ನನ್ನ ಬಾಣದ ಪೆಟ್ಟಿನಿಂದ ಭೀಮನೆದುರಿಗೆ ರಣಭೂಮಿಯನ್ನು ಬಿಟ್ಟು ಹೊರಟುಹೋದನು. ವಿಶ್ವರೂಪನಾಗಿರುವ ಈ ವಿಷ್ಣುವಿನ ದೇಹಕ್ಕೆ ಶಸ್ತ್ರಬಾಧೆಯುಂಟೇ! ಯಾವನ ಸ್ಮರಣಮಾತ್ರದಿಂದ ಮನುಷ್ಯರು ಶಂಖಚಕ್ರಗದಾಧರರೂ ಗರುಡಾರೂಢರೂ ಆಗುವರೋ ಆತನು ತಾನು ಮತ್ಸ್ಯ ಕೂರ್ಮ ವರಾಹ ನಾರಸಿಂಹನಾಗಿ ಅವತರಿಸಿದನು. ಯಾವನ ಅನುಗ್ರಹದಿಂದ ದೇವೇಂದ್ರನೂ ನಾನಾ ವಿಧರಾದ ಅಪ್ಸರಸ್ತ್ರೀಯರೂ ಇರುವರೋ ಅಂತಹ ವಿಷ್ಣುವು ತಾನು ಗೋಪಾಲವೇಷವನ್ನು ಧರಿಸಿ ಕುಬ್ಜೆಯ ಬಳಿಗೆ ಬಂದನು. ನಾನಾ ರತ್ನಮಯವಾದ ಈ ಜಗತ್ತನ್ನು ಸಂರಕ್ಷಿಸುವ ಶ್ರೀಕೃಷ್ಣನು ರಾತ್ರಿಯಲ್ಲಿ ದ್ರೌಪದಿಯು ಕೊಟ್ಟ ಶಾಕಪತ್ರವನ್ನು ಭುಜಿಸಿದನು, ಸುಧಾಮನು ಕೊಟ್ಟ ಸ್ವಲ್ಪ ಹಿಟ್ಟನ್ನು ತಿಂದು ತೃಪ್ತನಾಗಿ ಹರ್ಷಿಸಿದನು. ದೇವತೆಗಳು ನಂದನವನ ಮೊದಲಾದ ದಿವ್ಯೋದ್ಯಾನಗಳಲ್ಲಿ ವಿಹರಿಸುತ್ತಿದ್ದರೂ ಶ್ರೀಹರಿಯು ಕೃಷ್ಣತುಲಸೀವನದಲ್ಲಿ ಕ್ರೀಡಿಸುತ್ತಿರುವನು" ಎಂದು ಹೇಳುತ್ತಿರುವ ಅನುಸಾಲ್ವನನ್ನು ಶ್ರೀಕೃಷ್ಣನು ಪರಮಹರ್ಷದಿಂದ ಆಲಂಗಿಸಿ ಆತನ ಬಲಗೈಯನ್ನು ಹಿಡಿದುಕೊಂಡು ಆತನಿಗೆ ಧರ್ಮರಾಜನನ್ನು ತೋರಿಸಿದನು.

ಬಳಿಕ ಅನುಸಾಲ್ವನು ಧರ್ಮನಂದನನಿಗೆ ನಮಸ್ಕರಿಸಿ ಮುಂದೆ ನಿಲ್ಲಲು, ಧರ್ಮರಾಜನು ಆತನನ್ನು ಕುರಿತು ಆದರಪೂರ್ವಕವಾಗಿ, "ಎಲೈ ಅನುಸಾಲ್ವನೇ! ಈಗ ನೀನು ನನಗೆ ಭೀಮಾದಿಗಳೊಡನೆ ಐದನೆಯ ಬಂಧುವಾಗಿದ್ದೀಯೆ. ಕೃಷ್ಣನು ಯಜ್ಞರಕ್ಷಣೆ ಮಾಡುವಂತೆ ನೀನೂ ನಿತ್ಯವೂ ರಕ್ಷಣೆ ಮಾಡು" ಎಂದು ಹೇಳಲು, ಬಳಿಕ ಅನುಸಾಲ್ವನು ಭೀಮಾದಿಗಳನ್ನಾಲಿಂಗಿಸಿ ಧರ್ಮರಾಜನನ್ನು ಕುರಿತು, "ಯುಧಿಷ್ಠಿರನ ಕಾರ್ಯಾರ್ಥವಾಗಿ ನಾನು ನನ್ನ ತೋಳುಗಳನ್ನೂ ತಲೆಯನ್ನೂ ಯಾವಾಗ ಎಲ್ಲಿ ಬೇಕಾದರೂ ಒಪ್ಪಿಸಲು ಸಿದ್ಧನಾಗಿರುವೆನು" ಎಂದು ಹೇಳಿ ಸುಮ್ಮನಾದನು. ಬಳಿಕ ವೃಷಕೇತುವು ಉಳಿದ ದೊರೆಗಳೆಲ್ಲರನ್ನೂ ಗೆದ್ದು ಕುದುರೆಯನ್ನು ಧರ್ಮರಾಜನ ಬಳಿಗೆ ತೆಗೆದುಕೊಂಡು ಬಂದನು. ಧರ್ಮನಂದನನು ಅದನ್ನು ನೋಡಿ ಸಂತುಷ್ಟನಾಗಿ, "ಎಲೈ ವೃಷಕೇತುವೇ! ನೀನು ಧನ್ಯನು. ನನ್ನೆದುರಿಗೆ ನಿನ್ನ ಪ್ರತಿಜ್ಞೆಯು ಸಫಲವಾಯ್ತು,

ಪುಣ್ಯವಶದಿಂದ ಅನುಸಾಲ್ವನು ನಮಗೆ ಬಂಧುವಾದನು. ನನ್ನ ಕಾರ್ಯವೆಲ್ಲವೂ ಈಗ ಸುಖಕರವಾಗಿ ನೆರವೇರಿತು. ನನಗೆ ಪ್ರಿಯರಾದ ಪ್ರದ್ಯುಮ್ನನೂ ನೀನೂ ಕ್ಷೇಮದಿಂದ ಬಂದಿರಿ" ಎಂದು ಆ ಶೂರರಿಬ್ಬರನ್ನೂ ಸಂತೋಷದಿಂದ ಹೊಗಳಿ ಕುದುರೆಯನ್ನು ತೆಗೆದುಕೊಂಡು ವೀರರೊಡನೆ ಹಸ್ತಿನಪುರವನ್ನು ಹೊಕ್ಕನು.

ಅನಂತರದಲ್ಲಿ ಧರ್ಮರಾಜನು ಬ್ರಾಹ್ಮಣರೊಡನೆಯೂ ಕೃಷ್ಣನೊಡನೆಯೂ ಸಭೆಯಲ್ಲಿ ಕುಳಿತನು. ದೇವಕಿ, ಯಶೋದೆ, ಕುಂತಿ, ರೋಹಿಣಿ, ರುಕ್ಮಿಣಿ, ಸತ್ಯಭಾಮೆ ಮೊದಲಾದ ಸ್ತ್ರೀಯರಿಗೂ, ಅರುಂಧತಿ, ಅನಸೂಯೆ-ಇವರಿಗೂ ಸುವಾಸಿನೀ ಪೂಜೆಯು ನಡೆಯಿತು. ಅಲ್ಲಿ ಸೇರಿದ್ದ ರಾಜರು ಪರಸ್ಪರವಾಗಿ ಆದರಣೆಯನ್ನು ಪಡೆದರು. ಭಕ್ಷ್ಯಭೋಜ್ಯ ಪಾನೀಯಗಳಿಂದಲೂ ಚಂದನಾಗುರು ಧೂಪಗಳಿಂದಲೂ, ಶಾಲು ಉಡುಗೊರೆ ಗಳಿಂದಲೂ, ಅಶ್ವಗಜ ದಾನದಿಂದಲೂ ಉಪಚಾರಗಳು ನಡೆದು ಯಜ್ಞಾರಂಭವಾಯಿತು. ಕೃಷ್ಣನು ಬಂದಮೇಲೆ ಹೀಗೆ ಇಪ್ಪತ್ತು ದಿನಗಳಾಗಲು, ಧರ್ಮನಂದನನು ಚೈತ್ರಶುದ್ಧ ಪೌರ್ಣಮೀ ದಿನ ಯಜ್ಞ ದೀಕ್ಷಿತನಾದನು. ದ್ರೌಪದಿಯೊಡನೆ ತಾನು ಕ್ರೂರವಾದ ಅಸಿಪತ್ರವ್ರತವನ್ನು ಮಾಡುತ್ತ, ವೇದಸಂಪನ್ನರಾದ ಬ್ರಾಹ್ಮಣರನ್ನು ಕರೆಯಿಸಿ, ಬಹು ಧನವ್ಯಯಮಾಡಿ, ಗೀತವಾದ್ಯ ವೇದಘೋಷಗಳಿಂದ ಯಥಾವಿಧಿಯಾಗಿ ಕುದುರೆಯನ್ನು ಪೂಜಿಸಿ, ಅದರ ಹಣೆಯಲ್ಲಿ ಪತ್ರವನ್ನು ಬರೆದು ಕಟ್ಟಿ, ಯಜ್ಞಾರ್ಥವಾಗಿ ಅದನ್ನು ಕುಂಕುಮ ಚಂದನ ಮಾಲ್ಯಧೂಪಾದಿಗಳಿಂದ ಅರ್ಚಿಸಿ, ಚಾಮರಗಳನ್ನು ಕಟ್ಟಿ, ಅಶ್ವರಕ್ಷಣೆಗಾಗಿ ಅರ್ಜುನನನ್ನು ನಿಯಮಿಸಲು, ಆತನು ಸ್ನಾನಮಾಡಿ ಶುಭ್ರವಸ್ತ್ರವನ್ನು ಧರಿಸಿ ದೂರ್ವಾಚಂಪಕಮಾಲೆಯನ್ನು ಕೊರಲಲ್ಲಿ ಹಾಕಿಕೊಂಡು ಕಿರೀಟವನ್ನಿಟ್ಟು ಗಾಂಡೀವವನ್ನು ತೆಗೆದುಕೊಂಡು ಛತ್ರಚಾಮರಗಳಿಂದ ವಿರಾಜಿಸುತ್ತ ಹೊರಟನು. ಆಗ ಧರ್ಮರಾಜನು, "ನೀನು ಯಜ್ಞಾಶ್ವವನ್ನು ರಕ್ಷಣೆ ಮಾಡು. ಭಗವದನು ಗ್ರಹದಿಂದ ನಿನ್ನ ಕಾರ್ಯವು ನಿರ್ವಿಘ್ನವಾಗಲಿ. ನಿನಗೆ ಮಾರ್ಗದಲ್ಲಿ ಶುಭವಾಗಲಿ. ನೀನು ಜಯಶಾಲಿಯಾಗು. ಸಹಾಯಾರ್ಥವಾಗಿ ಹೊರಟಿರುವವರೊಡನೆ ನೀನೂ ಕ್ಷೇಮವಾಗಿ ಹಿಂದಿರುಗಿಬಂದು ಸೇರು. ದೀನಾನಾಥರನ್ನೂ ಸಜ್ಜನರನ್ನೂ ಶರಣಾಗತರಾಗಿ ಅಂಜಲಿಬದ್ಧರಾದವರನ್ನೂ, ತಂದೆತಾಯಿಗಳಿಲ್ಲದ ಬಾಲಕರನ್ನೂ ಯುದ್ಧದಲ್ಲಿ ಕೊಲ್ಲದಿರು" ಎಂದು ಹೇಳಿದನು.

ಅದನ್ನು ಕೇಳಿ ಅರ್ಜುನನು ಅಣ್ಣನಿಗೆ ನಮಸ್ಕರಿಸಿ ಅಲ್ಲಿಂದ ಹೊರಟು, ಕುಂತಿಯನ್ನೂ ದೇವಕಿಯನ್ನೂ ಕೇಳುವುದಕ್ಕಾಗಿ ಬಂದು ಅವರಿಗೆ ನಮಸ್ಕರಿಸಿ ಅರುಂಧತಿ, ಅನಸೂಯೆ, ರುಕ್ಮಿಣಿ, ಗಾಂಧಾರಿ, ಧೃತರಾಷ್ಟ್ರ ಮೊದಲಾದವರನ್ನು ಕುರಿತು, "ನಮ್ಮ ಅಣ್ಣನು ಅಶ್ವರಕ್ಷಣೆಗಾಗಿ ನನ್ನನ್ನು ನೇಮಿಸಿರುವುದರಿಂದ ನಾನು ಹೋಗಿಬರುವೆನು" ಎಂದು ಸಂತೋಷದಿಂದ ಹೇಳಲು, ಕುಂತಿಯು ಅವನನ್ನು

ಆಲಿಂಗಿಸಿಕೊಂಡು, "ಧರ್ಮರಾಜನಿ ಗಾಗಿ ನೀನು ಹೊರಡುವೆಯಷ್ಟೆ! ನಿನಗೆ ಸಹಾಯಕರಾರು? ಇದಕ್ಕಾಗಿ ಧರ್ಮರಾಜನು ಎಷ್ಟು ಸೈನ್ಯವನ್ನು ನಿನ್ನ ವಶಕ್ಕೆ ಕೊಟ್ಟಿರುವನು?" ಎಂದು ಕೇಳಿದಳು. ಅದಕ್ಕೆ ಅರ್ಜುನನು ಕುಂತಿಯನ್ನು ಕುರಿತು, "ಕೃಷ್ಣನು ತನ್ನ ಸೇನೆಯೊಡನೆ ತನ್ನ ಮಗನಾದ ಪ್ರದ್ಯುಮ್ನನನ್ನು ಕಳುಹಿಸಿ, "ಎಲೈ ಪುತ್ರನೇ! ನನ್ನ ಅಪ್ಪಣೆಯ ಪ್ರಕಾರ ನೀನು ಅಶ್ವರಕ್ಷಾರ್ಥವಾಗಿಯೂ ಅರ್ಜುನನ ರಕ್ಷಣಾರ್ಥವಾಗಿಯೂ ಹೊರಡು; ನನಗೆ ಅರ್ಜುನನು ಪ್ರಾಣಕ್ಕೆ ಸಮಾನನು. ನನ್ನನ್ನು ಹೇಗೋ ಹಾಗೆ ನೀನು ಅವನನ್ನು ರಕ್ಷಣೆ ಮಾಡು. ತಂದೆಯು ತನ್ನ ಸರ್ವಸ್ವವನ್ನೂ ಮಗನ ವಶ ಮಾಡುವನು, ಸದ್ವರ್ತನೆಯುಳ್ಳವನು ರಕ್ಷಿಸುವನು, ದುರ್ವೃತ್ತನು ನಾಶಪಡಿಸುವನು' ಎಂದು ಹೇಳಿರುವನು. ಹಾಗೆಯೇ ವೃಷಕೇತುವನ್ನು ಕುರಿತು, 'ಎಲೈ ವೃಷಧ್ವಜನೇ! ನನ್ನ ಮಗನನ್ನೂ ಕುದುರೆಯನ್ನೂ ಎಲ್ಲವನ್ನೂ ನನ್ನ ಆಜ್ಞೆಯಂತೆ ನೀನು ರಕ್ಷಿಸು' ಎಂದು ಹೇಳಿ, ನನ್ನ ಸಹಾಯಾರ್ಥವಾಗಿ ಬಲಿಷ್ಠನಾದ ಅನುಸಾಲ್ವನನ್ನೂ ಯೌವನಾಶ್ವನನ್ನೂ ಅವನ ಮಗನನ್ನೂ ನೇಮಿಸಿ ನನ್ನನ್ನು ಕಳುಹಿಸಿರುವನು. ಆದಕಾರಣ ನನ್ನ ವಿಷಯದಲ್ಲಿ ನೀನು ಚಿಂತಿಸಬೇಕಾಗಿಲ್ಲ. ನನಗೆ ಸ್ವಾಮಿಯಾದ ಶ್ರೀಕೃಷ್ಣನು ಅನುಗ್ರಹಿಸುವನು" ಎಂದನು. ಆಗ ಕುಂತಿಯು ಅರ್ಜುನನನ್ನು ಕುರಿತು "ಎಲೈ ಪಾರ್ಥನೆ! ಎಲ್ಲ ಯುದ್ಧಗಳಲ್ಲಿಯೂ ನೀನು ವೃಷಕೇತುವನ್ನು ರಕ್ಷಿಸಿಕೊಂಡಿರು. ಅವನಿಲ್ಲದಿದ್ದರೆ ಯಜ್ಞವು ಕಷ್ಟಕರವಾಗುವುದು. ಕುದುರೆಯನ್ನು ರಕ್ಷಿಸಿಕೊಂಡು ಜಯಶೀಲನಾಗಿ ಬಾ. ದೇವರೇ ಎಲ್ಲವನ್ನೂ ಕೊಲ್ಲುವವನೂ ರಕ್ಷಿಸುವವನೂ ಆಗಿರುವನು. ಆದಕಾರಣ, ಆ ಭಗವಂತನನ್ನು ಸರ್ವದಾ ಧ್ಯಾನ ಮಾಡುತ್ತಿದ್ದರೆ ನೀನು ಜಯವನ್ನು ಪಡೆಯುವೆ" ಎಂದು ಹೇಳಿ ಕಣ್ಣೀರು ಸುರಿಸುತ್ತ ಕಳುಹಿಸಿಕೊಟ್ಟಳು.

ಬಳಿಕ ಪಾರ್ಥನು ಕೃಷ್ಣನನ್ನು ನೋಡಿ ಪುನಃ ಪುನಃ ನಮಸ್ಕರಿಸಿ ದಿವ್ಯ ರಥವನ್ನೇರಿ ಸೇನೆಯೊಡನೆ ಹೊರಟನು. ಹೋಮ ಧೂಮವನ್ನು ಸ್ವೀಕರಿಸಿ ನಾನಾ ವಾದ್ಯಗಳೊಡನೆ ರಥವನ್ನೇರಿ ಬರುತ್ತಿರುವಾಗ ಕನ್ಯೆಯರು ಲಾಜಾಕ್ಷತೆಗಳನ್ನೂ ಪುಷ್ಪಗಳನ್ನೂ ಅವನ ಮೇಲೆ ಎರಚಿ ಜಯಾಶೀರ್ವಾದ ಮಾಡಿದರು. ಪೌರರೆಲ್ಲರೂ ಉತ್ಸವವನ್ನು ನೋಡುತ್ತಿದ್ದರು. ಶ್ರೀಕೃಷ್ಣನು ಮಧ್ಯಾಹ್ನ ಕಾಲದಲ್ಲಿ ಕುದುರೆಯನ್ನು ಬಿಟ್ಟನು. ಆ ಕುದುರೆಯು ಕೃಷ್ಣನ ಕಣ್ಸನ್ನೆಯನ್ನು ತಿಳಿದು ದಕ್ಷಿಣ ದಿಕ್ಕಿಗೆ ಹೊರಟಿತು. ವೃಷಕೇತುವು ಹಿರಿಯರಿಗೆ ನಮಸ್ಕರಿಸಿ ತನ್ನ ಹೆಂಡತಿಯ ಬಳಿಗೆ ಬಂದು, "ಎಲೈ ಸೌಭಾಗ್ಯವತೀ! ನಾನು ಅರ್ಜುನನೊಡನೆ ಪ್ರಯಾಣ ಮಾಡುತ್ತೇನೆ, ನೀನು ಕುಂತಿ ಮೊದಲಾದ ಸ್ತ್ರೀಯರನ್ನೂ ಹಿರಿಯರಾದ ಅತ್ತೆ ಮಾವಂದಿರನ್ನೂ ಸೇವಿಸುತ್ತಿರು. ಇದರಿಂದ ನಿನಗೆ ಒಳ್ಳೆಯದಾಗುವುದು. ಸಜ್ಜನ ಸೇವೆಯಿಂದಲೇ ಸ್ತ್ರೀಯರಿಗೆ ಇಷ್ಟಾರ್ಥ ಸಿದ್ಧಿಯಾಗುವುದು. ನನ್ನನ್ನು ಸರ್ವದಾ ಸ್ಮರಣೆ ಮಾಡುತ್ತಿರು. ಪತಿಯ ಸ್ಮರಣೆಯೇ ಸ್ತ್ರೀಯರಿಗೆ ಸದ್ಧರ್ಮವು" ಎಂದು ಹೇಳಿದನು. ಅದನ್ನು ಕೇಳಿ ಅವನ ಹೆಂಡತಿಯಾದ

ಭದ್ರಾವತಿಯು, "ಎಲೈ ಪ್ರಾಣಕಾಂತನೆ! ನಿನ್ನ ಮನಸ್ಸು ನನ್ನನ್ನು ಬಿಟ್ಟು ಅನ್ಯತ್ರ ಹೋದರೂ ಹೋಗಲಿ, ನನ್ನ ಮನಸ್ಸು ಮಾತ್ರ ನಿನ್ನನ್ನು ಬಿಟ್ಟು ಬೇರೆ ಕಡೆಗೆ ಹೋಗುವುದಿಲ್ಲ. ಸ್ತ್ರೀಯರಿಗೆ ಪತಿಯೇ ಪರದೇವತೆಯೆಂದು ಶಾಸ್ತ್ರವಿರುವ ಕಾರಣ ನೀನು ಹೇಗೆ ಹೇಳುವಿಯೋ ಅದರಂತೆಯೇ ನಾನು ನಡೆದುಕೊಳ್ಳುವೆನು. ಅರ್ಜುನನ ಕುದುರೆಯನ್ನು ನೀನು ಸರ್ವಥಾ ರಕ್ಷಿಸಬೇಕು; ಯುದ್ಧಕ್ಕೆ ಯಾವಾಗಲೂ ಸಿದ್ಧನಾಗಿರಬೇಕಲ್ಲದೆ ವಿಮುಖನಾಗಬೇಡ. ಇಲ್ಲಿ ಸ್ತ್ರೀಯರ ಗುಂಪಿನಲ್ಲಿರುವ ಕೃಷ್ಣನ ಸ್ತ್ರೀಯರೆಲ್ಲರೂ ತಿಳಿದವರು, ನಿನ್ನ ಪ್ರಿಯೆಯಾದ ನನ್ನನ್ನು ನೋಡಿ ಹಸನ್ಮುಖಿಯರಾಗುವರು. ನೀನು ಎಲ್ಲಿಯಾದರೂ ರಣಕ್ಕೆ ವಿಮುಖನಾದುದನ್ನು ಕೇಳಿದರೆ ಸ್ತ್ರೀಯರಾಡುವ ಹಾಸ್ಯದ ಮಾತನ್ನು ಯಾವಳು ತಾನೆ ಕೇಳುವಳು? ಈ ಸ್ತ್ರೀಯರ ಪ್ರಾಣನಾಥನು ವಿಮುಖನಾಗಿದ್ದರೂ ಸುಮ್ಮುಖನಾಗಿದ್ದಂತೆಯೇ. ಇವೆಲ್ಲವನ್ನೂ ಚಿಂತಿಸಿ ಕಾರ್ಯಸಿದ್ಧಿಗಾಗಿ ಹೊರಡು" ಎಂದು ಹೇಳಿದಳು.

ಅದನ್ನು ಕೇಳಿ ವೃಷಕೇತು ನಸುನಗುತ್ತ ತನ್ನ ಪತ್ನಿಯನ್ನು ಕುರಿತು, "ಎಲೆ ಪ್ರಿಯೆ! ಮೂರು ಲೋಕವೂ ಸೇರಿ ನನ್ನ ಮುಂದೆ ಯುದ್ಧಕ್ಕೆ ನಿಂತರೂ ಸರಿ, ಪಾಂಡವರಿಗಾಗಿ ಅವರೆಲ್ಲರನ್ನೂ ಸೀಳಿಹಾಕುವೆನೆಂದು ತಿಳಿ. ಈ ಕರ್ಣಪುತ್ರನು ರಣಪರಾಙ್ಮುಖನಾದರೆ, ಸಫಲವಾದುದೆನಿಸಿಕೊಂಡಿರುವ ಹರಿಮಹಿಮೆಯು ಆಗ ನಿಷ್ಫಲವೆನಿಸುವುದು. ಕಾಶಿಯಲ್ಲಿ ಮೃತಿಹೊಂದಿದರೂ, ಗಯಾಕ್ಷೇತ್ರದಲ್ಲಿ ಪಿಂಡಪ್ರದಾನ ಮಾಡಿದರೂ, ಮಾಘಸ್ನಾನ ಮಾಡಿದರೂ ಮೋಕ್ಷವಾಗುವುದೆಂಬ ಶಾಸ್ತ್ರವು ತಲೆಕೆಳಗಾಗುವುದು. ನಾನು ಯುದ್ಧದಲ್ಲಿ ಹಿಮ್ಮೆಟ್ಟಿದರೆ ಪುನಃ ನಿನ್ನ ಸುಂದರ ಮುಖದ ದರ್ಶನವು ನನಗಿಲ್ಲದೆ ಹೋಗಲಿ" ಎಂದು ಹೇಳಿ, ಬಲಿಷ್ಠನಾದ ವೃಷಕೇತುವು ಬ್ರಾಹ್ಮಣರನ್ನೂ ಗೋವುಗಳನ್ನೂ ಹೋಮಾಗ್ನಿಯನ್ನೂ ಪ್ರದಕ್ಷಿಣೆ ಮಾಡಿ, ಕೃಷ್ಣ ಭೀಮ ಮೊದಲಾದ ಎಲ್ಲರೊಡನೆಯೂ ಸೇರಿ ಹೊರಟು ಮುಂದಕ್ಕೆ ಪ್ರಯಾಣ ಮಾಡಿದನು. ಅರ್ಜುನನ ಕುದುರೆಯು ನಾನಾ ಜನಪದಗಳಿಂದ ನಿಬಿಡವಾಗಿಯೂ ನಿತ್ಯೋತ್ಸವಯುಕ್ತವಾಗಿಯೂ ಇರುವ ಮಾಹಿಷ್ಮತೀಪುರವನ್ನು ಹೊಕ್ಕಿತು. ಅನೇಕ ಕೋಟೆ ಕೊತ್ತಳಗಳಿಂದ ಮೆರೆಯುತ್ತಿರುವ ಆ ಪುರವನ್ನು ನೀಲಧ್ವಜನೆಂಬ ರಾಜನು ಆಳುತ್ತಿರುವನು. ಆ ಪಟ್ಟಣವು ನರ್ಮದಾ ನದಿಯ ನೀರನ್ನು ಕುಡಿದು ಅದರ ಪ್ರಭಾವದಿಂದ ಲಿಂಗಾಕೃತಿಯನ್ನು ಹೊಂದಿದೆಯೋ, ಮನ್ಮಥನು ಈಶ್ವರನ ಭಯದಿಂದ ಹೆದರಿ ಬಂದು ಆ ಪುರದಲ್ಲಿ ಸೇರಿರುವನೋ ಎಂಬಂತೆ ದಿವ್ಯ ಸುಂದರ ದೇಹದಿಂದ ಕೂಡಿದ ಸ್ತ್ರೀಪುರುಷರಿಂದ ಮನೋಹರವಾಗಿ ಶೋಭಿಸುತ್ತಿದ್ದಿತು.

ನೀಲಧ್ವಜನ ಮಗನಾದ ಪ್ರವೀರನೆಂಬುವನು ಸ್ತ್ರೀಸಹಸ್ರದೊಡನೆ ಸೇರಿ ಪುಷ್ಪಿತಗಳಾದ ಲತೆಗಳಿಂದ ಶೋಭಿಸುತ್ತಿರುವ ಉದ್ಯಾನದಲ್ಲಿ ವನಕ್ರೀಡೆಯಾಡುತ್ತ, ಒಂದು ಸಂಪಗೆಯ ಗಿಡದ ಕೆಳಗೆ ದಿವ್ಯಾಸನದ ಮೇಲೆ ಮಂಡಿಸಿರಲು,

ಪ್ರೌಢೆಯರಾಗದವ ರಾಗಿಯೂ, ಪ್ರಸೂತಿಯಿಲ್ಲದವರಾಗಿಯೂ, ಪ್ರೌಢೆಯರಾಗಿಯೂ ಇರುವ ಯುವತಿಯರನೇಕರು ಅವನನ್ನು ಸೇವಿಸುತ್ತಿದ್ದರು. ಆಗ ಆ ಪ್ರವೀರನು ವಿಚಿತ್ರರತ್ನ ಮಾಲಿಕೆಗಳಿಂದ ಅಲಂಕೃತಳಾಗಿದ್ದ ಮದನಮಂಜರಿ ಎಂಬ ಸ್ತ್ರೀಯನ್ನು ಕುರಿತು, "ನೀವೆಲ್ಲರೂ ಬಳ್ಳಿಗಳಲ್ಲಿ ಹೂಗಳನ್ನು ಕೊಯ್ದುಕೊಳ್ಳಿರಿ" ಎಂದು ಹೇಳಲು, ಅದನ್ನು ಕೇಳಿ ನಸುನಗುತ್ತ ಆ ಸ್ತ್ರೀಯರೆಲ್ಲರೂ ತಮ್ಮ ಪ್ರಾಣಕಾಂತನೊಡನೆ ಇಂಪಾಗಿ ಹಾಡುತ್ತ ಬಳೆಗಳ ಶಬ್ದದಿಂದ ಕೂಡಿ ವಿನೋದದಿಂದ ಪುಷ್ಪಾಪಚಯ ಮಾಡಿದರು. ಬಳಿಕ ಪ್ರವೀರನ ಪತ್ನಿಯಾದ ಮದನಮಂಜರಿಯು ಸ್ವೇಚ್ಛೆಯಾಗಿ ಆ ವನಮಧ್ಯದಲ್ಲಿ ಬಂದು ನಿಂತಿದ್ದ ಕುದುರೆಯನ್ನು ನೋಡಿ, ಸ್ತ್ರೀಯರು ರತ್ನಮಾಲಿಕೆಗಳಿಂದಲೂ ಕುಂಕುಮ ಮಾಲ್ಯಾದಿ ಗಳಿಂದಲೂ ಅರ್ಚಿಸಿ ಪತ್ರವನ್ನು ಬರೆದು ಕಟ್ಟಿಬಿಟ್ಟಿರುವ ಅರ್ಜುನನ ಕುದುರೆಯೆಂದು ಅದನ್ನು ತಿಳಿದು, ತನ್ನ ಪ್ರಾಣನಾಥನನ್ನು ಕುರಿತು, "ಎಲೈ ಪ್ರಾಣಕಾಂತನೇ! ಗೋಕ್ಷೀರವರ್ಣವಾಗಿಯೂ ಕೆಂಪಾದ ತುಟಿಗಳೂ ಗೊರಸುಗಳೂ ಉಳ್ಳುದಾಗಿಯೂ; ಹಳದಿಯ ಬಾಲವೂ, ಸುಂದರವಾದ ಕೊರಲೂ, ಕಪ್ಪಾದ ಕಿವಿಯೂ ಕಣ್ಣೂ ಉಳ್ಳುದಾಗಿಯೂ ಇಲ್ಲಿ ಬರುತ್ತಿರುವ ಈ ಕುದುರೆಯನ್ನು ನೋಡು. ಇದನ್ನು ಯಾರು ಬಿಟ್ಟಿರುವರೋ? ಇದರ ಹಣೆಯಲ್ಲಿ ಬರೆದು ಕಟ್ಟಿರುವ ಪತ್ರವನ್ನು ಓದಿಕೊ; ಈ ಕುದುರೆಯನ್ನು ಹಿಡಿದು ಕಟ್ಟಿ ನನಗೆ ಪ್ರಿಯವನ್ನುಂಟುಮಾಡು" ಎಂದು ಹೇಳಿದಳು. ಆಗ ಪ್ರವೀರನು ಆ ಕುದುರೆಯನ್ನು ನೋಡಿ ತನ್ನ ಪ್ರಿಯಪತ್ನಿಯ ಮಾತಿನ ಪ್ರಕಾರ ಪುಷ್ಪ ಮಾಲಿಕೆಯುಳ್ಳ ಆ ಕುದುರೆಯ ತಲೆಗೂದಲನ್ನು ಹಿಡಿದು ಅದನ್ನು ನಿಲ್ಲಿಸಿ, ಸಂತೋಷದಿಂದ ಆ ಪತ್ರವನ್ನೋದಿಸಿದನು. ಧರ್ಮರಾಜನು ಯಜ್ಞಾರ್ಥವಾಗಿ ಆ ಕುದುರೆಯನ್ನು ಅರ್ಜುನನ ರಕ್ಷಣೆಯಲ್ಲಿ ಬಿಟ್ಟಿರುವನೆಂದೂ, ಶೂರರು ಅದನ್ನು ಹಿಡಿದುಕೊಳ್ಳಬಹುದೆಂದೂ ಆ ಪತ್ರದಲ್ಲಿದ್ದುದನ್ನು ತಿಳಿದು, ಧೈರ್ಯದಿಂದ ಕುದುರೆಯನ್ನು ಹಿಡಿದು ಅದನ್ನೂ ತನ್ನ ಸ್ತ್ರೀಯರನ್ನೂ ಪಟ್ಟಣಕ್ಕೆ ಕಳುಹಿಸಿ, ಅರ್ಜುನನನ್ನು ತೃಣೀಕರಿಸಿ, ತಾನು ತನ್ನ ಸೇನೆಯೊಡನೆ ಯುದ್ಧಕ್ಕೆ ಸಿದ್ಧನಾಗಿ ನಿಂತನು.

# ಫಲ್ಗುಣನ ಶಾಪ

ಬಳಿಕ ಅರ್ಜುನನು ಅನುಸಾಲ್ವ ಪ್ರದ್ಯುಮ್ನ ಯೌವನಾಶ್ವರೊಡನೆ ಕುದುರೆಯನ್ನು ಹುಡುಕಿಕೊಂಡು ಬರುತ್ತಿರಲು, ವೃಷಕೇತುವು ಮುಂದಾಗಿ ಬಂದು ತನ್ನೆದುರಿಗೆ ಸೇನಾಸಮೇತನಾಗಿ ಧನುರ್ಧರನಾಗಿ, ನಿಲ್ಲು ನಿಲ್ಲು ಎಂದು ಕೂಗುತ್ತ ನಿಂತು "ನೀಲಧ್ವಜ ಪುತ್ರನಾದ ಪ್ರವೀರನು ಕುದುರೆಯನ್ನು ಹಿಡಿದು ತನ್ನ ಪಟ್ಟಣಕ್ಕೆ ಸಾಗಿಸಿರುವನು; ಈಗ ಕುಪಿತನಾದ ಅರ್ಜುನನು ಅದನ್ನು ಬಿಡಿಸಿಕೊಳ್ಳಲಿ" ಎಂದು ಹೇಳುತ್ತಿರುವ ಪ್ರವೀರನನ್ನು ಕುರಿತು ವೃಷಕೇತುವು, "ಮೊದಲು ನನ್ನ ಮೇಲೆ ಯುದ್ಧ ಮಾಡು; ಬಳಿಕ ಅರ್ಜುನನ ಮೇಲೆ ಯುದ್ಧವಾಗಲಿ" ಎಂದನು. ಅದನ್ನು ಕೇಳಿ ಪ್ರವೀರನು ಐದು ಬಾಣಗಳಿಂದ ವೃಷಕೇತುವನ್ನು ಹೊಡೆದನು. ವೃಷಕೇತುವು ನಾಲ್ಕು ಬಾಣಗಳಿಂದ ಪ್ರವೀರನ ನಾಲ್ಕು ಕುದುರೆಗಳನ್ನೂ, ಒಂದು ಬಾಣದಿಂದ ಅವನ ಸಾರಥಿಯನ್ನೂ, ಏಳು ಬಾಣದಿಂದ ಅವನನ್ನೂ ನಸುನಗುತ್ತ ಹೊಡೆದನು; ಗಿಳಿಗಳ ರೆಕ್ಕೆಯಂತೆ ಹೊಳೆಯುತ್ತಿರುವ ಪ್ರವೀರನ ಕುದುರೆಗಳನ್ನು ನಾಲ್ಕು ಬಾಣಗಳಿಂದ ಕೊಂದು, ಕೋಪದಿಂದ ಸಿಂಹನಾದ ಮಾಡಿದನು. ಪ್ರವೀರನು ವೃಷಕೇತುವಿನ ಕಿವಿಗೆ ಬಾಣಪ್ರಯೋಗ ಮಾಡಲು, ಅದರಿಂದ ವೃಷಕೇತುವು ಮೂರ್ಛೆಯನ್ನು ಹೊಂದಿದನು. ಒಂದು ಬಾಣದಿಂದ ಪ್ರವೀರನು ಅನುಸಾಲ್ವನನ್ನು ಹೊಡೆಯಲು, ಅನುಸಾಲ್ವನು ಪ್ರಯೋಗಿಸಿದ ಘೋರವಾದ ಬಾಣಗಳಿಂದ ಮುಚ್ಚಿಹೋಗಿ ಪ್ರವೀರನು ಯುದ್ಧಭೂಮಿಯಲ್ಲಿ ಎಲ್ಲಿಯೋ ಅದೃಶ್ಯನಾದನು. ಇದರಿಂದ ಸೇನೆಯಲ್ಲಿ ಹಾಹಾಕಾರವುಂಟಾಯಿತು.

ಆಗ ನೀಲಧ್ವಜನು ಅಗ್ನಿಯೊಡನೆ ಕೂಡಿ ಮೂರಕ್ಷೌಹಿಣೀ ಬಲಸಮೇತನಾಗಿ ಯುದ್ಧಕ್ಕೆ ಬಂದು ಅನುಸಾಲ್ವನ ವಶದಲ್ಲಿದ್ದ ತನ್ನ ಮಗನನ್ನು ಬಿಡಿಸಿದನು; ಬಳಿಕ ಎಲ್ಲರನ್ನೂ ಹತ್ತು ಹತ್ತು ಬಾಣಗಳಿಂದ ಹೊಡೆದು ಅದ್ಭುತವಾಗುವಂತೆ ಯುದ್ಧ ಮಾಡಿದನು. ತನ್ನ ಸೇನೆಯೆಲ್ಲವೂ ವ್ಯಥೆಪಡುತ್ತಿದ್ದುದನ್ನು ನೋಡಿ ಅರ್ಜುನನು ಕ್ರೋಧಾವಿಷ್ಟನಾಗಿ ನೀಲಧ್ವಜನನ್ನು ನಿಲ್ಲುನಿಲ್ಲೆಂದು ಪ್ರತಿಭಟಿಸಿ ಐದು ಬಾಣಗಳನ್ನು ಅವನ ಮೇಲೆ ಪ್ರಯೋಗಿಸಿದನು. ನೀಲಧ್ವಜನು ಆ ಬಾಣಗಳನ್ನು ಸುಲಭವಾಗಿ ಕತ್ತರಿಸಿ ಕೆಡಹಿದನು. ಆಗ ಅರ್ಜುನನು ತನ್ನ ಬಾಣಗಳು ವ್ಯರ್ಥವಾದುದನ್ನು ಕಂಡು ಮಹಾಪೌರುಷವನ್ನು ತೋರಿಸಿ ಧ್ವಜಾಶ್ವಸೂತ ರಥಸಹಿತವಾಗಿ ನೀಲಧ್ವಜನನ್ನು ಬಾಣರಾಶಿಯಲ್ಲಿ ಅದೃಶ್ಯನಾಗುವಂತೆ ಮಾಡಿದನು. ಪಾಪಹಾರಕವಾದ ವಿಷ್ಣುಸ್ತುತಿಯಿಂದ ವಿಷ್ಣುಭಕ್ತನು ಯಮದೂತನನ್ನು ಮೂರ್ಛೆಗೊಳಿಸುವಂತೆ ಮದಗರ್ವಿತನಾದ ನೀಲಧ್ವಜನನ್ನು ಅರ್ಜುನನು ಮೂರ್ಛೆಗೊಳಿಸಿದನು. ಬಳಿಕ ಹೆಸರನ್ನು ಹಿಡಿದು ಕೂಗಿದ ಮಾತ್ರಕ್ಕೆ, ಸೇವಕರ ಗುಂಪು ಹೇಗೊ ಹಾಗೆ, ಅವನು ಮೂರ್ಛೆಯನ್ನು ತಿಳಿದು ಎಚ್ಚತ್ತು ಕೋಪಾವಿಷ್ಟನಾಗಿ ತನ್ನ ಅಳಿಯನಾದ ಅಗ್ನಿಗೆ ಪ್ರೇರಿಸಿದನು. ಅಗ್ನಿಯು ಕೂಡಲೆ ಹೊರಟು

ಶತ್ರು ಸೈನ್ಯವನ್ನು ಸುಟ್ಟನು. ಕುದುರೆಗಳೂ, ರಥಿಕರೂ, ಶಸ್ತ್ರವರ್ಜಿತರಾದ ಪದಾತಿಗಳೂ ಮೊದಲಾದ ಜನರೆಲ್ಲರೂ ಉರಿಯಿಂದ ಸುಟ್ಟೋಡಿದರು. ಒಂಟೆ, ಎತ್ತು ಮೊದಲಾದುವು ಸುಟ್ಟು ತಾವು ಹೊತ್ತಿದ್ದ ಭಾರವನ್ನು ಬಿಟ್ಟು ಕಾಡಿಗೆ ಓಡಿದುವು. ಹಣವನ್ನು ಹೇರಿದ್ದ ಕುದುರೆಗಳೂ ಗಾಡಿಗಳೂ, ಚಾಮರಗಳೂ ಛತ್ರಗಳೂ ಕವಚಗಳೂ ಸುಟ್ಟು ಕೊಬ್ಬು ಸೇರಿ ಮತ್ತಷ್ಟು ಉರಿದವು. ಪ್ರಳಯಕಾಲದಲ್ಲಿ ಭೂಗತಗಳೆಲ್ಲವನ್ನೂ ಸುಟ್ಟು ನಾಶ ಮಾಡುವಂತೆ ಅಗ್ನಿಯು ಅರ್ಜುನನ ಸೈನ್ಯವನ್ನು ಆಹುತಿ ತೆಗೆದುಕೊಂಡನು. ಯುದ್ಧ ಕುಶಲನಾದ ಅರ್ಜುನನು ಬಳಿಕ ಅಗ್ನಿಯನ್ನು ನಂದಿಸಲು ವಾರುಣಾಸ್ತ್ರವನ್ನು ಪ್ರಯೋಗಿಸಿದರೂ ಅಗ್ನಿಯು ಶಾಂತವಾಗದಿರುವುದನ್ನು ಕಂಡು ಅಗ್ನಿಯನ್ನು ಕುರಿತು, "ಎಲೈ ಅಗ್ನಿಯೇ! ನೀನೇ ದೇವತೆಗಳಿಗೆ ಮುಖಸ್ವರೂಪನು. ನಿನ್ನ ತೃಪ್ತಿಗಾಗಿಯೇ ಧರ್ಮರಾಜನು ಯಜ್ಞವನ್ನು ಕೈಕೊಂಡಿರುವನು. ನನ್ನ ರಥವೂ ಗಾಂಡೀವ ಧನುಸ್ಸೂ ನೀನು ಕೊಟ್ಟವುಗಳೇ. ನೀನು ಯಾವಾಗಲೂ ನನ್ನಲ್ಲಿ ಸೌಹಾರ್ದವನ್ನು ತೋರಿಸುತ್ತಿದ್ದೀಯೆ. ಕುದುರೆಯು ಅಪಹೃತವಾಯಿತು, ಸೇನೆಯು ನಾಶವಾಯಿತು. ನೀನು ನನ್ನಲ್ಲಿ ಪ್ರೀತಿಯನ್ನು ಬಿಟ್ಟು ಹೀಗೆ ಪ್ರಜ್ವಲಿಸುತ್ತಿದ್ದೀಯೆ. ನಾನೇನು ಮಾಡಲಿ?" ಎಂದನು.

ಈ ಪ್ರಕಾರವಾಗಿ ಹೇಳಿದ ಜೈಮಿನಿಯ ಮಾತನ್ನು ಕೇಳಿ ಜನಮೇಜಯನು, "ಅಯ್ಯಾ ಮುನೀಶ್ವರನೇ! ನೀಲಧ್ವಜನಿಗೆ ಅಗ್ನಿಯು ಅಳಿಯನಾಗಲು ಕಾರಣವೇನು? ಅಗ್ನಿಗೆ ಕೊಟ್ಟು ಮದುವೆಯಾದ ಆ ಮಹಾತ್ಮನಾದ ದೊರೆಯ ಮಗಳ ಹೆಸರೇನು ತಿಳಿಸುವವನಾಗು. ಅರ್ಜುನನ ಸೈನ್ಯವು ನಾಶವಾದ ಸಂಗತಿಯನ್ನು ಕೇಳಿ ಆಶ್ಚರ್ಯವಾಗುತ್ತದೆ" ಎಂದು ಕೇಳಲು, ಜೈಮಿನಿಯು, "ನೀಲಧ್ವಜನಿಗೆ ಜ್ವಾಲೆ ಎಂಬ ಪತ್ನಿಯಿರುವಳು. ಆಕೆಗೆ ಸ್ವಾಹಾದೇವಿಯೆಂಬ ಸುಂದರಿಯಾದ ಕನ್ಯಾಮಣಿಯು ಹುಟ್ಟಲು, ಕೆಲವು ಕಾಲಾನಂತರ ಮೂರು ಲೋಕವನ್ನೂ ಮೋಹಿಸುವ ರೂಪ ಯೌವನ ಲಾವಣ್ಯಾದಿಗಳುಳ್ಳ ಆ ಕನ್ಯೆಯನ್ನು ನೋಡಿ ನೀಲಧ್ವಜನು ಇವಳಿಗೆ ಅನುರೂಪನಾದ ವರನು ಎಲ್ಲಿ ಸಿಕ್ಕುವನು? ಯಾರಿಗೆ ಇವಳನ್ನು ಕೊಡಬೇಕು? ಎಂದು ಚಿಂತಿಸುತ್ತ 'ಎಲೈ ಮಗಳೇ! ಪಟ್ಟಾಭಿಷಿಕ್ತರಾಗಿಯೂ ಶೂರರಾಗಿಯೂ ಇರುವ ರಾಜರೂ ರಾಜಪುತ್ರರೂ ಸಾವಿರಾರು ಮಂದಿ ಲೋಕದಲ್ಲಿರುವರು. ಇವರಲ್ಲಿ ಯಾರನ್ನು ನೀನು ವರಿಸುವೆಯೋ ಹೇಳು" ಎಂದನು. ಅದಕ್ಕೆ ಆಕೆಯು ಲಜ್ಜಿತಳಾಗಿ, 'ತಂದೆಯೇ! ಮನುಷ್ಯರು ಅಜ್ಞಾನಿಗಳಾಗಿಯೂ ಚಪಲರಾಗಿಯೂ ಇರುವುದರಿಂದ ನಾನು ಅವರಲ್ಲೊಬ್ಬರನ್ನೂ ಒಲ್ಲೆನು. ದೇವತೆಗಳಲ್ಲಿ ಯಾರಾದರೂ ಒಬ್ಬ ವರವನ್ನು ನನಗೆ ಹುಡುಕು' ಎಂದಳು.

"ಅದನ್ನು ಕೇಳಿ ನೀಲಧ್ವಜನು, 'ಭದ್ರೇ! ಮಹಾಬಾಹುಬಲ ಸಂಪನ್ನನಾಗಿಯೂ ಸಹಸ್ರಾಕ್ಷನಾಗಿಯೂ ಇರುವ ಇಂದ್ರನು ಮನುಷ್ಯ ಕನ್ಯೆಯರನ್ನು ಮೋಹಿಸಿ ಐರಾವತರೂಢನಾಗಿ ಆಗಾಗ ಭೂಲೋಕಕ್ಕೆ ಬರುತ್ತಿರುವನು. ಅವನನ್ನು ನೀನು ವರಿಸು'

ಎಂದನು. ಸರ್ವದೋಷಗಳಿಗೂ ಕಾರಣನಾದ ಆ ಇಂದ್ರನನ್ನು ನಾನು ಬಯಸುವವಳಲ್ಲ. ಅವನು ತಪೋಬಲದಿಂದ ವರವನ್ನು ಪಡೆದು ಏಳ್ಗೆಗೆ ಬಂದವರನ್ನು ನೋಡಿ ಸಹಿಸಲಾರನು. ಅವನು ಗೌತಮ ಋಷಿಯ ಪತ್ನಿಯನ್ನು ಬಯಸಿದನು; ದೇವದೇವನಾದ ಕೃಷ್ಣನನ್ನು ತನ್ನ ತಮ್ಮನನ್ನಾಗಿ ಮಾಡಿಕೊಂಡನು. ಇಂತಹವನನ್ನು ಯಾವಳು ತಾನೆ ಗೌರವಿಸುವಳು? ತನಗೆ ಉನ್ನತ ಪದವು ಪ್ರಾಪ್ತವಾಯಿತೆಂಬ ಗರ್ವದಿಂದ ಮೋಹಿತನಾಗಿ ಜಗನ್ನಾಥನಾದ ವಿಷ್ಣುವನ್ನು ಅಲ್ಪನೆಂದು ಭಾವಿಸಿದನು. ಆದಕಾರಣ, ಅವನು ಕೃತಘ್ನನಲ್ಲವೆ? ಮನುಷ್ಯರನ್ನು ನಾನು ಬಯಸದೆ ಬಿಟ್ಟುದಕ್ಕೆ ಕಾರಣವು ಹೇಳುವೆನು ಕೇಳು-'ಸ್ತ್ರೀಯರ ದೇಹವು ಮಲಿನವಾದುದು. ಒಬ್ಬನನ್ನು ಪತಿಯಾಗಿ ಮಾಡಿಕೊಂಡು ಎರಡನೆಯವನನ್ನು ಹೊಂದುವವಳು ಆಚಾರಭ್ರಷ್ಟತೆಯಿಂದ ನರಕಭಾಜನಳಾಗುವಳೆಂದು ಕೇಳಿರುವೆನು. ಪತಿಯಳಿದವಳ ದೇಹವನ್ನು ಸ್ಪರ್ಶ ಮಾಡುವವನು ಅಗ್ನಿಯಲ್ಲದೆ ಮತ್ತೊಬ್ಬನಲ್ಲ. ಆದಕಾರಣ ದೇವತೆಗಳಿಗೆ ಮುಖಸ್ವರೂಪನಾದ ಆ ಅಗ್ನಿಯು ನನಗೆ ಪತಿಯಾಗಬೇಕೆಂದು ಬಯಸುತ್ತೇನೆ. ಆ ಅಗ್ನಿಯನ್ನುಳಿದು ಲೋಕದಲ್ಲಿ ಮತ್ತೆ ಯಾವ ದೇವತೆಯನ್ನೂ ಅರಸನನ್ನೂ ಕಿನ್ನರನನ್ನೂ ಉರಗನನ್ನೂ ನಾನು ವರಿಸುವುದಿಲ್ಲ. ಅಗ್ನಿಯು ಬಂದು ನನ್ನನ್ನು ಯಾಚಿಸಿದರೆ ನೀನು ನನ್ನನ್ನು ಅವನಿಗೆ ಕೊಡು' ಎಂದಳು.

"ಈ ರೀತಿಯಲ್ಲಿ ಹೇಳಿದ ಸ್ವಾಹಾದೇವಿಯ ಮಾತಿಗೆ ಸಂತೋಷಪಟ್ಟು ನೀಲಧ್ವಜನು ವಿಸ್ಮಿತನಾದನು. ಸ್ತ್ರೀಯರೆಲ್ಲರೂ ನಗುತ್ತ, 'ಎಲೆ ಹುಡುಗಿ! ನೀನು ದೊರೆಯೊಡನೆ ಇಂತಹ ವಿಪರೀತ ವಾಕ್ಯವನ್ನಾಡಬಹುದೆ? ಆ ಅಗ್ನಿಯು ಕೃಷ್ಣವರ್ತ್ಮನು, ಅಜವಾಹನು, ಏಳು ನಾಲಗೆಯವನು, ಹೊಗೆಯ ಮುಖವುಳ್ಳವನು, ಎಲ್ಲವನ್ನೂ ಸುಟ್ಟು ತಿಂದುಹಾಕುವವನು. ಅಂತಹವನನ್ನು ನೀನು ನಿನ್ನ ಪತಿಯಾಗಲೆಂದು ಹೇಗೆ ಹೇಳಿದೆ? ಇದು ಬಹಳ ಕಷ್ಟಕ್ಕೆ ಬಂದಿತು. ಸ್ತ್ರೀಯರ ಮನಸ್ಸೇ ಇಂಥದು : ಕುರೂಪನನ್ನೂ ಮೂಢನನ್ನೂ ಬಯಸುವುದೇ ಅವರ ಸ್ವಭಾವ. ಆದರಿಂದಲೇ ಮೂರು ಲೋಕವನ್ನೂ ಶುದ್ಧಿಗೊಳಿಸುವ ಗಂಗೆಯು ಉಚ್ಚ ಸ್ಥಿತಿಯಿಂದ ಅಧೋಗತಿಗಿಳಿದಳು' ಎಂದು ಕಠಿನೋಕ್ತಿಯನ್ನಾಡಿದರು. ಸ್ವಾಹಾದೇವಿಯು ಅವರೆಲ್ಲರ ಮಾತನ್ನೂ ಕೇಳಿ ಬೇಗನೆ ಸ್ನಾನ ಮಾಡಿ ಶುದ್ಧವಸ್ತ್ರವನ್ನುಟ್ಟು ಉಪವನವನ್ನು ಸೇರಿ ಅಲ್ಲಿ ಅಗ್ನಿಪ್ರತಿಷ್ಠೆ ಮಾಡಿ ಬ್ರಾಹ್ಮಣರೊಡನೆ ಸೇರಿ ಆ ಅಗ್ನಿಯನ್ನು ಧ್ಯಾನಿಸುತ್ತ, ಅಗುರು, ಚಂದನ, ಘೃತ, ಪಾಯಸ, ಸಕ್ಕರೆ, ಕಬ್ಬು, ಜೇನುತುಪ್ಪ, ದ್ರಾಕ್ಷೆ, ಕರ್ಪೂರ, ತಾಂಬೂಲ, ಲವಂಗ, ಜಾಜಿಕಾಯಿ, ಬಾಳೆಯಹಣ್ಣು ಮೊದಲಾದ ಹವಿರ್ದ್ರವ್ಯಗಳನ್ನು ಬ್ರಾಹ್ಮಣರಿಂದ ಹೋಮ ಮಾಡಿಸಿದಳು. ಬಳಿಕ ಆಕೆಯು, ತನ್ನ ಸಖಿಯರೊಡನೆ ಸೇರಿ ಮಂಜುಘೋಷವನ್ನು ಮಾಡುತ್ತಿರುವ ವಲಯ ನೂಪುರಗಳುಳ್ಳವಾಗಿ ದಿವ್ಯವಾದ ಮುಕ್ತಾಹಾರವನ್ನು ಕೈಯಲ್ಲಿ ಹಿಡಿದು ನಿಂತು ಅಗ್ನಿಯನ್ನು ಧ್ಯಾನಿಸುತ್ತಿರಲು, ಬಹುಕಾಲದ ಮೇಲೆ ಅಗ್ನಿಯು ನಾರದನಿಂದ ಪ್ರೇರಿತನಾಗಿ ಬ್ರಾಹ್ಮಣ ವೇಷದಿಂದ ನೀಲಧ್ವಜನ ಬಳಿಗೆ ಬಂದನು.

“ಆಗ ನೀಲಧ್ವಜನು ಆ ಬ್ರಾಹ್ಮಣನನ್ನು ಅರ್ಘ್ಯಾದಿಗಳಿಂದುಪಚರಿಸಿ ತನ್ನ ದಿವ್ಯಾಸನದ ಮೇಲೆ ಕುಳ್ಳಿರಿಸಿ ಕುಶಲ ಪ್ರಶ್ನೆ ಮಾಡಿ, ‘ಅಯ್ಯಾ! ತಾವು ಎಲ್ಲಿಂದ ಬಂದಿರಿ? ತಾವು ಬಂದ ಕಾರ್ಯವೇನು? ಅಪ್ಪಣೆಯಾದರೆ ಶಿರಸಾವಹಿಸಿ ನಡೆಯಿಸುವೆನು’ ಎಂದು ಕೇಳಿಕೊಂಡನು. ಅದಕ್ಕೆ ಬ್ರಾಹ್ಮಣನು, ‘ಎಲೈ ರಾಜನೇ! ನಾನು ಕನ್ಯಾರ್ಥಿಯಾಗಿ ಬಂದಿದ್ದೇನೆ, ನಾನು ಶಾಂಡಿಲ್ಯ ಗೋತ್ರದ ಬ್ರಾಹ್ಮಣನು. ನಿಮ್ಮ ಮನೆಯಲ್ಲಿರುವ ಕನ್ಯೆಯನ್ನು ನನಗೆ ಕೊಡು’ ಎಂದು ಕೇಳಿದನು. ಆಗ ದೊರೆಯು, ‘ಎಲೈ ಬ್ರಾಹ್ಮಣನೇ! ನನ್ನ ಮಗಳು ಅಗ್ನಿಯನ್ನು ವರಿಸಲಪೇಕ್ಷಿಸಿರುವಳು ಮನುಷ್ಯರನ್ನು ವರಿಸಳು. ನಿನಗೆ ಇಷ್ಟವಿದ್ದರೆ ಮತ್ತೊಬ್ಬ ಕನ್ಯೆಯನ್ನು ನಿನಗೆ ಕೊಡುವೆನು’ ಎಂದನು. ಅದನ್ನು ಕೇಳಿ ಬ್ರಾಹ್ಮಣನು, ‘ಅಯ್ಯಾ! ಬ್ರಾಹ್ಮಣವೇಷದಿಂದ ಬಂದಿರುವ ನಾನೇ ಅಗ್ನಿಯೆಂದು ತಿಳಿ; ನಿನ್ನ ಮಗಳಾದ ಸ್ವಾಹಾದೇವಿಯ ಅಮೋಘವಾದ ಸತ್ಯಪ್ರತಿಜ್ಞೆಗೆ ಸಂತುಷ್ಟನಾಗಿ ಆಕೆಯನ್ನು ಬಯಸಿ ಬಂದಿದ್ದೇನೆ’ ಎಂದನು. ಆಗ ಅಲ್ಲಿದ್ದವರೆಲ್ಲರೂ ಆಶ್ಚರ್ಯಭರಿತರಾಗಿ ನಗುತ್ತ ದೊರೆಯನ್ನು ಕುರಿತು, ‘ಕನ್ಯಾರ್ಥಿಯಾಗಿ ಬಂದಿರುವ ಈ ಬ್ರಾಹ್ಮಣನು ಅಗ್ನಿಯೇ ಆಗುವ ಪಕ್ಷದಲ್ಲಿ ಕನ್ಯೆಯನ್ನು ಈತನಿಗೇ ಕೊಡು, ಮತ್ತೊಬ್ಬರಿಗೆ ಕೊಡುವುದಿಲ್ಲವಷ್ಟೆ! ಈ ಬ್ರಾಹ್ಮಣನನ್ನು ಚೆನ್ನಾಗಿ ಪರೀಕ್ಷಿಸಲು ಮಂತ್ರಿಯು ಅರಿಯನೇ?’ ಎಂದರು. ಪ್ರಧಾನನು ಆಗ ಬ್ರಾಹ್ಮಣನನ್ನು ನೋಡಿ, ‘ಎಲೈ ಬ್ರಾಹ್ಮಣನೇ! ನೀನು ಅಗ್ನಿಯೆಂಬುದು ನಮಗೊಬ್ಬರಿಗೂ ಗೊತ್ತಾಗಲಿಲ್ಲ. ನಿನ್ನ ಸ್ವರೂಪವನ್ನು ತೋರಿಸು’ ಎನ್ನಲು, ಆಗ ಬ್ರಾಹ್ಮಣನ ಮುಖದಿಂದ ಅಗ್ನಿಯು ಜಾಜ್ವಲ್ಯಮಾನವಾಗಿ ಹೊರಟಿತು. ಅಗ್ನಿಯು ಕೋಪಗೊಂಡು ಸಚಿವನ ಗಡ್ಡವನ್ನು ಸುಟ್ಟನು. ಪ್ರಧಾನನು ಸುಟ್ಟು ಹೋಗುತ್ತಿರಲು, ಅಲ್ಲಿದ್ದ ಜನರೆಲ್ಲರೂ ಭಯದಿಂದ ನಡುಗಿ ಹೋದರು. ಆ ಕ್ಷಣದಲ್ಲಿಯೇ ದೊರೆಯು ವಹ್ನಿಸೂಕ್ತಿಯಿಂದ ಅಗ್ನಿಯನ್ನು ಶಾಂತಿಗೊಳಿಸಿದನು. ಈ ಮಧ್ಯದಲ್ಲಿ ಮತ್ತೊಂದಾಶ್ಚರ್ಯವು ನಡೆಯಿತು : ಸ್ವಾಹಾದೇವಿಯ ಚಿಕ್ಕಮ್ಮನು ದೊರೆಯನ್ನು ಕುರಿತು, ‘ನೀನು ಈ ಬ್ರಾಹ್ಮಣನಿಗೆ ಸರ್ವಥಾ ಕನ್ಯೆಯನ್ನು ಕೊಡಕೂಡದು. ಈತನು ಇಂದ್ರಜಾಲದಿಂದ ಬೆಂಕಿಯನ್ನು ಹುಟ್ಟಿಸಿರಬಹುದು’ ಎಂದಳು. ದೊರೆಯು ತನ್ನ ನಾದಿನಿಯನ್ನು ಕುರಿತು ನಗುತ್ತ, ‘ಎಲೈ ಶೋಭನಾಂಗಿಯೇ! ನೀನು ನಮ್ಮ ಅಳಿಯನನ್ನು ನಿಮ್ಮ ಮನೆಗೆ ಕರೆದುಕೊಂಡು ಹೋಗಿ ಈತನನ್ನು ಅಗ್ನಿಯೋ ಬ್ರಾಹ್ಮಣನೋ ಪರೀಕ್ಷಿಸು’ ಎಂದನು. ಆಗ ಆಕೆಯು ಬ್ರಾಹ್ಮಣನನ್ನು ತನ್ನ ಮನೆಗೆ ಕರೆದುಕೊಂಡು ಹೋಗಿ, ‘ಅಯ್ಯಾ ಬ್ರಾಹ್ಮಣನೇ ನನಗೆ ಯುಕ್ತವಾಗಿ ಪರೀಕ್ಷೆಯನ್ನು ಕೊಡು’ ಎನ್ನಲು ಅಗ್ನಿಯು ಕುಪಿತನಾಗಿ ವಸ್ತ್ರರತ್ನಾದಿಗಳಿಂದ ರಮ್ಯವಾಗಿದ್ದ ಆಕೆಯನ್ನೂ ವಿಚಿತ್ರವಾದ ಗೋಪುರವನ್ನೂ ಸುಟ್ಟು, ನಿಲ್ಲು! ನಿಲ್ಲು! ಎಂದು ಹೇಳುತ್ತಿರಲು, ಆಕೆಯುಟ್ಟಿದ್ದ ಪಟ್ಟವಸ್ತ್ರವು ಹೊತ್ತಿಕೊಂಡುದರಿಂದ ಆಕೆಯು ಪ್ರಾಣಭಯದಿಂದ ಹೆದರಿ ಬಟ್ಟೆಯನ್ನು ಕಿತ್ತು ಹಾಕಿ ಓಡಿದಳು. ಜನರೆಲ್ಲರೂ ಅಗ್ನಿಭಯದಿಂದ ಓಡತೊಡಗಿದರು. ಅಲ್ಲಿ ಮಹಾ ಕೋಲಾಹಲವಾಯಿತು. ಅವಳು ಚೀರಿ ಅಳುತ್ತ ಅರಮನೆಗೆ ಬಂದು ‘ಎಲೈ ದೊರೆಯೆ! ನಮ್ಮ ಮನೆಯನ್ನು ಸುಡುತ್ತಿರುವ

ಬೆಂಕಿಯನ್ನು ತಪ್ಪಿಸು' ಎಂದು ಮೊರೆಯಿಟ್ಟಳು. ಅದಕ್ಕೆ ರಾಜನು, 'ಎಲೈ ಭದ್ರೆ! ನೀನು ಎಲ್ಲಿಯೋ ಅಲ್ಪಕಾಲ ಮಾತ್ರವೇ ಅಗ್ನಿಯನ್ನು ಪರೀಕ್ಷಿಸಿದೆ; ಬ್ರಾಹ್ಮಣನ ಪರೀಕ್ಷೆ ಯಾಗುವವರೆಗೂ ಸ್ವಲ್ಪ ತಾಳು' ಎಂದನು.

"ಅದಕ್ಕೆ ಅವಳು, 'ಎಲೈ ದೊರೆಯೇ! ನೀನು ಒಳ್ಳೆಯ ಕೆಲಸ ಮಾಡಿದೆ. ನಿನ್ನ ಅಳಿಯನು ಇರಲಿ' ಎಂದಳು. ಅಷ್ಟರಲ್ಲಿ ದೊರೆಯು ಅಗ್ನಿಯನ್ನು ಕರೆದು, 'ಎಲೈ ಅಗ್ನಿಯೇ! ನೀನು ನಮ್ಮ ಪುರವನ್ನು ಬಿಟ್ಟು ಹೋಗಕೂಡದು. ಇದು ನಿನಗೆ ಒಪ್ಪಿಗೆಯಾದರೆ ನನ್ನ ಮಗಳನ್ನು ನಿನಗೆ ಕೊಡುವೆನು. ನನ್ನ ಮೇಲೆ ಯುದ್ಧಕ್ಕೆ ಶತ್ರುಗಳು ಯಾರಾದರೂ ಬಂದರೆ ನನ್ನ ಆಜ್ಞೆಯಂತೆ ನೀನು ಅವರನ್ನು ಸುಡಬೇಕು' ಎಂದು ಅವನೊಡನೆ ಒಪ್ಪಂದ ಮಾಡಿಕೊಂಡನು. ಬಳಿಕ ಪ್ರಧಾನನು ದೊರೆಯನ್ನು ಕುರಿತು, 'ಅಯ್ಯಾ! ಎಂತಹ ಕೆಲಸ ಮಾಡಿದೆ? ನೀನು ನಿನ್ನ ಅಳಿಯನನ್ನು ಸರ್ವದಾ ನಿನ್ನ ಮನೆಯಲ್ಲಿಯೇ ಏಕೆ ಇಟ್ಟು ಕೊಂಡಿರಬೇಕು? ಸ್ವಾಹಾದೇವಿಯನ್ನು ಕರೆದುಕೊಂಡು ಆತನು ತನ್ನೂರಿಗೆ ಹೋಗಲಿ' ಎಂದು ಹೇಳಿದನು. ಅದನ್ನು ಕೇಳಿ ರಾಜನು, 'ಎಲೈ ಸಚಿವನೇ! ಈ ಅಗ್ನಿಯು ನಮ್ಮ ಮನೆಯ ಅಳಿಯನು ಆಗದೆ ಹೋದರೆ ಇವನ ತೇಜಸ್ಸು ಹೆಚ್ಚುವುದು; ಈ ಅರ್ಥಕ್ಕೆ ಸಂದೇಹವಿಲ್ಲ. ಅಳಿಯನು ಮಾವನ ಮನೆಯನ್ನು ಸೇರಿದರೆ ಅವನ ತೇಜವಡಗಿರುವುದು. ಅಲ್ಲದೆ, ಪುರರಕ್ಷಣೆಗಾಗಿ ಇವನನ್ನಾಶ್ರಯಿಸಿ ಈಗ ಸ್ವಾಹಾದೇವಿಯನ್ನು ಇವನಿಗೆ ಕೊಡುವೆನು' ಎಂದು ಹೇಳಿದನು.

"ಬಳಿಕ ತನ್ನ ಮಗಳನ್ನು ಶುಭಲಗ್ನದಲ್ಲಿ ಅಗ್ನಿಗೆ ಕೊಟ್ಟನು. ಪಾಣಿಗ್ರಹಣವಾದ ನಂತರ ಅಗ್ನಿಯು ಅರಮನೆಯಲ್ಲಿ ಸುಖವಾಗಿದ್ದನು. ತನ್ನ ಅಳಿಯನಾದ ಅಗ್ನಿಯನ್ನು ನೀಲಧ್ವಜನು ಈಗ ಯುದ್ಧಕ್ಕೆ ಕಳುಹಿಸಿರುವನು. ಎಲೈ ಬುದ್ಧಿಶಾಲಿಯಾದ ಜನಮೇಜಯನೇ! ನೀನು ಕೇಳಿದ ಸಂಗತಿಯನ್ನು ತಿಳಿಸಿದ್ದೇನೆ. ಮುಂದೆ ನಡೆದ ಕಥಾ ಸಂದರ್ಭವನ್ನು ಹೇಳುವೆನು ಕೇಳು."

ಅರ್ಜುನನ ಮಾತನ್ನು ಕೇಳಿ ಅಗ್ನಿಯು ಮತ್ತಷ್ಟು ರೇಗಿದನು. ಆಗ ಅರ್ಜುನನು ನಾರಾಯಣಾಸ್ತ್ರವನ್ನು ಪ್ರಯೋಗಿಸಬೇಕೆಂದಾಲೋಚಿಸಿ ಧನುವಿನಲ್ಲಿ ಆರೋಪಿಸಲು, ಅದನ್ನು ಅಗ್ನಿಯು ನೋಡಿ ಶಾಂತನಾಗಿ ಬಂದು ಅರ್ಜುನನ ಬಳಿಯಲ್ಲಿ ನಿಂತು, "ಎಲೈ ಪಾರ್ಥನೇ! ಪುಂಡರೀಕಾಕ್ಷನಾದ ಶ್ರೀಕೃಷ್ಣನು ನಿನ್ನ ಸಮೀಪದಲ್ಲಿಯೇ ಇರುವಾಗ ನೀನು ಅವನನ್ನು ಬಿಟ್ಟು ಅಶ್ವಮೇಧಯಾಗದಿಂದ ಧರ್ಮನಂದನನನ್ನು ಪಾವನನನ್ನಾಗಿ ಮಾಡುವ ಅಪೇಕ್ಷೆಯುಳ್ಳವನಾಗಿರುವೆಯಾದ ಕಾರಣ ನಾನೇ ಈಗ ನಿನ್ನ ಮೇಲೆ ದಂಡವನ್ನು ಹೊರಿಸಿದೆನು. ನಿನಗೆ ಕೃಷ್ಣನಲ್ಲಿ ನಂಬಿಕೆಯಿಲ್ಲ, ಕೃಷ್ಣನನ್ನು ಬಿಟ್ಟು ಯಾವ ಯಾಗಗಳೂ ದೇವತೆಗಳೂ ಮಂತ್ರಗಳೂ ಪಾವನ ಮಾಡಲಾರವು. ನೀನು ಕ್ಷೀರಸಮುದ್ರದ ಬಳಿಯಲ್ಲಿದ್ದು ಮೇಕೆಯ ಹಾಲನ್ನು ಕರೆಯಲಪೇಕ್ಷಿಸುತ್ತೀಯೆ; ಮೂಡಿದ ಸೂರ್ಯನನ್ನು ಬಿಟ್ಟು ಮಿಣುಕು

ಹುಳುವನ್ನು ಯಾರಾದರೂ ಇಚ್ಛಿಸುವರೇ? ನೀನು ನನಗೆ ಸ್ನೇಹಿತನಾದುದರಿಂದ ನಾನು ಕೃತಘ್ನನಾಗಲಾರೆನು. ನಾನು ಯುದ್ಧದಲ್ಲಿ ನಿನ್ನ ಸೈನ್ಯವನ್ನು ನಾಶಪಡಿಸಿದೆನು. ನೀನು ಮೊದಲೇ ನಾರಾಯಣಾಸ್ತ್ರವನ್ನು ತೊಟ್ಟಿದ್ದರೆ ನಾನು ನಿನ್ನ ಸೈನ್ಯವನ್ನು ಗ್ರಾಸಮಾಡುತ್ತಿರಲಿಲ್ಲ. ಯಾರು ಜನಾರ್ದನನನ್ನು ಸ್ಮರಿಸುವರೋ ಅವರು ಸಂಸಾರದುಃಖವನ್ನು ನೀಗುವರು. ಆದಕಾರಣ, ನಾನು ಭಕ್ಷಿಸಿರುವ ನಿನ್ನ ಸೈನ್ಯವೆಲ್ಲವೂ ಎದ್ದು ನಿಲ್ಲಲಿ. ಈ ಯುದ್ಧದಲ್ಲಿ ನನ್ನನ್ನು ನಿಲ್ಲಿಸಿದ ತನ್ನ ಮನೆಗೆ ಹೋಗಿರುವ ಆ ನೀಲಧ್ವಜನಿಗೆ, ನಾನು ಲಾಯದಲ್ಲಿ ಕಟ್ಟಿಹಾಕಿಕೊಂಡಿರುವ ಆ ಯಜ್ಞಾಶ್ವವನ್ನು ತೆಗೆದುಕೊಂಡು ಬರುವಂತೆ ತಿಳಿಸುವೆನು" ಎಂದು ಹೇಳಿ ಅರ್ಜುನನನ್ನು ಸಮಾಧಾನಗೊಳಿಸಿ ನೀಲಧ್ವಜನ ಬಳಿಗೆ ಬಂದು ಅವನೆದುರಿಗೆ ನಿಂತುಕೊಂಡನು.

ನೀಲಧ್ವಜನು ತನ್ನ ಬಳಿಯಲ್ಲಿ ಬಂದು ನಿಂತಿರುವ ಅಗ್ನಿಯನ್ನು ನೋಡಿ ಅಹಂಕಾರ ಯುಕ್ತನಾಗಿ, "ಎಲೈ ಮಹನೀಯನೇ! ಆ ಧನಂಜಯನ ಸೈನ್ಯವೆಲ್ಲವನ್ನೂ ಸುಟ್ಟುದು ಒಳ್ಳೆಯದಾಯಿತು. ಈ ಮೂಢನಾದ ಅರ್ಜುನನು ನನ್ನ ಭುಜಬಲವನ್ನು ಬಲ್ಲನೇ! ಶಕ್ತನಾದ ನನ್ನ ಅಳಿಯನಾದ ನಿನ್ನನ್ನು ಜಯಿಸಿ ತನ್ನ ಕೈಯಿಂದ ಬಲಾತ್ಕಾರವಾಗಿ ಕುದುರೆಯನ್ನು ಹೇಗೆ ಹಿಂದಿರುಗಿಸಿಕೊಂಡು ಹೋಗುವನು?" ಎಂದನು. ಹೀಗೆ ಯುದ್ಧ ಜಯದ ಏಳ್ಗೆಯನ್ನು ಹೊಂದಿ ಹೇಳುತ್ತಿರುವ ದೊರೆಯ ಮಾತನ್ನು ಕೇಳಿ ಅಗ್ನಿಯು ನಕ್ಕು ಅವನ ಸಂತೋಷಕ್ಕೆ ಪ್ರತಿಬಂಧಕವಾಗಿ, "ಸರ್ವಪಾಪ ಪರಿಹಾರಕನಾದ ಶ್ರೀಕೃಷ್ಣನನ್ನು ಸರ್ವದಾ ಧ್ಯಾನಿಸುತ್ತಿರುವ ಅರ್ಜುನನ ಸೈನ್ಯವನ್ನು ಸುಡುವುದಕ್ಕೂ ಕೆಡಹುವುದಕ್ಕೂ ಯಾರಿಗೆ ಸಾಧ್ಯ? ಎಲೈ ರಾಜೇಂದ್ರನೇ! ಏಳು ಅರ್ಜುನನನ್ನು ಸಮಾಧಾನಗೊಳಿಸು. ಆತನಿಗೆ ಕುದುರೆಯನ್ನು ಹಿಂದಕ್ಕೆ ಕೊಟ್ಟರೆ ನಿನಗೆ ಶುಭವಾಗುವುದು. ಶ್ರೀಕೃಷ್ಣನಿಗೆ ಮಿತ್ರನಾಗಿಯೂ ಧನುರ್ಧರನಾಗಿಯೂ ಇರುವ ಪಾರ್ಥನೆದುರಿಗೆ ನಾನೆಷ್ಟರವನು? ಹಿಂದೆ ಇಂದ್ರನ ಖಾಂಡವವನವನ್ನು ಅವನು ತನ್ನ ಬಾಣಗಳಿಂದ ತುಂಬಿಬಿಟ್ಟನು. ನಾನು ನಿನಗೆ ಮನೆಯ ಅಳಿಯನಾಗಿರುವುದರಿಂದ ಆ ಸ್ನೇಹವನ್ನು ಮರೆತುಬಿಟ್ಟೆನು" ಎಂದನು.

ಬಳಿಕ ನೀಲಧ್ವಜನು ಅವನ ಮಾತನ್ನು ಹಿತವೆಂದು ನಂಬಿ ಅರ್ಜುನನ ಕುದುರೆಯನ್ನು ಆತನಿಗೆ ಹಿಂದಕ್ಕೆ ಕೊಟ್ಟುಬಿಡುವೆನೆಂದು ತನ್ನ ಹೆಂಡತಿಗೆ ಹೇಳಿದನು. ಆಕೆಯು, "ನಿನಗೆ ಭಯಂಕರವಾದ ಸೈನ್ಯವೂ, ಪುತ್ರ ಪೌತ್ರ ಸುಹೃದ್ಬಾಂಧವರೂ ಇರುವರು. ನೀನು ಶೂರನಾಗಿದ್ದೀಯೆ. ನಿತ್ಯವೂ ನಿನ್ನ ಭಂಡಾರವು ಧನದಿಂದ ತುಂಬುತ್ತಲೇ ಇರುವುದು. ಅದರಲ್ಲಿಯೂ ನೀನು ಕ್ಷತ್ರಿಯನಾಗಿದ್ದೀಯೆ. ಹೀಗಿದ್ದರೂ ಕುದುರೆಯನ್ನು ಹಿಂದಕ್ಕೆ ಕೊಡುವುದೇತಕ್ಕೆ? ಮನುಷ್ಯನಿಗೆ ಜೀವವು ಶಾಶ್ವತವಲ್ಲ. ಪ್ರಾಣಿಗಳಿಗೆ ಈಗಲೋ ನೂರು ವರ್ಷಗಳ ಮೇಲೆಯೋ ಹೇಗೋ ಮೃತ್ಯುವು ನಿಶ್ಚಯವಾಗಿರುವುದು. ಆದಕಾರಣ, ಕುದುರೆಯನ್ನು ಕೊಡಬೇಡ; ಪರಾಕ್ರಮವನ್ನು ತೋರಿಸು" ಎಂದಳು. ತನ್ನ ಹೆಂಡತಿಯ ಮಾತನ್ನು ಕೇಳಿ ಬುದ್ಧಿಹೀನನಾಗಿ ದೊರೆಯು ಮತ್ತೆ ಸೇನಾಸಮೇತನಾಗಿ ಸಂತೋಷದಿಂದ

ಯುದ್ಧಕ್ಕೆ ಬಂದನು. ಕಣ್ಣೀರು ಸುರಿಸುತ್ತ ತೀಕ್ಷ್ಣವಾದ ಬಾಣಗಳಿಂದ ನಾನಾ ವಿಧವಾಗಿ ಹೊಡೆದು ಬಾಣಗಳಿಂದ ಮುಚ್ಚಿದನು. ಯುದ್ಧದಲ್ಲಿ ದೊರೆಯ ಮಕ್ಕಳು, ಸಹೋದರರು, ಮೊದಲಾದ ವೀರರು ಸತ್ತರು, ದೊರೆಯ ರಥವು ಚೂರುಚೂರಾಯಿತು. ಅರ್ಜುನನು ಅವನ ಸಾರಥಿಯನ್ನು ಹೊಡೆದು ಕೆಡಹಿ, ದೊರೆಯು ತನಗೆ ಹಿಂದೆ ಮಾಡಿದುದನ್ನು ನೆನೆದು, ಬಲವಾದ ಬಾಣಗಳನ್ನು ಬಿಟ್ಟು ಅವನ ರಥದಲ್ಲಿಯೇ ದೊರೆಯನ್ನು ಮೂರ್ಛೆಗೆಡಹಿದನು. ದೊರೆಯು ಮೂರ್ಛಿತನಾದುದನ್ನು ಕಂಡು ಮಲಿನವಾಗಿ ಬಿದ್ದಿದ್ದ ಆ ದೊರೆಯನ್ನು ಅವನ ಸಾರಥಿಯು ಯುದ್ಧದಿಂದ ಹಿಂದಿರುಗಿಸಿಕೊಂಡು ಮನೆಗೆ ಬಂದನು. ಅಷ್ಟರಲ್ಲಿ ರಾತ್ರಿಯಾಯಿತು. ದೊರೆಯು ಕುಪಿತನಾಗಿ ಜ್ವಾಲೆಯನ್ನು ಕುರಿತು ಗದರಿಸುತ್ತ, "ಎಲೈ ದುಷ್ಟೆ! ನಿನ್ನಿಂದ ನನಗೆ ಈ ದುರ್ಬುದ್ಧಿಯುಂಟಾಯಿತು. ನನ್ನ ಮಿತ್ರರೆಲ್ಲರೂ ಸತ್ತರು. ನೀನಿದ್ದರೆ ಇರು, ಇಲ್ಲದಿದ್ದರೆ ಹೋಗು. ಕುದುರೆಯನ್ನು ಹಿಂದಕ್ಕೆ ಕೊಟ್ಟು ಬಿಡುತ್ತೇನೆ" ಎಂದು ಹೇಳಿ ಯಜ್ಞಾಶ್ವವನ್ನು ತರಿಸಿ ಯಥೇಚ್ಛವಾಗಿ ರತ್ನರಾಶಿಯನ್ನು ತೆಗೆದುಕೊಂಡು ಬೇಗನೆ ಪ್ರಧಾನನೊಡನೆ ಹೊರಟು ಅರ್ಜುನನ ಬಳಿಗೆ ಬಂದು ಧನವನ್ನೂ ಸ್ತ್ರೀ ಸಹಸ್ರವನ್ನೂ ಅನರ್ಘ ವಸ್ತ್ರಗಳನ್ನೂ ಯಜ್ಞಾಶ್ವದೊಡನೆ ಆತನಿಗೊಪ್ಪಿಸಿ ನಮಸ್ಕಾರ ಮಾಡಿ ಆತನನ್ನು ಸಮಾಧಾನಗೊಳಿಸುವುದಕ್ಕಾಗಿ, "ಎಲೈ ಪಾರ್ಥನೆ! ನಿನಗೆ ನಾನು ಮತ್ತೇನು ಪ್ರಿಯವನ್ನುಂಟುಮಾಡಲಿ?" ಎಂದು ಕೇಳಿದನು. ಅದಕ್ಕೆ ಅರ್ಜುನನು, "ಎಲೈ ದೊರೆಯೇ! ನೀನು ಶೂರನಾಗಿದ್ದೀಯೆ. ಈ ವರ್ಷ ನನ್ನ ಜೊತೆಯಲ್ಲಿದ್ದು ಈ ಅಶ್ವವನ್ನು ರಕ್ಷಿಸುತ್ತಿರು" ಎಂದು ಹೇಳಿದನು.

ಬಳಿಕ ಕುದುರೆಯು ಅಲ್ಲಿಂದ ದಕ್ಷಿಣ ದಿಕ್ಕಿಗೆ ಹೊರಟಿತು. ಹಿಂದೆಯೇ ಪಾರ್ಥನು ನೀಲಧ್ವಜನೊಡನೆ ಹೊರಟನು. ಜ್ವಾಲೆಯು ಕೋಪಿಸಿಕೊಂಡು ಹರಕು ಬಟ್ಟೆಯನ್ನುಟ್ಟು ಅಳುತ್ತ ತನ್ನ ಅಣ್ಣನಾದ ಉಲ್ಮುಕನ ಪಟ್ಟಣಕ್ಕೆ ಹೋಗಿ ಅವನಿಗೆ ನಮಸ್ಕರಿಸಿ, "ಎಲೈ ಅಣ್ಣನೇ? ಅಗ್ನಿಯು ತನ್ನ ತೇಜಸ್ಸಿನಿಂದ ನಮ್ಮ ಮನೆಯನ್ನು ಸುಟ್ಟುಹಾಕಿದನು, ನನ್ನ ಪತಿಯು ಪರಾಜಿತನಾದನು. ಮಕ್ಕಳು ಸತ್ತರು, ಚತುರಂಗಸೈನ್ಯವೂ ನಾಶವಾಯಿತು. ಕುದುರೆಯನ್ನು ಹಿಂದಿರುಗಿಸಿಕೊಂಡು ಅರ್ಜುನನು ನನ್ನ ಪತಿಯನ್ನು ಕರೆದುಕೊಂಡು ಹೋದನು. ನನಗಾಗಿ ನೀನು ಆ ಪಾರ್ಥನನ್ನು ಹೊಡೆದು ಕೆಡಹಿದರೆ ಆಗ ನನಗೆ ಇಷ್ಟ ಸಹೋದರನೆನಿಸಿಕೊಳ್ಳುವೆ; ಹಾಗಿಲ್ಲದಿದ್ದರೆ ನನ್ನ ದುಃಖವು ಶಾಂತವಾಗದು" ಎಂದು ಹೇಳಿಕೊಂಡಳು. ಉಲ್ಮುಕನು ದೂತನನ್ನು ಕಳುಹಿಸಿ ಜ್ವಾಲೆಯ ಕುಚೇಷ್ಟೆಗಳನ್ನು ತಿಳಿದು ಅವಳನ್ನು ಸಮಾಧಾನಗೊಳಿಸಿ, "ಎಲೆ ಭದ್ರೆ! ಈ ದೇಶವು ನಿನ್ನದಾಗಿಯೇ ಇರುವುದು; ನೀನು ಈ ಊರಿನಲ್ಲಿಯೇ ಇರು. ಎಷ್ಟು ಕಾಲವಾದರೂ ನಿನ್ನ ಇಷ್ಟದಂತೆ ನಡೆಯುವೆನು" ಎಂದನು. ಅದಕ್ಕೆ ಜ್ವಾಲೆಯು ಕೋಪಿಸಿಕೊಂಡು, "ಹಾಗಾದರೆ ನೀನು ಹೊರಡುವುದಿಲ್ಲವೋ" ಎಂದು ಕೇಳಿದಳು. ಅದನ್ನು ಕೇಳಿ ಉಲ್ಮುಕನು ಕುಪಿತನಾಗಿ ಜ್ವಾಲೆಯನ್ನು ಕುರಿತು, "ಎಲೆ ದುಷ್ಟೆ! ನಿನ್ನ ಮನೆಯನ್ನು ಹಾಳು ಮಾಡಿಕೊಂಡಂತೆ ನನ್ನ

ಬಿಡಿ, ಅಥವಾ ಯುದ್ಧಮಾಡಿರಿ. ವೀರನಾದ ಕುಶನನ್ನು ಜಯಿಸದೆ ಮುಂದಕ್ಕೆ ಹೋಗಲು ನೀವು ಶಕ್ತರಲ್ಲ' ಎಂದು ಕೂಗಿ ಕರೆದನು. ಶತ್ರು ಯೋಧರು ಆ ವಾಕ್ಯನ್ನು ಕೇಳಿ, 'ಕತ್ತಿ ಗುರಾಣಿಗಳನ್ನು ಧರಿಸಿ ಬರುತ್ತಿರುವ ಶೂರನಾದ ಈ ಯೌವನಸ್ಥನು ಯಾರಿರಬಹುದು? ಶರ ಚಾಪ ಕಿರೀಟ ಕವಚಯುಕ್ತನಾಗಿ ಬರುತ್ತಿರುವ ಈ ಶೂರನು ನಿಜವಾಗಿಯೂ ನಮಗೆಲ್ಲರಿಗೂ ಯಮನಾಗುವಂತೆ ತೋರುತ್ತಿದೆ' ಎಂದು ಭಯವಿಹ್ವಲರಾಗಿ ಹೇಳಿಕೊಳ್ಳುತ್ತಿದ್ದರು. ಗಾಳಿ ಬಡಿದ ಮರಗಳಂತೆ ಧ್ವಜಗಳು ಕಣ ಕಣ ಶಬ್ದ ಮಾಡುತ್ತಿದ್ದುವು. ಆಕಾಶದಿಂದ ಹಾರಿ ಬಂದು ಹದ್ದುಗಳು ಶೂರರ ಕಿರೀಟಕ್ಕೆರಗುತ್ತಿದ್ದುವು. ಆಗ ಬಾಣಗಳು ತಾವಾಗಿ ಬತ್ತಳಿಕೆಗಳಿಂದ ಬಿದ್ದುಹೋಗುತ್ತಿದ್ದುವು. ಕತ್ತಿಗಳು ತಾವೇ ಒರೆಯಿಂದ ಜಾರಿ ಬೀಳುತ್ತಿದ್ದುವು. ಮರಗಳನ್ನು ಬೇರುಮುಟ್ಟ ಉರುಳಿಸುವ ಬಿರುಗಾಳಿಯು ಧ್ವಜಗಳನ್ನು ಮುರಿದುರುಳಿಸುತ್ತಬೀಸುತ್ತಿದ್ದಿತು. ಸೂರ್ಯನು ಕಾಣಿಸದಂತೆ ಧೂಳಿಯು ಆಕಾಶವನ್ನು ಕವಿದಿದ್ದಿತು.

"ಸ್ವಲ್ಪ ಕಾಲದ ಮೇಲೆ ಧೂಳಿಯಡಗಲು, ಶೂರರು ಆ ಕುಶನನ್ನು ಕಂಡರು. ಬರುತ್ತಿರುವ ಆ ಕುಶನನ್ನು ನೋಡಿ ಶತ್ರುಘ್ನನು ಸೇನಾಪತಿಯನ್ನು ಕುರಿತು, 'ಎಲೈ ಸೇನಾಪತಿಯೇ! ಬೇಗನೆ ಹೋಗಿ ಆ ಬಾಲಕನನ್ನು ತಡೆದು, ನಾವು ಸೇನೆಯನ್ನು ಕೂಡಿಸಿಕೊಂಡು ಬರುವವರೆಗೂ ಯುದ್ಧಮಾಡುತ್ತಿರು' ಎಂದು ಹೇಳಿದನು. ಶೂರನಾದ ಸೇನಾಪತಿಯು, 'ಎಲೈ ಸುವ್ರತನೇ! ನಿನ್ನ ಅನುಗ್ರಹದಿಂದ ಇವನನ್ನು ಕೊಲ್ಲುವೆನು' ಎಂದು ಹೇಳಿ ಅಲ್ಲಿಂದ ಹೊರಟು, 'ನಿಲ್ಲು, ನಿಲ್ಲು!' ಎಂದು ಹೇಳುತ್ತ ಕುಶನನ್ನು ಹತ್ತು ಬಾಣಗಳಿಂದ ಹೊಡೆದನು. ಕುಶನು ಅವುಗಳನ್ನು ಕತ್ತರಿಸಿ ಸೇನಾಧಿಪತಿಯನ್ನು ಹೊಡೆದು, ಕುಪಿತನಾಗಿ ಅವನ ನಾಲ್ಕು ಕುದುರೆಗಳನ್ನು ನಾಲ್ಕು ಬಾಣಗಳಿಂದ ಕೊಂದನು; ಸಾರಥಿಯ ತಲೆಯನ್ನು ನಗು ನಗುತ್ತ ಹಾರಿಸಿದನು; ಹಾಗೆಯೇ ಅವನ ರಥವನ್ನೂ ತಿಲಶಃ ಚೂರು ಚೂರು ಮಾಡಿ, ಸೇನೆಯ ಹಿಂದಿದ್ದ ಸಾರಥಿಗಳನ್ನು ಕೊಂದು, ಸೇನಾಪತಿಯ ಬಿಲ್ಲನ್ನೂ ಶುಭ್ರವಾದ ಕವಚವನ್ನೂ ಕತ್ತರಿಸಿ, ಆ ದುಷ್ಟನ ಕೈಗಳನ್ನೂ ಕಾಲುಗಳನ್ನೂ ಎರಡು ಬಾಣಗಳಿಂದ ತುಂಡಿಸಿ, ಬಲವಾಗಿದ್ದ ಅವನ ತೊಡೆಗಳನ್ನೂ ಕಡಿದು ಹಾಕಿದನು; ಹೊಳೆವ ಕುಂಡಲಗಳಿಂದಲೂ ಮೀಸೆಗಳಿಂದಲೂ ಕೂಡಿದ ಮುಖವನ್ನು ಕೊರಲಿನಿಂದ ಹಾರಿಸಿದನು. ಸೈನ್ಯಾಧಿಪತಿಯು ಸಾಯಲು, ಬಹಳ ಹಾಹಾಕಾರವುಂಟಾಯಿತು.

"ಅವನು ಮೃತನಾದುದನ್ನು ಕಂಡು ಅವನ ಸಹೋದರನಾದ ನಗನೆಂಬುವನು ಆನೆಯನ್ನೇರಿ ಬಂದು ಕುಶನನ್ನು ಶಕ್ತ್ಯಾಯುಧದಿಂದ ಹೊಡೆದನು. ಬೆಂಕಿಯಂತೆಯೂ ಸಿಡಿಲಿನಂತೆಯೂ ಉರಿಯುತ್ತಿದ್ದ ಆ ಶಕ್ತಿಯನ್ನು ಮಹಾಬಲನಾದ ಸೀತಾಪುತ್ರನು ಐದು ಬಾಣಗಳಿಂದ ಖಂಡಿಸಿ ಆನೆಯ ನಾಲ್ಕು ಕಾಲುಗಳನ್ನೂ ಕತ್ತರಿಸಲು, ಆ ನಗನು ಕಾಲು ಕತ್ತರಿಸಿದ ಆ ಆನೆಯಿಂದ ಹಾರಿ ವಿಚಿತ್ರವಾದ ದೊಡ್ಡ ಗದೆಯನ್ನು ಹಿಡಿದು ಕುಶನ ಮೇಲೆ ಬಂದನು. ಗದೆಯನ್ನು ಹಿಡಿದಿದ್ದ ಅವನ ಸರ್ಪಸದೃಶವಾಗಿದ್ದ ಹಸ್ತವನ್ನು ಕುಶನು ಕತ್ತರಿಸಿದನು. ಆಗ ಅವನು ನೆಲದಲ್ಲಿ ಬಿದ್ದಿದ್ದ ಚಕ್ರವನ್ನು ಎಡಗೈಯಿಂದ ಬೇಗನೆ

ತೆಗೆದುಕೊಳ್ಳಲು, ಚಕ್ರವನ್ನು ಹಿಡಿದಿದ್ದ ಆ ಕೈಯನ್ನೂ ಕುಶನು ಕತ್ತರಿಸಿದನು; ಹಾಗಾದರೂ ನಗನು ಓಡುತ್ತಿರಲು, ಅವನ ಕಾಲುಗಳನ್ನು ಕತ್ತರಿಸಿದನು. ಬಲಿಷ್ಠನಾದ ನಗನು ಕೈ ಕಾಲುಗಳು ಕತ್ತರಿಸಿ ಹೋಗಿದ್ದರೂ, ರಕ್ತದಿಂದ ನೆನೆದು ಧೂಳಿ ಮುಚ್ಚಿದ ದೇಹವುಳ್ಳವನಾಗಿ, ಆಕಾಶದಲ್ಲಿ ರಾಹುವು ಸೂರ್ಯನ ಮೇಲೆ ಬೀಳುವಂತೆ ತನ್ನ ಮುಂದೆ ತೋಳುಗಳಿಂದಲೇ ಗದೆಯನ್ನು ತೆಗೆದುಕೊಂಡು ಕುಶನ ಮೇಲೆ ಪ್ರಯೋಗಿಸಲು, ಕುಶನು ಅದರ ಏಟಿಗೆ ತಾನಿದ್ದ ಸ್ಥಳದಿಂದ ಹೆಜ್ಜೆಯನ್ನಾದರೂ ಕದಲಿಸದೆ ನಗನ ಪ್ರತಾಪಕ್ಕೆ ಸಂತೋಷಪಟ್ಟು, ಅವನನ್ನು ಸಂಹರಿಸಲು ಹರಿತವಾದ ಬಾಣವನ್ನು ಬಿಟ್ಟನು. ಆ ಬಾಣದಿಂದ ಅವನ ತಲೆಯು ಕತ್ತರಿಸಿ ಆಕಾಶಕ್ಕೆ ಹಾರಿ ಅಲ್ಲಿ ಅದೃಶ್ಯವಾಯಿತು. ಈಶ್ವರನು ಆ ತಲೆಯನ್ನು ತನ್ನ ರುಂಡಮಾಲೆಗಾಗಿ ತೆಗೆದುಕೊಂಡನು. ಹೀಗೆ ನಗನು ಮೃತನಾದನು.

"ಕುಶನು ದಂಡಧರನಾದ ಯಮನಂತೆ ಕೋಪಾವಿಷ್ಟನಾಗಿ ಬಾಣಗಳಿಂದ ಶತ್ರುಸೈನ್ಯವನ್ನು ಕೊಂದನು. ಪರ್ವತಸದೃಶವಾದ ಆನೆಗಳನ್ನು ಇಂದ್ರನಂತೆ ಸೀಳಿಹಾಕಿದನು. ವೀರರೆಲ್ಲರೂ ರಕ್ತದಿಂದ ನೆನೆದ ಬಟ್ಟೆಯುಳ್ಳವರಾಗಿ ಬಹಳವಾಗಿ ದುಃಖಿಸುತ್ತ, ಹೂ ಬಿಟ್ಟಿರುವ ಮುಳ್ಳು ಮುತ್ತುಗದ ಗಿಡಗಳಂತಾದರು. ಬಲವಾಗಿ ಬೀಳುತ್ತಿರುವ ಬಾಣಗಳಿಂದ ದೊಡ್ಡ ಬೆಂಕಿಯು ಹುಟ್ಟಿ ರಥಗಳು ಆನೆಗಳೆಂಬ ಕಟ್ಟಿಗೆಯಿಂದ ಅಭಿವೃದ್ಧಿಯನ್ನು ಹೊಂದಿ ಪ್ರಜ್ವಲಿಸುತ್ತಿರುವಂತೆ ಆ ಬಾಲಕನು ಪ್ರತಾಪದಿಂದ ವೃದ್ಧಿ ಹೊಂದುತ್ತಿದ್ದನು. ಬೀಳುತ್ತಿರುವ ಮದದಾನೆಗಳಿಂದ ಮಹಾರಥರು ಮೃತರಾದರು. ರಥಗಳೂ ಚಕ್ರಗಳೂ ಧ್ವಜಗಳೂ ತಾವಾಗಿ ಮುರಿದು ಬೀಳುತ್ತಿದ್ದುವು. ಬಾಣಗಳಿಂದ ಭೇದಿಸಿದ ದೇಹವುಳ್ಳವರಾಗಿ ಕುದುರೆಯ ರಾವುತರು ಪ್ರಾಣಗಳನ್ನು ಬಿಟ್ಟರು. ವಿಷ್ಣು ಭಕ್ತಿಯಿಲ್ಲದೆ ಸಂಸಾರದಲ್ಲಿ ಬಿದ್ದುಹೋಗುವ ಅಧಮರಂತೆಯೂ ಕನ್ಯಾಶುಲ್ಕದಿಂದ ಬದುಕುವವನ ಪಿತೃಗಳಂತೆಯೂ ಆನೆ ಕುದುರೆ ತೇರುಗಳ ಗುಂಪೂ ಪದಾತಿ ಸೈನ್ಯವೂ ನೆಲಕ್ಕೆ ಬಿದ್ದು ಹೋದುವು. ಹೀಗೆ ರಥಗಜಗಳಿಂದ ಯುಕ್ತವಾದ ಸೈನ್ಯವನ್ನು ಶೂರನಾದ ಕುಶನು, ಸ್ವಧರ್ಮವು ಪಾಪವನ್ನು ನಾಶಮಾಡುವಂತೆ, ಧ್ವಂಸ ಮಾಡಿದನು".

# ಲಕ್ಷ್ಮಣಾಗಮನ

ಬಳಿಕ ಮಹಾಬಾಹುವಾದ ಶತ್ರುಘ್ನನು ಬಿಲ್ಲನ್ನು ಒದರುತ್ತ ಬಂದು ಕೋಪದಿಂದ ಒಂಬತ್ತು ಬಾಣಗಳನ್ನು ಕುಶನ ಮೇಲೆ ಎಸೆದನು. ಬಲಿಷ್ಠನಾದ ಕುಶನು ಕುದುರೆಯೊಡನೆ ಅವನ ರಥವನ್ನು ಪುಡಿ ಪುಡಿ ಮಾಡಿ ಬಲವಾಗಿ ಹೂಡಿದ ಬಾಣದಿಂದ ಅವನ ಎದೆಗೆ ಹೊಡೆದು ಪುನಃ ಅರುವತ್ತು ಬಾಣಗಳನ್ನು ಎದೆಯ ಮಧ್ಯಕ್ಕೆ ಹೊಡೆಯಲು ಶತ್ರುಘ್ನನು ಏಟಿನಿಂದ ಬಹಳ ನೊಂದು, ಮದಿಸಿದ ಆನೆಯು ಪರ್ವತದಲ್ಲಿ ಎಡಹಿ ಬೀಳುವಂತೆ, ರಥದಲ್ಲಿ ಬಿದ್ದುಹೋದನು. ಕಳೆದುಳಿದ ಯೋಧರೆಲ್ಲರೂ ಬೇಗನೆ ಅಯೋಧ್ಯೆಗೆ ಓಡಿಹೋದರು. ಅಷ್ಟರಲ್ಲಿ, ಮೂರ್ಛಿತನಾಗಿದ್ದ ಲವನು ಎಚ್ಚತ್ತು ತನ್ನ ಅಣ್ಣನನ್ನು ಕಂಡು ಎದ್ದು ಬಂದು ಅವನನ್ನು ಆಲಂಗಿಸಿ ಸಂತುಷ್ಟನಾಗಿ, 'ಅಣ್ಣಾ! ಕುದುರೆಯನ್ನು ಹಿಡಿದಿದ್ದೇನೆ' ಎಂದು ಹೇಳಲು, ಕುಶನು ಅದಕ್ಕೆ ಅನುಮತಿಕೊಟ್ಟನು. ಆಗ ಲವನು ಕುದುರೆಯನ್ನು ಮತ್ತೆ ಕಟ್ಟಿಹಾಕಿ, ಅಣ್ಣ ತಮ್ಮಂದಿರಿಬ್ಬರೂ ವಾಯು ವಹ್ನಿಗಳಂತೆ ಸೇರಿಕೊಂಡು ವೀರರ ಬರುವಿಕೆಯನ್ನು ನಿರೀಕ್ಷಿಸುತ್ತ ಬಲವಾಗಿ ನಿಂತರು.

ಸತ್ತುಳಿದ ಯೋಧರು ಬಂದು, ಜಿಂಕೆಯ ಕೊಂಬನ್ನೂ ರುರು ಚರ್ಮವನ್ನೂ ದಂಡ ಮೇಖಲೆಗಳನ್ನೂ ಧರಿಸಿ ಯಜ್ಞದೀಕ್ಷಿತನಾಗಿ, ಇಬ್ಬರು ತಮ್ಮಂದಿರೊಡನೆಯೂ ಮುನಿಗಳೊಡನೆಯೂ ಸೇರಿ ಎಳ್ಳು ತುಪ್ಪ, ಇವುಗಳ ಹೋಮದಿಂದುಂಟಾದ ಹೊಗೆಯಿಂದ ಕೆಂಪಾದ ಕಣ್ಣುಗಳುಳ್ಳವನಾಗಿ, ಸುವರ್ಣ ಸೀತಾ ಸಮೇತನಾಗಿ ಮಂಡಪದಲ್ಲಿ ಕುಳಿತಿದ್ದ ಶ್ರೀರಾಮನನ್ನು ಕುರಿತು, "ಎಲೈ ರಾಮನೇ! ನಿನ್ನ ಕುದುರೆಯು ಭೂಲೋಕವನ್ನೆಲ್ಲ ಸಂಚರಿಸುತ್ತ ಹೋಗಲು, ಅದನ್ನು ಯಾವ ಶೂರನೂ ಕಟ್ಟಲಿಲ್ಲ; ನಿನ್ನ ಹಾಗೆಯೇ ಇರತಕ್ಕ ಒಬ್ಬ ಹುಡುಗನು ಅದನ್ನು ಕಟ್ಟಿದನು. ಅವನಿಂದ ನಮ್ಮ ಬಲವೆಲ್ಲ ನಾಶವಾಯಿತು. ನಿನ್ನ ತಮ್ಮನಾದ ಶತ್ರುಘ್ನನು ಅವನ ಧನುವನ್ನು ಕತ್ತರಿಸಿ ಅವನು ಮೂರ್ಛಿತನಾಗುವಂತೆ ಮಾಡಿ ಹೇಗೋ ಅವನನ್ನು ಸೆರೆಹಿಡಿದನು. ಅವನ ಮತ್ತೊಬ್ಬ ಬಂಧುವು ಮಹಾಬಲಶಾಲಿಯಾಗಿ ಧನುಃಖಡ್ಗಗಳನ್ನು ಹಿಡಿದು ಅಲ್ಲಿಗೆ ಬಂದು ಉಳಿದ ನಿನ್ನ ಸೈನ್ಯವೆಲ್ಲವನ್ನೂ ಸೇನಾಪತಿ ಸಹಿತವಾಗಿ ಕೊಲ್ಲಲು, ಸೇನಾಧಿಪತಿಯು ಮೃತನಾದುದನ್ನು ನೋಡಿ ಉಳಿದ ಸೈನ್ಯವು ಕಂಗೆಟ್ಟು ದಿಕ್ಕು ದಿಕ್ಕುಗಳಿಗೂ ಓಡಿತು" ಎಂದು ಹೇಳಿದರು.

ಅವರ ಮಾತನ್ನು ಕೇಳಿ ರಾಮನು ಆಶ್ಚರ್ಯ ಹೊಂದುತ್ತ, "ಇದೇನು ನಿಮ್ಮ ಹರಟೆ! ನಿಮಗೆ ಭ್ರಮೆಯೋ! ಪಿಶಾಚವು ಹಿಡಿದಿದೆಯೋ! ಶತ್ರುಘ್ನನನ್ನು ಕೆಡಹುವನಾರು?" ಎಂದನು. ಅದಕ್ಕೆ ಯೋಧರು, "ಎಲೈ ರಾಜೇಂದ್ರನೇ! ನಾವು ಹರಟುವವರಲ್ಲ, ನಮಗೆ ಭ್ರಾಂತಿಯೂ ಇಲ್ಲ, ಪೈಶಾಚ್ಯವೂ ಇಲ್ಲ; ನಿನ್ನ ಸ್ಮರಣೆಯನ್ನು

ಒಂದು ಸಲ ಮಾಡಿದವರಿಗೆ ಹರಟೆಯೂ ಪಿಶಾಚತ್ವವೂ ಭ್ರಾಂತಿಯೂ ನಾಶವಾಗಿ ಉತ್ತಮ ಜ್ಞಾನವುಂಟಾಗುವುದು. ಹೀಗಿರುವಲ್ಲಿ, ನಿನ್ನನ್ನು ಪ್ರತ್ಯಕ್ಷವಾಗಿ ನೋಡುತ್ತಿರುವ ನಮಗೆ ಅವು ಹೇಗೆ ಸಂಭವಿಸುವುವು? ಆ ಶತ್ರುಘ್ನನು ಬಾಲಕನ ಬಾಣಗಳಿಂದ ವ್ಯಥೆಪಡುತ್ತ ಯುದ್ಧದಲ್ಲಿ ಬಿದ್ದು ಹೋಗಿರುವನು" ಎಂದರು. ಬಳಿಕ ರಾಮನು ಬಹಳ ದುಃಖಿತನಾಗಿ ಗೋಳಾಡುತ್ತ, "ಬ್ರಾಹ್ಮಣಶತ್ರುವಾದ ಲವಣಾಸುರನನ್ನು ತೀಕ್ಷ್ಣ ಬಾಣಗಳಿಂದ ಕೊಂದ ಆ ಶತ್ರುಘ್ನನು ನನ್ನ ಮಾತಿನಂತೆ ನಡೆಯುವವನಾಗಿ ಬಾಲಕರಿಂದ ಬಾಧೆಗೊಳಗಾದನು. ನನ್ನ ತಮ್ಮನು ಯಾವ ದೋಷದಿಂದ ಅಂತಹ ಅವಸ್ಥೆಗೀಡಾದನೊ! ಎಲೈ ಲಕ್ಷ್ಮಣನೇ! ಇಲ್ಲಿ ಬಾ. ನಿನಗೆ ಮಂಗಳವಾಗಲಿ. ನನ್ನ ಮಾತನ್ನು ಕೇಳು: ನಾನು ದೀಕ್ಷಿತನಾಗಿರುವುದರಿಂದ ಯುದ್ಧ ಮಾಡುವುದು ಸರಿಯಲ್ಲ. ನೀನು ದೊಡ್ಡ ಸೈನ್ಯವನ್ನು ತೆಗೆದುಕೊಂಡು ನಿನ್ನ ಸಹೋದರನಿರುವೆಡೆಗೆ ಹೋಗಿ ಯುದ್ಧ ಮಾಡಿ ಅಸಹಾಯನಾಗಿರುವ ಆ ಶತ್ರುಘ್ನನನ್ನೂ ಕುದುರೆಯನ್ನೂ ಬಿಡಿಸು" ಎಂದು ಹೇಳಿದನು.

ಅವನ ಮಾತನ್ನು ಕೇಳಿ ಲಕ್ಷ್ಮಣನು ಸೇನಾಸಮೇತನಾಗಿ ಬೇಗ ಹೊರಟನು. ಬಳಿಕ, ಮದಿಸಿದ ಆನೆಗಳೂ ಸುವರ್ಣಾಲಂಕಾರವುಳ್ಳ ರಥಗಳೂ ಅಶ್ವಾರೋಹಕರೂ ಪದಾತಿಗಳೂ ಪಟ್ಟಣದಿಂದ ಹೊರಟುವು. ರಕ್ತ ವರ್ಣ ಪತಾಕೆಗಳೂ ರಕ್ತ ವಸ್ತ್ರ ಧ್ವಜಗಳೂ ಉಳ್ಳವರಾಗಿಯೂ, ಚಂದನವನ್ನು ಲೇಪಿಸಿದ ದೇಹವುಳ್ಳವರಾಗಿಯೂ, ಧ್ವನಿಮಾಡುತ್ತಿರುವ ಕಂಕಣಗಳಿಂದಲಂಕೃತರಾಗಿಯೂ, ವೀರಲಕ್ಷ್ಮೀಪರಿಣಯವುಳ್ಳವರಾಗಿಯೂ, ಪುಷ್ಪ ಮಾಲಿಕೆಯನ್ನು ಮುಡಿದ ಮುಡಿಯುಳ್ಳವರಾಗಿಯೂ, ಪ್ರತ್ಯಕ್ಷವಾದ ಯಮನ ಅವತಾರದಂತಿರುವರಾಗಿಯೂ, ಯುದ್ಧಗೋಷ್ಠಿಯನ್ನು ಬಯಸುವ ಯೌವನಸ್ಥರಾಗಿಯೂ, ಶ್ಮಶ್ರುರೇಖೆಯುಳ್ಳವವರಾಗಿಯೂ, ವೀರರಾಗಿಯೂ ಯುದ್ಧಪ್ರವೀಣರಾಗಿಯೂ, ಆಯುಧಪಾಣಿಗಳಾಗಿಯೂ, ಶ್ವೇತಾಂಬರಧಾರಿಗಳಾಗಿಯೂ, ಶ್ವೇತವಸ್ತ್ರ ಪತಾಕೆಗಳುಳ್ಳವರಾಗಿಯೂ, ಏಕಪತ್ನೀವ್ರತಸ್ಥರಾಗಿಯೂ, ಧರ್ಮಿಷ್ಠರಾಗಿಯೂ ಜಿತೇಂದ್ರಿಯರಾಗಿಯೂ ಇರುವ ಶತಸಹಸ್ರಯೋಧರು ಪಟ್ಟಣದಿಂದ ಹೊರಟರು. ಬಲಶಾಲಿಯಾದ ಲಕ್ಷ್ಮಣನು ಸೇನೆಗೆ ಪ್ರಮುಖನಾದನು. ಧರ್ಮಿಷ್ಠನೂ ಬ್ರಾಹ್ಮಣಪ್ರಿಯನೂ ಆದ ಕಾಲಜಿತ್ತೆಂಬವನು ಸೇನಾಧಿಪತಿಯಾದನು. ಹೀಗೆ ಹೋಗುತ್ತಿರುವ ಸೇನೆಯಿಂದ ಸಮುದ್ರಸಂಗಮವಾಗುವ ನದಿಗಳೆಲ್ಲವೂ ಬತ್ತಿದುವು; ಕುದುರೆಗಳ ಬಲವಾದ ಕಾಲ ಗೊರಸುಗಳಿಂದ ಪರ್ವತಗಳು ಪುಡಿ ಪುಡಿಯಾದುವು; ಕಾಡೆಲ್ಲವೂ ಸಮಭೂಮಿಯಾಯ್ತು; ಶತ್ರುಗಳು ಬಾಯಲ್ಲಿ ಹುಲ್ಲುಕಡ್ಡಿಯನ್ನು ಕಚ್ಚಿಕೊಂಡರು. ಆ ಸೈನ್ಯಗಳಿಂದ ನದಿಗಳ ನೀರಲ್ಲದೆ, ರಥಚಕ್ರಗಳಿಂದಲೂ ಕುದುರೆಗಳ ಗೊರಸುಗಳಿಂದಲೂ ಎದ್ದ ಧೂಳಿಯು ಮೇಘಗಳ ಮೇಲೆಬಿದ್ದು ಕೆಸರಾಯ್ತು. ಆ ಕೆಸರಿನಿಂದ ಮೇಘಗಳು ಘನೀಭಾವವನ್ನು

ಹೊಂದಿದುವು. ಎತ್ತರವಾದ ಆನೆಗಳ ದಂಡಾಕಾರವಾದ ಸೊಂಡಿಲಿನ ಏಟಿಗೆ ಕೆಸರಿನ ಭಾರದಿಂದ ಜಗ್ಗುತ್ತಿರುವ ಮೇಘಗಳು ಮೆಲ್ಲಗೆ ಓಡುತ್ತಿದ್ದುವು. ಕತ್ತಿ ಗುರಾಣಿಗಳನ್ನು ಹಿಡಿದವರು ಮುಂದೆ ನೆಗೆದಾಡುತ್ತಿದ್ದರು. ಕುದುರೆಯ ರಾವುತರು ಕುದುರೆಯ ಬಗೆಬಗೆಯ ಗತಿವಿಶೇಷಗಳಿಂದ ಕುಣಿದಾಡುತ್ತಿದ್ದರು. ಗುಡುಗಿನಂತೆ ಶಬ್ದ ಮಾಡುತ್ತ ರಥಗಳು ನಡೆಯುತ್ತಿದ್ದುವು. ಭೂಮಿಯನ್ನು ನಡುಗಿಸುತ್ತ ಆನೆಗಳು ಪರ್ವತಗಳಂತೆ ನಡೆದುವು. ಆನೆಗಳು ಬೃಂಹಿತವನ್ನೂ ಕುದುರೆಗಳು ಹೇಷಿತವನ್ನೂ ಚಕ್ರಗಳಿಂದ ರಥಗಳು ಗರ್ಜನೆಯನ್ನೂ ಪದಾತಿಗಳು ಸಿಂಹನಾದವನ್ನೂ ಮಾಡುತ್ತ ಹೊರಟು, ಭಯಂಕರವಾದ ಆ ಲಕ್ಷ್ಮಣನ ಸೈನ್ಯವು ಶತ್ರುಘ್ನನು ಸೇನಾಸಹಿತನಾಗಿ ಮೂರ್ಛೆ ಬಿದ್ದಿದ್ದ ಸ್ಥಳವನ್ನು ಸೇರಿತು. ಅನಂತರದಲ್ಲಿ ಲಕ್ಷ್ಮಣನು ಕಾಲಜಿತ್ತಿನೊಡನೆ ಮುಂದೆ ಹೊರಟು ವಿಕಾಲನಾಗಿಯೂ ಸುಕೇಶನಾಗಿಯೂ ಅಲ್ಪ ಜೀವಾವಶಿಷ್ಟನಾಗಿಯೂ ಇದ್ದ ವೀರನಾದ ಶತ್ರುಘ್ನನನ್ನು ಕಂಡನು.

# ಲವ ಯುದ್ಧ ವಿಜಯ ವರ್ಣನ

ಶತ್ರುಭಯಂಕರನಾದ ಕುಶನು ಆ ಭಯಂಕರವಾದ ಸೈನ್ಯವನ್ನೂ ಅದಕ್ಕೆ ಪ್ರಮುಖನಾದ ಲಕ್ಷ್ಮಣನನ್ನೂ ನೋಡಿ ಹೆದರದೆ, "ಎಲೈ ಲವನೇ! ಸೈನ್ಯವು ಬಂದಿದೆ. ಈಗ ಏನು ಮಾಡಬೇಕು? ಆನೆಗಳೂ ರಥಗಳೂ ಎಣಿಸಲಸಾಧ್ಯವಾಗಿವೆ" ಎಂದನು. ಅದಕ್ಕೆ, "ಅಣ್ಣಾ! ಮಹಾಬಾಹುವಾದ ಕುಶನೇ! ಈಗ ಯುದ್ಧವನ್ನು ಮಾಡಲೇಬೇಕು; ಕುಂಬಳ ಕಾಯನ್ನೊಡೆದಂತೆ ಈ ಸೈನಿಕರನ್ನು ಕೊಲ್ಲಬೇಕು; ಮಾವಿನ ಹಣ್ಣನ್ನು ಸೀಳುವಂತೆ ರಥಗಳನ್ನು ಚೂರು ಚೂರಾಗಿ ಮುರಿದುಹಾಕಬೇಕು; ಕಳಿತ ಹಣ್ಣುಗ್ಗಳಂತೆ ತಲೆಗಳನ್ನು ನೆಲಕ್ಕೆ ಕೆಡಹಬೇಕು. ನಿನ್ನ ಸಂಪೂರ್ಣ ಶಕ್ತಿಗೆ ಈ ಸೈನ್ಯವು, ಅಗಸ್ತ್ಯನಿಗೆ ಸಮುದ್ರವು ಎಂತು ಅಂತೆ, ಈಡಲ್ಲ. ಸಿಂಹದ ಎದುರಿಗೆ ನರಿಗಳ ಸಾಲು ಬರಬಲ್ಲುದೆ? ಪುಣ್ಯಕರವಾದ ಗಂಗಾನದಿಯನ್ನು ನೋಡಿದ ಮಾತ್ರದಿಂದಲೇ ನಾಶವಾಗುವ ಪಾಪರಾಶಿಯಂತೆ ಯುದ್ಧದಲ್ಲಿ ನಿನ್ನನ್ನು ನೋಡಿದ ಮಾತ್ರಕ್ಕೇ ಈ ಸೇನೆಯು ನಾಶವಾಗುವುದು. ನಿನ್ನನ್ನು ಶ್ರೋತ್ರಿಯರು ಮಾತ್ರ ಹಿಡಿಯಬಲ್ಲರಲ್ಲದೆ ಸೈನಿಕರು ಹಿಡಿಯಬಲ್ಲರೆ? ನಾನೂ ಸಹ ಈ ಸೇನೆಯ ವೇಗಕ್ಕೆ ಎಂದಿಗೂ ಮುರಿದುಹೋಗುವವನಲ್ಲ. ಏಳು! ಧನುವನ್ನೆತ್ತಿ ಬೇಗನೆ ಬಾಣಗಳನ್ನು ಹೂಡು. ನಾನು ಈ ಸೈನ್ಯವನ್ನು ತೀಕ್ಷ್ಣ ಬಾಣಗಳಿಂದ ಆವರಿಸುವೆನು. ಆದರೆ ಏನು ಮಾಡಲಿ? ನನ್ನ ಬಿಲ್ಲು ಮುರಿದುಹೋಯಿತು" ಎಂದು ಹೇಳಿ, ಲವನು ಧನುವನ್ನು ಅಪೇಕ್ಷಿಸಿ, ನಿಶ್ಚಲ ದೃಷ್ಟಿಯಿಂದ ಸೂರ್ಯನನ್ನು ನೋಡುತ್ತ ಮನದಲ್ಲಿ ಹೀಗೆ ಸ್ತೋತ್ರ ಮಾಡಿದನು:-

"ಸವಿತೃ ನಾಮಕನಾದ ಸೂರ್ಯನಿಗೆ ನಮಸ್ಕಾರ! ತೇಜೋವಂತನಾದ ಪೂಷನಿಗೆ ನಮಸ್ಕಾರ! ಏಳು ಕುದುರೆಗಳುಳ್ಳವನಾಗಿ ನಿತ್ಯವೂ ಆಕಾಶದಲ್ಲಿ ತಿರುಗುವವನಿಗೆ ನಮಸ್ಕಾರ! ಪ್ರತಿಮಾಸದಲ್ಲಿಯೂ ಮೇಷಾದಿ ರಾಶಿಗಳಿಗೆ ಅಧೀಶನಾಗುವವನಿಗೆ ನಮಸ್ಕಾರ! ಎರಡು ಅಯನಗಳನ್ನುಂಟುಮಾಡುವ ಪ್ರಕಾಶರೂಪನಿಗೆ ನಮಸ್ಕಾರ! ಮೂಗರು, ಕುರುಡರು, ಕಿವುಡರಿಗೆ ವಾಕ್ಕನ್ನೂ ಕಣ್ಣನ್ನೂ ಕಿವಿಯನ್ನೂ ಕೊಡುವವನಾಗಿಯೂ, ತಲೆನೋವು, ಶೂಲೆ, ಕುಷ್ಠ, ಇವುಗಳನ್ನು ನಾಶಮಾಡುವವನಾಗಿಯೂ ಇರುವ ನಿನಗೆ ನಮಸ್ಕಾರ! ಸುವರ್ಣ ವರ್ಣನಾಗಿಯೂ ಸಹಸ್ರಕಿರಣನಾಗಿಯೂ ಲೋಕಕ್ಕೆ ನೇತ್ರಸ್ವರೂಪನಾಗಿಯೂ ಇರುವ ಭಾಸ್ಕರನಾದ ನಿನಗೆ ನಮಸ್ಕಾರ! ದಿವಾಕರನೂ ಪಿಂಗನೂ ಜಲವನ್ನು ಸೃಜಿಸುವ ಮೇಘನೂ ಆಗಿರುವ, ಪರ್ಯಾಯದಿಂದ ಸೃಷ್ಟಿ ಸ್ಥಿತಿ ಸಂಹಾರ ಕಾರಣನಾದ, ಋಗ್ವೇದ ಸ್ವರೂಪನೂ ಬ್ರಾಹ್ಮಣರೂಪನೂ ಆದ ನಿನಗೆ ನಮಸ್ಕಾರ! ಯಜುಸ್ಸಾಮಾಥರ್ವಣ ವೇದಗಳ ಕರ್ತನಾಗಿಯೂ, ಪುರಾಣಾಗಮ ಕರ್ತನಾಗಿಯೂ, ಗಾಥೇತಿಹಾಸಗಳ ಕರ್ತನಾಗಿಯೂ, ಬ್ರಹ್ಮಸ್ವರೂಪನಾಗಿಯೂ ಇರುವವನಿಗೆ ನಮಸ್ಕಾರ!

ವಿಶ್ವಸ್ವರೂಪನಿಗೆ ನಮಸ್ಕಾರ! ರುದ್ರರೂಪನಿಗೆ ನಮಸ್ಕಾರ! ಲೋಕಕ್ಕೆ ಇಷ್ಟಾರ್ಥಪ್ರದನೂ ಮನೋಹರನೂ ವಿಶ್ವೇಶ್ವರನೂ ಪುರುಷನೂ ಸರ್ವದಾ ನಿರ್ಮಲನೂ ಹಂಸನೂ ತೀಕ್ಷ್ಣಕಿರಣನೂ ರತ್ನಕುಂಡಲನೂ ಆದ ನಿನಗೆ ನಮಸ್ಕರಿಸುತ್ತೇನೆ. ಯುದ್ಧದಲ್ಲಿ ಜಯಪ್ರದವಾದ ಧನುವು ಈಗ ನನಗೆ ಹಸ್ತಗತವಾಗಲಿ."

ಈ ಸ್ತೋತ್ರದಿಂದ ಸಂತುಷ್ಟನಾದ ಸೂರ್ಯನು ಸೌರಸ್ತೋತ್ರವನ್ನು ಹೇಳುತ್ತಿದ್ದ ಲವನಿಗೆ ದಿವ್ಯಧನುವನ್ನು ಕೊಟ್ಟು ಶ್ರೇಯೋವಂತನನ್ನಾಗಿ ಮಾಡಿದನು. ಮಹಾಬಾಹುವಾದ ಲವನು ಸುವರ್ಣಪಟ್ಟೆಯಿಂದ ಬಿಗಿದಿರುವ ಗಟ್ಟಿಯಾದ ಮೌರ್ವಿಯುಳ್ಳ ಧನುವನ್ನು ಪಡೆದು ಕುಶನನ್ನು ಕುರಿತು, "ಅಣ್ಣಾ! ನಮ್ಮ ಗುರುವಾದ ವಾಲ್ಮೀಕಿಮುನಿಯು ನನಗೆ ಉಪದೇಶಿಸಿದ್ದ ಸೌರಸ್ತೋತ್ರವನ್ನು ಪಠಿಸಿದುದರಿಂದ ನನಗೆ ಧನುವು ಪ್ರಾಪ್ತವಾಯಿತು. ಉತ್ತಮವಾದ ಅಸ್ತ್ರಗಳೆಲ್ಲವನ್ನೂ ನಾನು ಪಡೆದೆನು" ಎಂದು ಹೇಳಿದನು.

ಬಳಿಕ ಆ ಶೂರರಿಬ್ಬರೂ ಸೈನ್ಯಾರಣ್ಯವನ್ನು ಸುಡುವುದಕ್ಕಾಗಿ ಬಂದಿರುವ ಅಗ್ನಿವಾಯುಗಳೋ ಎಂಬಂತೆ ಬಂದು ಲಕ್ಷ್ಮಣನ ರಕ್ಷಣೆಯಲ್ಲಿದ್ದ ಘೋರವಾದ ಸೈನ್ಯವನ್ನು ಹೊಕ್ಕು, ಪರ್ವತದ ಮೇಲೆ ಎರಡು ಮೇಘಗಳು ಮಳೆಯನ್ನು ಸುರಿಸುವಂತೆ, ಕ್ರೂರವಾದ ಬಾಣದ ಮಳೆಯನ್ನು ಸುರಿಸಿದರು. ಸೇನೆಯನ್ನು ಹೊಕ್ಕ ಅವರಿಬ್ಬರಿಂದ, ಮೈನಾಕ ಮಂದರಗಳು ಕಡೆದಾಗ ಸಮುದ್ರದಲ್ಲಿ ಹುಟ್ಟಿದಂತೆ, ಸೇನೆಯಲ್ಲಿ ದೊಡ್ಡ ಸುಳಿಯುಂಟಾಯಿತು. ಅವರಿಬ್ಬರ ಸಿಂಹನಾದಕ್ಕೆ ಸೈನ್ಯವು ಅರ್ಧಯೋಜನದ ದೂರ ಹಿಮ್ಮೆಟ್ಟಿತು. ಕಾಲಜಿತ್ತೂ ಲಕ್ಷ್ಮಣನೂ ಕೋಪಗೊಂಡು ಕುಶನನ್ನು ಬಾಣಗಳಿಂದ ಆವರಿಸಿದರು. ಮಹಾಪೌರುಷಶಾಲಿಯಾದ ಲವನನ್ನು ಲಕ್ಷ್ಮಣನ ಸೇನೆಯು ಮುತ್ತಿಕೊಂಡಿತು.

ನೂರು ಆನೆಗಳಿಗೆ ಒಂದು ಭ್ರಮಿ (ಮಂಡಲಾಕಾರವಾದ ಗತಿವಿಶೇಷವುಳ್ಳ ಗುಂಪು)ಯಂತೆ, ನೂರಕ್ಕೆ ನೂರರಷ್ಟು ಭ್ರಮಿಗಳು ಹೆಚ್ಚುತ್ತಿದ್ದುವು. ನೂರು ಆನೆಗಳಿಗೂ, ಆನೆಯೊಂದಕ್ಕೆ ಹತ್ತರಂತೆ ಸಾವಿರ ರಥಗಳೂ, ರಥವೊಂದೊಂದಕ್ಕೆ ನೂರರಂತೆ ಕುದುರೆಗಳೂ (೧,೦೦,೦೦೦), ಕುದುರೆಯೊಂದಕ್ಕೆ ನೂರರಂತೆ ಪದಾತಿಗಳೂ (೧,೦೦,೦೦,೦೦೦), ಹೀಗೆ ನೂರು ಭ್ರಮಿಗಳು, ಬಾಲನೂ ಏಕಾಕಿಯೂ ಆದ ಲವನನ್ನು ಸುತ್ತಿಕೊಂಡು ಬಾಣಗಳಿಂದಲೂ, ವಜ್ರಾಯುಧ, ಮುದ್ಗರ, ಪ್ರಾಸ, ಗದೆ, ಅಸಿ, ಶಕ್ತಿ, ಯಷ್ಟಿ, ಪರಶ್ವಧ, ಕುಂತ, (ಹಿಡಿದು ಆಕರ್ಷಿಸುವ) ಪಾಶ ಮೊದಲಾದ ಆಯುಧಗಳಿಂದಲೂ ಹೊಡೆದರು. ಸಂಭ್ರಮಗೊಳ್ಳುತ್ತಿರುವ ಕುದುರೆಗಳ ಮೇಲೆ ಕುಳಿತು ತನ್ನನ್ನು ಮುತ್ತಿರುವ ಅಸಂಖ್ಯಾತರಾದ ಯೋಧರನ್ನು ಲವನು ಹರಿತವಾದ ಬಾಣಗಳಿಂದ ಹೊಡೆಯಲು, ಅವರ ತಲೆಗಳು ನೆಲಕ್ಕೆ ಉರುಳುತ್ತಿದ್ದುವು. ಹೀಗೆ

ಲವನು ರಭಸದಿಂದ ಯುದ್ಧಕ್ರಿಯೆಯನ್ನು ಮಾಡುತ್ತ ಪ್ರಲಯಾಂತಕನಾದ ಯಮನಂತೆ ಗರ್ಜಿಸುತ್ತಿದ್ದನು; ನೂರು ಮಂದಿ ವೀರರಿಗೆ ನೂರು, ಇನ್ನೂರು ಜನಕ್ಕೆ ಇನ್ನೂರು, ಐನೂರಕ್ಕೆ ಐನೂರು, ಸಾವಿರಕ್ಕೆ ಸಾವಿರ, ಲಕ್ಷಕ್ಕೆ ಲಕ್ಷ - ಈ ರೀತಿಯಾಗಿ ಬಾಣಗಳನ್ನು ಬಿಟ್ಟು ವೀರರನ್ನು ಕೊಲ್ಲುತ್ತ ಬಂದನು.

ಹೀಗೆ ಆನೆಗಳ ನಾಲ್ವತ್ತು ಭೃಮಿಗಳನ್ನು ಕೊಂದ ಸಿಂಹವಿಕ್ರಮನಾದ ಲವನು ಶತ್ರುಗಳ ಬಾಣಗಳಿಂದ ಸೀಳಿಹೋದ ದೇಹವುಳ್ಳವನಾಗಿ ಎಲ್ಲ ದಿಕ್ಕುಗಳನ್ನೂ ನೋಡಿದನು. ಒಂದು ಕಡೆಯಲ್ಲಿ ರಥ ಗಜಗಳ ಗುಂಪಿನೊಡನೆ ಸೈನ್ಯವು ನಡೆಯುತ್ತ ಖಡ್ಗ ಕಾಂತಿ ಯಿಂದಲೂ ಆನೆಗಳಿಂದಲೂ ಕಪ್ಪಗೆ ಘೋರವಾಗಿ ಕಾಣಿಸುತ್ತಿದ್ದಿತು. ಲವನು ಹಿಂದೆ ಕುಶನನ್ನು ಕಾಣಲಿಲ್ಲ. "ನಮ್ಮಣ್ಣನು ಎಲ್ಲಿ ಹೋದನು?" ಎಂದು ಬಹಳ ಹೊತ್ತು ಚಿಂತಿಸುತ್ತಿದ್ದನು. ಆಗ ಅವನ ಉತ್ತಮವಾದ ಧನುವನ್ನು, ಲವಣಾಸುರನ ಸೋದರಮಾವನಾದರೂ ರಾಮನಲ್ಲಿ ಶರಣಾಗತನಾಗಿದ್ದ, ರುಧಿರಾಕ್ಷನೆಂಬ ರಾಕ್ಷಸನು ಅಪಹರಿಸಿಕೊಂಡು ಬರುತ್ತಿದ್ದನು. ಧನುವನ್ನು ತೆಗೆದುಕೊಂಡು ಬೇಗನೆ ಓಡಿಹೋಗುತ್ತಿದ್ದ ರಾಕ್ಷಸನನ್ನು ಕುರಿತು ಲವನು, "ನನ್ನಿಂದ ಬದುಕಿ ಎಲ್ಲಿ ಹೋಗುವೆ? ನಿಲ್ಲು ನಿಲ್ಲು" ಎಂದು ಕೂಗುತ್ತ ಚಕ್ರವನ್ನು ತೆಗೆದುಕೊಂಡು, ತಾಯಿಯ ಪಾದಗಳನ್ನು ಮನದಲ್ಲಿ ಧ್ಯಾನಿಸುತ್ತ, ಗಿಡುಗನು ತನ್ನ ಆಹಾರವನ್ನು ಹಿಡಿದು ಆಕಾಶದಲ್ಲಿ ಹಾರುವಂತೆ ಹಾರಿ, ರಕ್ತಲಿಪ್ತದೇಹನಾಗಿರುವುದರಿಂದ ಅಗ್ನಿಮೂರ್ತಿಯಂತೆಯೂ ಸಾಕ್ಷಾತ್ ಚಕ್ರಪಾಣಿಯಂತೆಯೂ ಪ್ರಕಾಶಿಸಿದನು. ಯೋಧರು ಆಕಾಶದಲ್ಲಿದ್ದ ಲವನನ್ನು ನೋಡಿ, "ಮೇಲೆ ಬೀಳುವನೋ ಏನೋ?" ಎಂದು ಹೆದರಿ ಧನುವಿನಲ್ಲಿ ಬಾಣಗಳನ್ನು ಸಂಧಾನ ಮಾಡಿದರು. ಕೆಲವರು ತಮ್ಮ ತಲೆಗೆ ಮರೆಯಾಗುವಂತೆ ಗುರಾಣಿಗಳನ್ನು ಗಟ್ಟಿಯಾಗಿ ಹಿಡಿದುಕೊಂಡರು. "ಈ ಶೂರನು ನಮ್ಮ ಮೇಲೆ ಬೀಳುವುದರಲ್ಲಿ ಸಂದೇಹವಿಲ್ಲ" ಎಂದು ತಿಳಿದು ಕೆಲವರು ರಥದ ಕೆಳಗೆ ಅವಿತುಕೊಂಡರು. ಬಾಣಗಳಿಂದ ದೇಹವು ಸೀಳಿಹೋಗಿ ನೆಲದಲ್ಲಿ ಬಿದ್ದಿದ್ದ ಆನೆಗಳ ಹೊಟ್ಟೆಗಳ ಕೆಳಗೆ ಕೆಲವರು ಮಹಾರಥರು ಅಡಗಿಕೊಂಡರು.

ಹೆದರಿದ ಶೂರರೆಲ್ಲರೂ ಹೀಗಾಗಲು, ಉಳಿದಿದ್ದ ಮಹಾಶೂರರಾಗಿದ್ದ ದಶರಥನ ಮಂತ್ರಿಯಾದ ಸುಜ್ಞನ ಮಕ್ಕಳು ಜಿತಶ್ರಮ, ಧಾರ್ಮಿಕ, ಸುಕೇತ, ಶತ್ರುಸೂದನ, ಚಂದ್ರ, ಮದ, ಶಲ, ಕಾಲ, ಮಲ್ಲ, ಸಿಂಹ ಎಂಬ ಹತ್ತು ಮಂದಿ ಮಾತ್ರ ಹೊರಟು, ಆಕಾಶದಲ್ಲಿ ಚಕ್ರಹಸ್ತನಾಗಿದ್ದ ಲವನನ್ನು ತೀಕ್ಷ್ಣವಾದ ಬಾಣಗಳಿಂದ ಹೊಡೆದರು. ಹತ್ತು ಹತ್ತು ಬಾಣಗಳನ್ನೆತ್ತಿ ಹೊಡೆದು ಅವರು ಲವನ ಕೈಯಲ್ಲಿದ್ದ ಚಕ್ರವನ್ನು ಕತ್ತರಿಸಲು, ಲವನು ಬೇಗನೆ ಕೆಳಕ್ಕೆ ಬಂದು ಪರಿಘವನ್ನು ತೆಗೆದುಕೊಂಡು ನಗುತ್ತ ಆ ಮಂತ್ರಿಪುತ್ರರನ್ನು ಹೊಡೆದನು. ಅವರು ಹರಿದುಹೋದ ಕವಚಗಳೂ ಗುರಾಣಿಗಳೂ ಉಳ್ಳವರಾಗಿ ರಕ್ತದಿಂದ ನೆನೆದುಹೋಗಿ, ವೇದಬಾಹ್ಯರೂ,

ಅಲ್ಪಶಾಸ್ತ್ರಗಳನ್ನೋದಿದವರೂ, ವಿಷ್ಣು ಭಕ್ತಿ ರಹಿತರೂ, ತಂದೆತಾಯಿಗಳಲ್ಲಿ ಭಕ್ತಿಯಿಲ್ಲದವರೂ ಆದ ನಾಸ್ತಿಕರು ರೌರವವೆಂಬ ನರಕದಲ್ಲಿ ಬೀಳುವಂತೆ ಬಿದ್ದುಹೋದರು. ಅಷ್ಟರಲ್ಲಿ ಆ ರುಧಿರಾಕ್ಷನೆಂಬ ರಾಕ್ಷಸನು ಗದೆಯನ್ನು ತೆಗೆದುಕೊಂಡು ಬಂದು ಲವನ ತಲೆಯ ಮೇಲೆ ಬಲವಾಗಿ ಹೊಡೆದನು. ಆ ಬಾಲನು ಮೂರ್ಛಿತನಾಗಿ ಮುಹೂರ್ತಮಾತ್ರ ನೆಲಕ್ಕೆ ಬಿದ್ದನು; ಬಳಿಕ ಮೂರ್ಛೆಯಿಂದೆಚ್ಚೆತ್ತು ಗಜೇಂದ್ರನಂತೆ ನಿಂತು ನೆಲದ ಮೇಲಿದ್ದ ಕುಂತಾಯುಧವನ್ನು ತೆಗೆದುಕೊಂಡು ಆ ರಾಕ್ಷಸನ ಮೇಲೆ ಬಿದ್ದು ಅವನ ಜುಟ್ಟನ್ನು ಹಿಡಿದೆಳೆದುಕೊಂಡು ಆ ದುಷ್ಟನ ತಲೆಯನ್ನು ಕುಂತಾಯುಧದಿಂದ, ಕಡಿದನು; ಬಳಿಕ ತನಗೆ ಸೂರ್ಯನು ಕೊಟ್ಟಿದ್ದ ಧನುವನ್ನು ತೆಗೆದುಕೊಂಡು ಸಿಂಹನಾದಮಾಡುತ್ತ ಸೇನೆಯನ್ನು ನಾಶಮಾಡುವ ಅನೇಕವಾದ ತೀಕ್ಷ್ಣಬಾಣಗಳನ್ನು ಬಿಟ್ಟನು. ಮತ್ತೆ ಸೈನ್ಯವು ಅವನನ್ನು, ಗರ್ಭಸ್ಥವಾದ ಜಂತುವು ಹೊರಕ್ಕೆ ಬಂದ ಕೂಡಲೆ ಅಜ್ಞಾನವು ಅದನ್ನು ಸುತ್ತಿಕೊಳ್ಳುವಂತೆ, ಸುತ್ತಿಕೊಂಡಿತು. ಬೆಂಕಿಯನ್ನು ಆವರಿಸಿದ ಹುಲ್ಲನ್ನು ಆ ಬೆಂಕಿಯು ಹೇಗೆ ಸುಡುವುದೋ ಹಾಗೆ ಕೋಪದಿಂದ ಆ ಸೈನ್ಯವನ್ನು ಲವನು ಸುಟ್ಟು ಹಾಕಿದನು.

# ಲಕ್ಷ್ಮಣ ಸೇನಾ ಪರಾಜಯ

ಬಳಿಕ ಕುಶನು ಆ ಲಕ್ಷ್ಮಣನನ್ನು ನೋಡಿ ಸಿಂಹದಂತೆ ವಿಕ್ರಮವುಳ್ಳವನಾಗಿ ಬಂದನು. ಬರುತ್ತಿರುವ ಅವನನ್ನು ಲಕ್ಷ್ಮಣನು ಐದು ಬಾಣಗಳಿಂದ ಹೊಡೆದನು. ಆ ಬಾಣಗಳಿಂದ ಹೊಡೆಯಲ್ಪಟ್ಟ ವೀರನಾದ ಕುಶನು, "ಎಲೈ ಮಹಾವೀರನೇ! ಹಿಮ್ಮೆಟ್ಟದೆ ಸ್ಥಿರವಾಗಿ ನಿಲ್ಲು" ಎಂದು ಹೇಳಿ ಒಂದು ಬಾಣವನ್ನು ಬಿಟ್ಟನು. ಆ ಬಾಣದಿಂದ ಲಕ್ಷ್ಮಣನು ಎರಡು ಗಳಿಗೆಗಳ ಹೊತ್ತು ರಥ ಸಹಿತವಾಗಿ ತಿರ್ರನೆ ತಿರುಗುತ್ತಿದ್ದನು; ತಿರುಗಿದ ವೇಗಕ್ಕೆ ನಾಲ್ಕು ಕುದುರೆಗಳೂ ಸತ್ತುವು. ಬಳಿಕ ಲಕ್ಷ್ಮಣನು ಮತ್ತೊಂದು ರಥವನ್ನೇರಿ ಬಾಣಗಳನ್ನು ಬಿಟ್ಟನು. ಎರಡು ಬಾಣಗಳಿಂದ ಆ ಕುಶನ ನಿರ್ಮಲವಾದ ಕವಚವನ್ನೂ ಮೂರು ಬಾಣಗಳಿಂದ ಅವನ ಕಿರೀಟವನ್ನೂ ಕತ್ತರಿಸಲು, ಅದು ಅದ್ಭುತವಾಗಿ ತೋರಿತು. ಕತ್ತರಿಸಿ ಹೋದ ಕವಚವುಳ್ಳ ಶೂರನಾದ ಆ ಕುಶನು ಆ ಯುದ್ಧದಲ್ಲಿ ಸ್ವಲ್ಪವೂ ಬಳಲದೆ, ಪೊರೆಯನ್ನು ಬಿಟ್ಟ ಸರ್ಪರಾಜನಂತೆ ಪ್ರಕಾಶಿಸುತ್ತಿದ್ದನು.

ಶೂರನಾದ ಕುಶನು ಲಕ್ಷ್ಮಣನನ್ನು ಕುರಿತು ವಿನಯಪೂರ್ವಕವಾಗಿ "ಎಲೈ ಲಕ್ಷ್ಮಣನೇ! ನೀನು ಶತ್ರುಭಾವವನ್ನು ಬಿಟ್ಟು ನನ್ನ ಭಾರವನ್ನು ಕಳೆದು ಉಪಕಾರ ಮಾಡಿದೆ ಎಂದು ಭಾವಿಸುವೆನು. ನಾನೂ ಹಾಗೆಯೇ ಮಾಡುವೆನು. ಈಗ ನಿನಗೆ ಸೈನ್ಯಭಾರವು ಹೆಚ್ಚಾಗಿದೆ; ಅದೆಲ್ಲವನ್ನೂ ನಾಶಮಾಡುತ್ತೇನೆ; ನನ್ನ ಕೈಚಳಕವನ್ನು ನೋಡು" ಎಂದು ಹೇಳಿ ಅಥರ್ವವೇದ ಪ್ರಸಿದ್ಧವಾದ ಸೂಕ್ತಮಂತ್ರವನ್ನು ಜಪಿಸುತ್ತ ಆಗ್ನೇಯಾಸ್ತ್ರವನ್ನು ಬಿಟ್ಟನು. ಆ ಆಗ್ನೇಯಾಸ್ತ್ರದಿಂದ ಸಹಸ್ರ ಮುಖವಾಗಿ ಉರಿಗಳೆದ್ದು ಮಹಾತ್ಮನಾದ ಲಕ್ಷ್ಮಣನ ರಥವನ್ನು ಸುಟ್ಟು ಹಾಕಿದುವು; ಅವನ ಸೈನ್ಯವೂ ಧ್ವಜಗಳೂ ವಸ್ತ್ರಾಭರಣಗಳೂ ಸುಟ್ಟು ಹೋದುವು; ಹೊಳೆಯುತ್ತಿರುವ ಕಂಚುಕಗಳನ್ನು ತೊಟ್ಟಿದ್ದ ವೀರರು ಸುಟ್ಟು ಶಿಖಾಶ್ಮಶ್ರುಗಳುಳ್ಳವರಾದರು; ಹಂಸ ವರ್ಣಗಳಾಗಿದ್ದ ಕುದುರೆಗಳ ಕೇಸರಗಳೂ ಬಾಲಗಳೂ ಉರಿದು ಹೋದುವು; ರಥಗಳೂ ಅವುಗಳ ಚಕ್ರಗಳೂ ಛತ್ರ ಚಾಮರಗಳೂ ಸುಟ್ಟುವು; ಬೆಂಕಿಯಿಂದ ಆಯುಧಗಳೆಲ್ಲವೂ ಸುಟ್ಟುಹೋದುವು. ಶತ್ರುಸಂಹಾರಕನಾದ ಲಕ್ಷ್ಮಣನು, ಸುಟ್ಟು ಹೋಗುತ್ತಿರುವ ತನ್ನ ಸೈನ್ಯವನ್ನು ನೋಡಿ ಆ ಆಗ್ನೇಯಾಸ್ತ್ರವನ್ನು ವಾರುಣಾಸ್ತ್ರದಿಂದ ಶಾಂತಿಗೊಳಿಸಿದನು. ಬಳಿಕ ಮಹಾವೀರನಾದ ಕುಶನು ವಾಯವ್ಯಾಸ್ತ್ರವನ್ನು ಪ್ರಯೋಗಿಸಿದನು. ವಾಯವ್ಯಾಸ್ತ್ರದಿಂದ ಶೂರರೆಲ್ಲರೂ ಆಕಾಶದಲ್ಲಿ ಹಾರಾಡುತ್ತಿದ್ದರು; ವಾಯುವೇಗದಿಂದ ರಥಗಳೂ ಮತ್ತಗಜಗಳೂ ಬಿದ್ದು ಹೋಗುತ್ತಿದ್ದುವು.

ಸೇನಾಪತಿಯಾದ ಕಾಲಜಿತ್ತು ಕ್ರುದ್ಧನಾಗಿ ಲಕ್ಷ್ಮಣನನ್ನು ಕುರಿತು, "ನಾನು ಈ ಬಾಲನನ್ನು, ದಡವು ಸಮುದ್ರವನ್ನು ಅಡಗಿಸುವಂತೆ, ಅಡಗಿಸಿ ಇವನ ತಮ್ಮನು ಬರುವುದರೊಳಗಾಗಿ ಪರಾಕ್ರಮವನ್ನು ತೋರಿಸುವೆನು" ಎಂದು ಹೇಳಿ ಕುಶನ ಮೇಲೆ ಬಂದು, "ರಾಮಸೈನ್ಯವನ್ನು ನಾಶಪಡಿಸುವ ನೀನು ಈಗ ಸಿಕ್ಕಿದೆ; ನಾನು ನಿನ್ನ ಮೂಲೋತ್ಪಾಟನೆಯನ್ನು ಮಾಡುವುದೇ ಸಿದ್ಧ" ಎಂದನು. ಕಾಲಜಿತ್ತಿನ ಮಾತನ್ನು ಕೇಳಿ

ಕುಶನು, "ಅಡಿಗೆ ಕತ್ತಿನ ಮೊಲೆಯೂ, ಕಿವುಡನಿಗೆ ಕೇಳಲಾರದ ಕಿವಿಗಳೂ, ಬಾಲಕರಿಗೆ ಬ್ರಹ್ಮವಸ್ತುವೂ, ಹುಲ್ಲುಕಡ್ಡಿಗೆ ಬೆಂಕಿಯೂ ಹೇಗೋ ಹಾಗೆ ನಿನ್ನ ಹೆಸರು ನಿನಗೆ ವ್ಯರ್ಥವಾಗಿ ತೋರುವುದು. ನಿನ್ನಂತಹ ಹರಟೆಯವನನ್ನು ಯಾವನು ಸೇನಾಧಿಪತಿಯನ್ನಾಗಿ ಮಾಡಿದನು? ಎಲೈ ಮೂಢನೇ! ನನ್ನ ತಮ್ಮನು ನಿನ್ನೆದುರಿಗೆ ನಿಮ್ಮ ಸೈನ್ಯವನ್ನು ನಾಶಮಾಡುವನು. ನಿನ್ನ ನಾಲಗೆಯನ್ನು ಸೀಳುವುದಕ್ಕಾಗಿ ನಾನು ಬಿಡುವ ಬಾಣವನ್ನು ಕತ್ತರಿಸು" ಎಂದು ಹೇಳಿ ಕುಶನು ಆ ಕಾಲಜಿತ್ತಿನ ನಾಲಗೆಯನ್ನು ಬಾಣದಿಂದ ಕತ್ತರಿಸಿ, "ಈಗ ನೀನು ಮೌನಿಯಾದೆ. ಸೇನೆಯಲ್ಲಿರುವ ಲವನನ್ನು ಬೇಗನೆ ಕರೆಯಿಸಿ ಪೂಜಿಸಿ ಮೌನವ್ರತವನ್ನು ಹೊಂದು" ಎಂದನು. ಕಾಲಜಿತ್ತು ಬಹಳವಾಗಿ ಕೋಪಿಸಿ, ವೇಗವಾದ ಬಾಣವನ್ನು ಕುಶನ ಎದೆಗೆ ಬಿಟ್ಟು ಅವನ ಎಡಗೈಯನ್ನು ಹೊಡೆದನು. ಕುಶನೂ ಕಾಲಜಿತ್ತಿನ ಬಲಗೈಯನ್ನು ಬಾಣಗಳಿಂದ ಕತ್ತರಿಸಿ, ಅರ್ಧಚಂದ್ರ ಬಾಣದಿಂದ, ಹೊಳೆಯುತ್ತಿರುವ ಕುಂಡಲಗಳುಳ್ಳ ಅವನ ತಲೆಯನ್ನು ಕತ್ತರಿಸಿದನು.

ಪ್ರೌಢನಾದ ಕಾಲಜ್ಜಿತ್ತು ಮೃತನಾಗಲು, ಲಕ್ಷ್ಮಣನು ಸಾಲ ತಾಲ ವಟ ವೃಕ್ಷಗಳನ್ನು ಕತ್ತರಿಸುವ ಘೋರವಾದ ಬಾಣಗಳ ಮಳೆಯನ್ನು ಕರೆಯುತ್ತ ಬಲವಾದ ಆರು ಬಾಣಗಳನ್ನು ಕುಶನ ಎದೆಗೆ ಬಿಟ್ಟು ಅವನ ಮೇಲೆ ಶಕ್ತಿ, ಗದೆ, ಕುಂತ, ಖಡ್ಗ, ಪರಶು, ತೋಮರ, ಚರ್ಮ ಮೊದಲಾದ ಆಯುಧಗಳನ್ನೆಸೆದನು. ಕುಶನು ಅವು ಏಳೇಳು ತುಂಡುಗಳಾಗುವಂತೆ ಕತ್ತರಿಸಿ ಸಿಂಹದಂತೆ ಗರ್ಜಿಸುತ್ತ, "ನಿಲ್ಲು ನಿಲ್ಲು; ಬಾಣಗಳನ್ನು ತಡೆ" ಎಂದು ಹೇಳುತ್ತ ಹದ್ದಿನ ರೆಕ್ಕೆಗಳುಳ್ಳವಾಗಿಯೂ ಬಹಳ ಹರಿತವಾಗಿಯೂ ಸರ್ಪಗಳಂತೆ ಕ್ರೂರವಾಗಿಯೂ, ಉರಿಯುತ್ತಿರುವ ಬೆಂಕಿಯ ಕಿಡಿಗಳುಳ್ಳವಾಗಿಯೂ ಇರುವ ವಾಲ್ಮೀಕಿಮುನಿದತ್ತವಾದ ಐದು ಬಾಣಗಳನ್ನು ಬಿಲ್ಲಿನಲ್ಲಿ ಹೂಡಿದನು. ಬಿಟ್ಟ ಕೂಡಲೆ ಮರ್ಮಭೇದಕಗಳಾದ ಆ ಬಾಣಗಳು ಆಕಾಶದಲ್ಲಿ ಉರಿಯುತ್ತ ಬಂದು ಮಹಾತ್ಮನಾದ ಲಕ್ಷ್ಮಣನ ಹೃದಯವನ್ನು ಭೇದಿಸಿದುವು. ಲಕ್ಷ್ಮಣನು ತೇಜೋಹೀನನಾಗಿ, ಸೂರ್ಯನು ಆಕಾಶದಿಂದ ನೆಲಕ್ಕೆ ಬೀಳುವಂತೆ ಬಿದ್ದುಹೋದನು; ಬಳಿಕ ಕುಶನು ಲವನ ಶಬ್ದವನ್ನು ಕೇಳಿ, ಕತ್ತಿ ಗುರಾಣಿಗಳನ್ನು ಹಿಡಿದು ಪಕ್ಷಿರಾಜನಂತೆ ಆಕಾಶದಲ್ಲಿ ಹಾರಿಹೋಗಿ ಲವನನ್ನು ಮುತ್ತಿಕೊಂಡಿದ್ದುವ ಆನೆಗಳ ಗುಂಪನ್ನು ಕಂಡು ಕ್ರುದ್ಧನಾಗಿ, ಕತ್ತಿಯಿಂದ ಆನೆಗಳನ್ನೂ ಬಹಳಮಂದಿ ರಥಿಗಳನ್ನೂ ಕೊಲ್ಲುತ್ತ, ಕ್ಷಣ ಕಾಲದಲ್ಲಿ ಆ ಭೃಮಿಗಳೆಲ್ಲವನ್ನೂ ನಾಶಮಾಡಿ ಲವನನ್ನು ಬಿಡಿಸಿದನು. ಹೀಗೆ ವಾಲ್ಮೀಕ್ಯಾಶ್ರಮದಲ್ಲಿ ಅವರಿಬ್ಬರೂ ಸೈನ್ಯವೆಲ್ಲವನ್ನೂ ಕೊಂದು ನಿರ್ಭಯವಾಗಿ ತಮ್ಮ ಆಶ್ರಮದಲ್ಲಿದ್ದರು.

# ಹನೂಮದ್ವಾಕ್ಯ

ಗಂಗಾತೀರದಲ್ಲಿ ಯಜ್ಞಮಂಟಪದಲ್ಲಿ ದೀಕ್ಷಿತನಾಗಿ ಮುನಿಗಳೊಡನೆ ಕುಳಿತಿದ್ದ ಶ್ರೀರಾಮನು ಭರತನನ್ನು ಕುರಿತು, "ನಿನ್ನ ತಮ್ಮನಾದ ಶತ್ರುಘ್ನನು ಯಾರಿಂದ ಪರಾಜಿತನಾಗಿದ್ದಾನೋ ಆ ಅಶ್ವಾಪಹಾರಕರಿಬ್ಬರನ್ನೂ ಜಯಿಸಿ ಶೂರನಾದ ಲಕ್ಷ್ಮಣನು ಇನ್ನೂ ಏಕೆ ಬರಲಿಲ್ಲ? ಲಕ್ಷ್ಮಣನನ್ನು ಸ್ವಪ್ನದಲ್ಲಿಯಾದರೂ ನೋಡಿದ ಮಾತ್ರಕ್ಕೆ ಈ ಚರಾಚರಾತ್ಮಕವಾದ ಲೋಕತ್ರಯವೂ ನಾಶವಾಗುವುದು; ಇನ್ನು ಅವನನ್ನು ಪ್ರತ್ಯಕ್ಷದಲ್ಲಿ ಯುದ್ಧದಲ್ಲಿ ಸಹಿಸುವವನು ಯಾರು? ತಮ್ಮನು ಬಿದ್ದುಹೋದ ರೋಷದಿಂದ, ಬಹುಮಂದಿ ಶೂರರೊಡನೆ ಕೂಡಿ, ನನ್ನಿಂದ ಆಜ್ಞಪ್ತನಾಗಿ ಹೋಗಿರುವ ಆ ಲಕ್ಷ್ಮಣನ ಮೇಲೆ ಯುದ್ಧಮಾಡಲು ಕಾಡಿನಲ್ಲಿ ಹುಟ್ಟಿ ಅಜ್ಞರಾಗಿಯೂ ಚಪಲರಾಗಿಯೂ ದಿಕ್ಕಿಲ್ಲದವರಾಗಿಯೂ ಇರುವ ಆ ಬಾಲಕರು ಸಮರ್ಥರಾಗಲಾರರು. ಲಕ್ಷ್ಮಣನ ಭಯದಿಂದ ಯಾರ ಮರೆ ಹೋಗುವರೋ? ಲೋಕಧರ್ಮವನ್ನನುಸರಿಸಿ ತನ್ನ ಪ್ರತಾಪವನ್ನು ತೋರಿಸಿ ಬಿದ್ದು ಹೋಗಿರುವ ಶತ್ರುಘ್ನನನ್ನು ಲಕ್ಷ್ಮಣನು ಯಮಲೋಕದಿಂದಲಾದರೂ ಕರೆತಂದು ತಾಯಿಗೆ ತೋರಿಸುವನು. ಕುಪಿತನಾಗಿ ತನ್ನ ಮಕ್ಕಳಿಬ್ಬರನ್ನೂ ಲಕ್ಷ್ಮಣನು ಕೊಲ್ಲುತ್ತಿರುವುದನ್ನು ಕೇಳಿ ಅನಾಥಳಾದ ಅವರ ತಾಯಿಯು ಅವರನ್ನುಳಿಸಿಕೊಳ್ಳಲು ಯಾರನ್ನು ಕೇಳಿಕೊಳ್ಳುವಳೋ? ಆ ಇಬ್ಬರು ಬಾಲಕರು ತಮ್ಮ ನಾಶಕ್ಕಾಗಿ ಏಕೆ ನಮಗೆ ವಿಘ್ನಕಾರಿಗಳಾದರೋ? ವರ್ಷಕ್ಕೆ ಎರಡು ದಿನಗಳು ಕಡಿಮೆಯಾಗಿರುವ ಇಷ್ಟು ಕಾಲವೂ ಶತ್ರುಘ್ನನ ರಕ್ಷಣೆಯಲ್ಲಿ ರಕ್ಷಿತವಾಗಿದ್ದ ಕುದುರೆಯನ್ನು ಆ ಬಾಲಕರು ತಮ್ಮ ಕೈಗೆ ಸಿಕ್ಕಿತೆಂದು, ನನ್ನನ್ನೂ ಭರತನನ್ನೂ ಸುಗ್ರೀವನನ್ನೂ ವಿಭೀಷಣನನ್ನೂ ವಾಲಿಪುತ್ರನಾದ ಅಂಗದನನ್ನೂ ಮಹಾಬಲನಾದ ಹನುಮಂತನನ್ನೂ ಉಳಿದ ನಮ್ಮ ಬಂಧು ಮಿತ್ರರನ್ನೂ ಅಲಕ್ಷ್ಯಮಾಡಿ ತೃಣವಾಗಿ ಎಣಿಸಿ ಕಟ್ಟಿ ಹಾಕಿರುವರು. ಅವರ ಈ ಬಾಲಚೇಷ್ಟೆಯನ್ನು ನೋಡು! ಎಲೈ ಭರತನೇ! ನನ್ನ ಕುದುರೆಯು ಇರುವೆಡೆಗೆ ಜನಗಳನ್ನು ಕಳುಹಿಸು. ಅವರು ಲಕ್ಷ್ಮಣನ ಬಳಿಗೆ ಹೋಗಿ ಕುದುರೆಯನ್ನು ತರಲಿ. ಕುಪಿತನಾದರೂ ಲಕ್ಷ್ಮಣನು ಯಾವಾಗಲೂ ನನ್ನ ಮಾತನ್ನು ಕೇಳುವನು" ಎಂದನು.

ಭರತನು ಐದು ಮಂದಿ ಯೋಧರನ್ನು ಕ್ಷಣಮಾತ್ರದಲ್ಲಿ ಕರೆಯಿಸಿ ರಾಮನ ಬಳಿಯಲ್ಲಿ ನಿಲ್ಲಿಸಲು, ಶ್ರೀರಾಮನು ಅವರನ್ನು ಕುರಿತು, "ನೀವು ಲಕ್ಷ್ಮಣನ ಸಮೀಪಕ್ಕೆ ಹೋಗಿ, 'ಎಲೈ ಲಕ್ಷ್ಮಣನೇ! ಯುದ್ಧದಲ್ಲಿ ಆ ಬಾಲಕರಿಬ್ಬರಿಗೂ, ಜೀವಂತವಾಗಿರುವಂತೆ ಸಮ್ಮೋಹನಾಸ್ತ್ರವನ್ನು ಪ್ರಯೋಗಿಸಿ ಮೋಹಿತರನ್ನಾಗಿ ಮಾಡಿ, ಅವರು ಅಪರಾಧಿಗಳಾಗಿದ್ದರೂ ಅವರನ್ನು ರಕ್ಷಿಸಬೇಕು. ನೀನು ಶೂರನೂ ಸಮರ್ಥನೂ ರಥಾರೂಢನೂ ಸರ್ವಾಸ್ತ್ರ ಕೋವಿದರಾದ ಶೂರರಿಂದ ಕೂಡಿದವನೂ ಆಗಿದ್ದೀಯೆ. ಆ ಕುಮಾರರು ವಿರಥರು, ಆಶ್ರಯರಹಿತರು. ಮಕ್ಕಳಾದ ಅವರಿಬ್ಬರನ್ನೂ ಯುದ್ಧದಲ್ಲಿ ಕೆಡಹದೆ ಬೇಗನೆ ಇಲ್ಲಿಗೆ ಕರೆದುಕೊಂಡು ಬಾ. ಅನ್ಯರ ಮಕ್ಕಳಲ್ಲಿ ಯಾರು ದಯೆಯನ್ನು ಮನಃಪೂರ್ವಕವಾಗಿ ತೋರಿಸುವರೋ ಅಂತಹ ಸಾಧುಗಳು ಲೋಕದಲ್ಲಿ ಪುತ್ರಪೌತ್ರ ಸಹಿತರಾಗಿರುವರು.

ಭೂಮಿಯಲ್ಲಿ ಹುಟ್ಟಿದ ನಾನು ಸೀತೆಯ ಮುಖಕ್ಕೆ ಸದೃಶವಾದ ಮುಖವುಳ್ಳ ಮಗನ ಮುಖವನ್ನು ನೋಡಲಿಲ್ಲ. ಆದಕಾರಣ ಅವರಿಬ್ಬರನ್ನೂ ನಾನು ಬಿಡಿಸುತ್ತೇನೆ. ಅವರು ಯಾರ ಮಕ್ಕಳು? ಏತಕ್ಕಾಗಿ ವನ ಸಂಚಾರ ಮಾಡುತ್ತಿರುವರು? ಅವರ ತಾಯಿ ಎಲ್ಲಿರುವಳು? ಎಂಬುದನ್ನು ಕೇಳಿ ಆಕೆಯನ್ನೂ ಅವರನ್ನೂ ಕರೆದುಕೊಂಡು ಬಾ' ಎಂದು ನಾನು ಹೇಳಿದೆನೆಂದು ಆತನಿಗೆ ತಿಳಿಸಿರಿ' ಎಂದನು.

ಶ್ರೀರಾಮನು ದೂತರನ್ನು ಕುರಿತು ಹೀಗೆ ಹೇಳುತ್ತಿರುವಷ್ಟರಲ್ಲಿ, ಬಾಣಗಳಿಂದ ಸೀಳಿಹೋಗಿ ರಕ್ತ ಪ್ರವಾಹವು ಹರಿಯುತ್ತಿರುವ, ಲಕ್ಷ್ಮಣನ ಕಡೆಯ ಮಹಾವೀರರು, "ರಾಮ, ರಾಮ" ಎಂದು ಹಂಬಲಿಸುತ್ತಲೂ ತಮಗುಂಟಾಗಿರುವ ಭಯವನ್ನು ಹೇಳಿಕೊಳ್ಳುತ್ತಲೂ ಬಂದು ಶ್ರೀರಾಮನನ್ನು ಮರೆಹೊಕ್ಕು ಹೀಗೆ ಹೇಳಿದರು:- "ಎಲೈ ಮಹಾಬಾಹುವಾದ ರಾಮನೇ! ಈ ಮಹಾಭೀತಿಯಿಂದ ನಮ್ಮನ್ನು ರಕ್ಷಿಸು. ಆ ಶೂರನಾದ ಲಕ್ಷ್ಮಣನು ದೊಡ್ಡ ಸೈನ್ಯದಿಂದ ಕೂಡಿದವನಾಗಿ ಹೊರಟು ಶತ್ರುಘ್ನನು ಮೂರ್ಛಿತನಾಗಿ ಬಿದ್ದಿದ್ದ ಆ ಕಾಡಿಗೆ ಹೋಗಿ, ಅಲ್ಲಿ ಸುಸೈನ್ಯನಾಗಿ ಕುಶನ ಬಾಣಗಳಿಂದ ಗಾಯ ಹೊಂದಿರುವನು. ಕುಶನ ಬಾಣಗಳಿಂದ ಭೇದಿಸಿ ಹೋದ ರಕ್ತ ಧಾರೆಗಳನ್ನು ಸೋರಿಸುತ್ತಿರುವ ದೇಹವುಳ್ಳವರಾಗಿ ಹೂಬಿಟ್ಟಿರುವ ಮುಳ್ಳು ಮುತ್ತುಗದ ಮರಗಳಂತಿರುವ ಶೂರರು ಮೂರ್ಛಿತರಾಗಿರುವರು. ವಜ್ರಾಯುಧದ ಏಟುಗಳನ್ನೂ ಲಕ್ಷಿಸದ ವೀರರು ನಾನಾಶಸ್ತ್ರಪೀಡಿತರಾಗಿ ಮೈಮರೆತು ಬಿದ್ದಿರುವರು. ಏಕಾಕಿಯೂ ಬಾಲನೂ ಆದ ಲವನು ಮಾಡಿದ ಚೇಷ್ಟೆಗೆ ಸಹಿಸಲಾರದೆ ಆ ದೊಡ್ಡ ಸೇನೆಯು ವಿಮುಖವಾಗಿ ಓಡಿಹೋಗಿ ಬೆಟ್ಟದಲ್ಲಿ ಅಡಗಿಕೊಂಡಿರುವುದು. ಲಕ್ಷ್ಮಣನ ಸೇನಾಪತಿಯಾದ ಕಾಲಜಿತ್ತು ಕುಶನ ಬಾಣಗಳಿಂದ ನೊಂದು ಬಹುಜನಸಹಿತನಾಗಿ ನೆಲಕ್ಕೆ ಬಿದ್ದುಹೋದನು. ಲಕ್ಷ್ಮಣನು ಯುದ್ಧ ಮಾಡುತ್ತ ಕಾಡಿನಲ್ಲಿ ಆ ಬಾಲರನ್ನು ನೋಡಿ ಕರಗಿದ ಮನಸ್ಸುಳ್ಳವನಾದನು. ಆಗ ಕೃಪೆಯುಳ್ಳವನಾಗಿ ತಮ್ಮನಾದ ಲವನ ಮೇಲೆ ವೈರವನ್ನು ಬಿಟ್ಟು ಅಣ್ಣನಾದ ಕುಶನನ್ನು ನೋಡಿ, 'ಎಲೈ ಕುಶನೇ! ನಿನ್ನನ್ನು ಬಿಟ್ಟಿರುವೆನು; ನಿನ್ನ ತಮ್ಮನೊಡನೆ ನಿಮ್ಮ ಮನೆಗೆ ಹೋಗಿ ಸಾಮೋಪಾಯ ಕುಶಲನಾದ ಯಾವನೋ ಒಬ್ಬನು ನನ್ನನ್ನು ಬಿಟ್ಟುಬಿಟ್ಟನು ಎಂದು ನಿಮ್ಮ ತಾಯಿಗೆ ಹೇಳು' ಎಂದನು.

"ಆ ಮಾತನ್ನು ಕೇಳಿ ಕುಶನು ಲಕ್ಷ್ಮಣನನ್ನು ಕುರಿತು, 'ಎಲೈ ಲಕ್ಷ್ಮಣನೆ! ಬಹು ದುಃಖಪಡುತ್ತಿರುವ ನಿನ್ನೊಡನೆ ಯುದ್ಧ ಮಾಡದೆ ನಿನ್ನನ್ನು ನಾನು ಬಿಟ್ಟಿದ್ದೇನೆ. ನೀನು ರಾಮನ ಬಳಿಗೆ ಹೋಗು. ಯಾವನು ಸಾನುಜನಾದ ನಿನ್ನನ್ನು ಕ್ಲೇಶಪಡಿಸುತ್ತ ತಾನು ಬಾರದೆ ಹೋದನೋ, ಅವಮಾನವನ್ನು ಮಾಡಿಯಾನೆಂದು ಯಾವನಿಗೆ ನೀನು ಹೆದರುತ್ತಿರುವೆಯೋ, ಆ ರಾಮನಲ್ಲಿ ಸ್ವಲ್ಪವೂ ಕ್ಷಮೆಯಿಲ್ಲವೆಂದು ಕಾಣುತ್ತದೆ. ನಿನ್ನ ವಿಷಯದಲ್ಲಿ ನನಗೆ ಕರುಣೆಯುಂಟಾಗಿರುವುದು. ನೀನು ಅಕ್ಷತನಾಗಿಯೇ ಹೊರಟುಹೋಗು. ನಿನ್ನಲ್ಲಿ ಪೌರುಷವಿದ್ದರೆ ಬೇಗನೆ ನನ್ನನ್ನು ಬಾಣಗಳಿಂದ ಹೊಡೆ' ಎಂದನು. ಬಳಿಕ ಲಕ್ಷ್ಮಣನು ಏಳು ಬಾಣಗಳಿಂದ ಕುಶನ ಎದೆಗೆ ಹೊಡೆದನು. ಆ

ಯುದ್ಧದಲ್ಲಿ ಆ ತೀಕ್ಷ್ಣ ಬಾಣಗಳು ಕುಶನನ್ನು ಭೇದಿಸಿ ಕಾಡಿನಲ್ಲಿದ್ದ ಮರಗಳನ್ನೂ ಸೀಳಿಹಾಕಿ ಕೆಳಕ್ಕೆ ಬಿದ್ದುವು. ಬಳಿಕ ಕುಶನ ಬಾಣಸಮೂಹದಿಂದ ಲಕ್ಷ್ಮಣನ ದೇಹವು ವ್ಯಾಪ್ತವಾಗಿ, ಪೂರ್ವದಲ್ಲಿ ಮಾಡಿದ್ದ ಯಾವುದಾದರೂ ಒಂದು ಅಭ್ಯಾಸದ ಬಲದಿಂದ ಲಕ್ಷ್ಮಣನು ತನ್ನ ದೇಹವನ್ನು ಹೊಸದಾಗಿ ಮಾಡಿಕೊಳ್ಳಬಲ್ಲನೇನೋ ಎನ್ನುವಂತೆ, ಒಂದು ಕ್ಷಣಮಾತ್ರದಲ್ಲಿ ಚರ್ಮಹೀನವಾಯ್ತು. ಹೀಗೆ ಆ ಬಾಲಕನನ್ನು ರೇಗಿಸಿ ಅವನ ಬಾಣಗಳಿಂದ ಗಾಯಹೊಂದಿ, ಆ ಧೀರನಾದ ಲಕ್ಷ್ಮಣನು ಕುಂಡಲಸಹಿತನಾಗಿ ಬಿದ್ದುಹೋದನು; ನಿನ್ನ ಸೇನೆಯೂ ಮುರಿದು ಹತ್ತು ದಿಕ್ಕಿಗೂ ಓಡಿತು. ನಿನ್ನ ತಮ್ಮಂದಿರೂ ಮಹಾ ವೀರರೂ ಆದ ಆ ಲಕ್ಷ್ಮಣ ಶತ್ರುಘ್ನರು ಗಾಯಪಟ್ಟರು. ಅವರಿಬ್ಬರೂ ಇಲ್ಲದುದರಿಂದ ನಾವು ನಿನಗೆ ಹೇಳುವುದಕ್ಕೆ ಬಂದೆವು. ಎಲೈ ರಾಮನೇ! ದೀಕ್ಷೆಯನ್ನು ಬಿಡು. ಕುಶನ ಬಾಣವು ಅವನ ಧನುವಿನಿಂದ ಹೊರಟು ನಿನ್ನ ಮೇಲೆ ಬೀಳುವಷ್ಟರೊಳಗೆ ನೀನು ಕಾಡಿಗೆ ಹೋಗಿ ಯುದ್ಧ ಮಾಡು. ಆ ಕುಶನೆದುರಿಗೆ ಮತ್ತೊಬ್ಬರು ನಿಲ್ಲುವಂತಿಲ್ಲ" ಎಂದರು.

ಈ ರೀತಿಯಲ್ಲಿ ಹೇಳುತ್ತಿರುವ ಆ ದೂತರ ಮಾತನ್ನು ಕೇಳಿ ಭರತನ ಅಣ್ಣನಾದ ರಾಮನು ಮೂರ್ಛಿತನಾಗಿ ನೆಲಕ್ಕೆ ಬಿದ್ದನು. ಬಳಿಕ ಭರತನು ಅವನನ್ನು ಹಿಡಿದುಕೊಂಡು ನೀರನ್ನು ತಳಿದು ಕಣ್ಣನ್ನೊರಸಿ ಅಡಿಗಡಿಗೂ ಸಮಾಧಾನಗೊಳಿಸುತ್ತ, ರಾಮನು ಚೇತರಿಸಿಕೊಂಡ ಬಳಿಕ ಅವನನ್ನು ಕುರಿತು, "ಎಲೈ ರಾಘವನೇ! ಲಕ್ಷ್ಮಣನ ವಿಷಯದಲ್ಲಿ ಮನಸ್ಸಿಗೆ ವ್ಯಥೆಯನ್ನು ತಂದುಕೊಳ್ಳಬೇಡ. ಲಕ್ಷ್ಮಣನು ನಿನಗಾಗಿ ಹೋಗಿ ಶತ್ರುಘ್ನನೊಡನೆ ಯುದ್ಧದಲ್ಲಿ ಬಿದ್ದನು. ಅವನ ಸೀತಾದೇವಿಯನ್ನು ಕಾಡಿನಲ್ಲಿ ಬಿಟ್ಟು ಬಂದಂದಿನಿಂದಲೂ ಬಹಳ ದುಃಖಿತನಾಗಿ ಸ್ವದೇಹ ತ್ಯಾಗ ಮಾಡಲಪೇಕ್ಷಿಸುತ್ತಿದ್ದನು. 'ನಾನು ನಿನ್ನ ಆಜ್ಞೆಯನ್ನು ನಡೆಯಿಸಿದೆನು' ಎಂದು ಹೇಳಿಕೊಳ್ಳುವುದಕ್ಕೆ ಅವನು ಮೊದಲು ನಿನ್ನ ಬಳಿಗೆ ಬಂದಾಗಲೇ ಅವನು ಸೀತಾದುಃಖದಿಂದ ಮೃತಪ್ರಾಯನಾಗಿದ್ದನು. ಆದರೂ ನಿನಗೆ ಸೀತೆಯಲ್ಲಿಯೂ ಲಕ್ಷ್ಮಣನಲ್ಲಿಯೂ ಕರುಣೆ ಹುಟ್ಟಲಿಲ್ಲ. ಮರಣಕಾಲವನ್ನು ಇದಿರುನೋಡುತ್ತಿದ್ದ ಅವನು ಸೀತಾತ್ಯಾಗವನ್ನು ನೆನೆದು, ಯಜ್ಞಕಾರ್ಯದಲ್ಲಿ, ರಾಮನಿಮಿತ್ತದಿಂದ, ಯುದ್ಧವ್ಯಾಜದಿಂದ, ತಮ್ಮನೊಡನೆ ಪ್ರಾಣವನ್ನು ಬಿಟ್ಟನು. ನಿರಪರಾಧಿನಿಯಾದ ಸೀತೆಯನ್ನು ಕಾಡಿನಲ್ಲಿ ಬಿಟ್ಟು ಬಂದುದರಿಂದ ಉಂಟಾದ ಪಾಪವನ್ನು ಸದಾ ದೇಹದಲ್ಲಿ ಧರಿಸಿದ್ದನು. ಅದಕ್ಕಾಗಿ ಈಗ ಕುಶನ ಧನುವಿನಿಂದ ಹೊರಟ ಪ್ರಚಂಡ ಬಾಣಗಂಗೆಯು ಅವನ ದೇಹದ ಪಾಪವನ್ನು ತೊಳೆದುಬಿಟ್ಟುದರಿಂದ ಲಕ್ಷ್ಮಣನು ಶುದ್ಧನಾದನು. ಎಲೈ ರಾಘವನೇ! ಆ ಪರಿಶುದ್ಧನಾದ ನನಗೆ ನೀನು ಯಾವ ಕಾರ್ಯವನ್ನೂ ಹೇಳುವುದಿಲ್ಲ. ನೀನು ವನದಲ್ಲಿ ಸೀತಾತ್ಯಾಗ ಮಾಡಿದಾಗ ಎಲ್ಲಾ ವಿಚಾರವನ್ನೂ ಮಾಡಿದೆ. ನಾನು ಅಯೋಧ್ಯೆಯಲ್ಲಿ ಬದುಕಿದ್ದು ನನ್ನ ಶರೀರವನ್ನು ಪಾವನವನ್ನಾಗಿ ಮಾಡಿಕೊಳ್ಳುವುದು ಏತರಿಂದ ಸಾಧ್ಯವಿಲ್ಲವೋ ಆ ಪಾವನಕಾರ್ಯವನ್ನು ಮಾಡಿಕೊಳ್ಳಲು ಈಗ ಹೊರಡುತ್ತೇನೆ. ಸೀತಾ ಶತ್ರುಘ್ನ ಲಕ್ಷ್ಮಣರಿಲ್ಲದ ಈ ಅಯೋಧ್ಯೆಯಲ್ಲಿ ನಾನು ಹೇಗೆ ಇರಲಿ?" ಎಂದನು.

ಹೀಗೆ ಹೇಳುತ್ತಿರುವ ಭರತನನ್ನು ಕುರಿತು ರಾಮನು, "ಎಲೈ ಭರತನೇ! ನೀನು ಸೈನ್ಯಸಹಿತನಾಗಿ ಅರಣ್ಯಕ್ಕೆ ಹೋಗಿ ಆ ಬಾಲಕನು ಯಾರೆಂಬುದನ್ನು ತಿಳಿದು ಕುಶನನ್ನು ಜಯಿಸಿ, ಅವನನ್ನು ತಮ್ಮನೊಡನೆ ನನ್ನ ಬಳಿಗೆ ಕರೆದುಕೊಂಡು ಬಾ. ಮೂರ್ಛಿತರಾಗಿ ಬಿದ್ದಿರುವ ನನ್ನ ಬಾಂಧವರಿಬ್ಬರನ್ನೂ ಎಚ್ಚರಗೊಳಿಸು. ಈ ಹನುಮಂತನೂ ಜಾಂಬವಂತನೂ ವಾನರರೊಡನೆ ನಿನಗೆ ಸಹಾಯಕರಾಗಿ ನಿನ್ನ ಹಿಂದೆ ಹೊರಡಲಿ. ನೀನು ನನ್ನ ಮಾತನ್ನು ನಡೆಯಿಸು. ವನವಾಸಕ್ಕೆ ಹೊರಟ ನಾನು ತಂದೆಯ ಮಾತನ್ನು ನಡೆಯಿಸಿದೆನು. ನೀನು ಅಮೋಘವಾದ ತಂದೆಯ ಮಾತಿನಂತೆ ನಡೆಯಲಿಲ್ಲ: ನಂದಿ ಗ್ರಾಮದಲ್ಲಿ ಜಟಾವಲ್ಕಲಧಾರಿಯಾಗಿದ್ದು ಬಿಟ್ಟೆ. ಈಗ ಆ ಪಾಪಕ್ಕೆ ಪ್ರತೀಕಾರವನ್ನು ಮಾಡು. ಎಲೈ ಮಹಾಮತಿಯೇ! ನನ್ನ ಮಾತನ್ನು ನಡೆಯಿಸಿ ಪರಿಶುದ್ಧನಾಗು" ಎಂದನು. ಅದನ್ನು ಕೇಳಿ ಭರತನು, "ಎಲೈ ರಘೂದ್ವಹನೇ! ನಿನ್ನ ಸೈನ್ಯವನ್ನು ನಾಶಮಾಡಿದ ಶೂರರಾದ ಆ ಇಬ್ಬರು ಬಾಲಕರು ಯಾರೆಂಬುದನ್ನು ನೀನರಿಯೆ; ಹನುಮಂತನು ತಿಳಿದಿರುವನೋ ಇಲ್ಲವೋ ತಿಳಿಯದು; ನೀತಿಜ್ಞನಾಗಿಯೂ ನಿನ್ನ ಮಂತ್ರಿಯಾಗಿಯೂ ಇರುವ ಆ ಅಂಗದನೂ ಕಾಣನೆಂದು ತೋರುವುದು" ಎಂದನು. ಅದಕ್ಕೆ ಅಂಗದನು, "ರಾಘವನು ಯಾವ ಕಾರಣದಿಂದ ಲೋಕಾಪವಾದಕ್ಕಾಗಿ ಸೀತಾ ಪರಿತ್ಯಾಗ ಮಾಡಿದನೋ ಅಂತಹ ರಾಮನ ದುರಾಲೋಚನಾ ರೂಪವೇ ಆ ಬಾಲಕರೆಂದು ನಾನು ತಿಳಿಯುವೆನು" ಎಂದನು.

ಹೀಗೆ ಭರತನು ರಾಮನಿಂದ ಆಜ್ಞಪ್ತನಾಗಿ ಹನುಮಂತ ಮೊದಲಾದವರೊಡನೆ ಸೇರಿ ಬೇಗನೆ ರಥವನ್ನೇರಿ ಕೋಪಾವಿಷ್ಟನಾಗಿ ಹೊರಟನು. ನರವಾನರರಿಂದ ಕೂಡಿದ ದೊಡ್ಡ ಸೈನ್ಯವು ರಮ್ಯವಾದ ರಾಜಧಾನಿಯಾದ ಅಯೋಧ್ಯೆಯಿಂದ ಹೊರಟು ಭೂಮ್ಯಾಕಾಶಗಳಲ್ಲಿ ಹೋಗುತ್ತಿದ್ದಿತು. ಭರತನು ಅರಣ್ಯವನ್ನು ಹೊಕ್ಕು ಹನುಮಂತನನ್ನು ಕುರಿತು, "ಎಲೈ ಹನುಮಂತನೇ! ಯುದ್ಧದಲ್ಲಿ ಕುಶನ ಬಾಣಗಳಿಂದ ಕತ್ತರಿಸಿದ ತಲೆಗಳೂ ತೋಳುಗಳೂ ಉಳ್ಳವರಾಗಿ ರಾಮನ ಶೂರರು ಬಹುಮಂದಿ ಬಿದ್ದು ಹೋಗಿರುವರು. ಆನೆಗಳೂ ರಥಗಳೂ ಕುದುರೆಗಳೂ ವೀರರೂ ಒಂಟೆಗಳೂ ತಲೆ ಕತ್ತರಿಸಿ ಬಿದ್ದಿರುವುವು ನೋಡು! ಮುಂದೆ, ಸ್ವಸ್ಥತೆಯಿಲ್ಲದೆ ಎಲ್ಲ ಕಡೆಗೂ ಓಡುತ್ತಿರುವವರನ್ನು ನೋಡು. ಶೂರರಾದ ಲಕ್ಷ್ಮಣ ಶತ್ರುಘ್ನರು ಎಲ್ಲಿ ಬಿದ್ದಿರುವರೋ! ಮಹಾ ರಕ್ತಪ್ರವಾಹದಲ್ಲಿ ಯೋಧರೆಲ್ಲರೂ ಇಲ್ಲಿ ಕೊಚ್ಚಿ ಹೋಗುತ್ತಿರುವರು. ನಮ್ಮ ಬಂಧುಗಳಾದ ಲಕ್ಷ್ಮಣ ಶತ್ರುಘ್ನರು ಬಲಾತ್ಕಾರವಾಗಿ ಗಂಗೆಗೆ ಹೊಡೆದುಕೊಂಡು ಹೋಗಿರುವರೋ ಏನೋ! ಇಲ್ಲಿ ಅಲ್ಲಲ್ಲೇ ಮನುಷ್ಯರ ಕೈಗಳೂ ಕಾಲುಗಳೂ ಹಲ್ಲುಗಳೂ ವಾಹನಗಳೂ ತಲೆಗೂದಲುಗಳೂ ಪುಷ್ಪಮಾಲಿಕೆಗಳೂ ಕೊಚ್ಚಿ ಹೋಗುತ್ತಿರುವುವು. ನೀನು ಪೂರ್ವದಲ್ಲಿ ಸಮುದ್ರವನ್ನು ದಾಟಿ ಲಂಕೆಗೆ ಹೋದ ಹಾಗೆ ಈಗ ಈ ನದಿಯನ್ನು ದಾಟಿ ಆಚೆಯ ದಡಕ್ಕೆ ಹೋಗಿ ಅಲ್ಲಿ ನಮ್ಮ ಬಂಧುಗಳು ಎಲ್ಲಿ ಬಿದ್ದಿರುವರೋ ನೋಡು. ಹೇಗಾದರೂ ಮಾಡಿ ಆ ಬಾಲಕರಾದ ಕುಶ ಲವರನ್ನು ನೋಡಬೇಕು" ಎಂದನು.

ಅದಕ್ಕೆ ಹನುಮಂತನು, "ಎಲೈ ಭರತನೇ! ಆಗ ಸೀತೆಯು ನನಗೆ ಸಮ್ಮುಖಿಳಾಗಿದ್ದುದರಿಂದ ಸಾಗರವನ್ನು ದಾಟಿದೆನು. ಈಗ ಆಕೆಯು ವಿಮುಖಿಳಾಗಿರುವಂತೆ ತೋರುವುದು. ಈ ರಕ್ತಪ್ರವಾಹದ ನದಿಯನ್ನು ದಾಟುವುದು ಅಸಾಧ್ಯವೆಂದು ಕಾಣುತ್ತದೆ. ಆದರೂ ನಿನ್ನ ಮಾತಿನಂತೆ ಲಕ್ಷ್ಮಣ ಶತ್ರುಘ್ನರನ್ನು ನೋಡಲು ಹೊರಡುತ್ತೇನೆ" ಎಂದು ಹೇಳಿ ಆ ನದಿಯನ್ನು ದಾಟಿ ಅಲ್ಲಿ ಬಾಣಗಳಿಂದ ಭೇದಿಸಿದ ಸರ್ವಾಂಗವುಳ್ಳವರಾಗಿ ನೆಲದಲ್ಲಿ ಬಿದ್ದಿದ್ದ ಲಕ್ಷ್ಮಣ ಶತ್ರುಘ್ನರನ್ನು ಕಂಡನು. "ಸೀತಾದ್ರೋಹಿಗಳಾದ ನಮ್ಮ ಮೇಲೆ ಕೋಪಿಸದೆ ನಮಗೆ ಸ್ಥಳವನ್ನು ಕೊಡು" ಎಂದು ಸೀತಾಪರಿತ್ಯಾಗದಿಂದ ದುಃಖಿತಳಾಗಿದ್ದ ಭೂದೇವಿಯನ್ನು ಪ್ರಾರ್ಥಿಸುತ್ತಿರುವರೋ ಎಂಬಂತೆ ನೆಲದಲ್ಲಿ ಬಹುಕಾಲದಿಂದ ಮೂರ್ಛೆಗೊಂಡು ಬಿದ್ದಿದ್ದ ಅವರಿಬ್ಬರನ್ನೂ ಕಂಡು ಅನಂತರ ತೋಳುಗಳಿಂದ ತಬ್ಬಿ ಹಿಡಿದುಕೊಂಡು ಹನುಮಂತನು ಭರತನ ಬಳಿಗೆ ಪುನಃ ಬಂದನು. ಭರತನು ಕುಶನ ಬಾಣಗಳಿಂದ ಭೇದಿಸಿದ ಸರ್ವಾಂಗವುಳ್ಳ ಅವರನ್ನು ನೋಡಿ ಆಶ್ಚರ್ಯಯುಕ್ತನಾಗಿ ರಥದಲ್ಲಿಟ್ಟು ಅವರ ರಕ್ಷಣೆಗಾಗಿ ಅಂಗದನನ್ನು ನೇಮಿಸಿ, ಹನುಮಂತನನ್ನು ಕುರಿತು, "ಎಲೈ ಹನುಮಂತನೇ! ದೇವತೆಗಳು ಬಾಲಕವೇಷದಿಂದ ಮಹಾರಣದಲ್ಲಿ ಲಕ್ಷ್ಮಣ ಶತ್ರುಘ್ನರನ್ನು ಕೆಡಹಿ ಎಲ್ಲಿಯಾದರೂ ಹೋದರೋ ಏನೋ ಎಂಬಂತಿರುವ ರಾಮ ಸೈನ್ಯ ವಿನಾಶಕರಾದ ಆ ಬಾಲಕರೆಲ್ಲಿ ನೋಡು!" ಎನಲು, ಹನುಮಂತನು "ಈ ಲಕ್ಷ್ಮಣನು, ಕುಶನ ಬಾಣಗಳಿಂದ ಹೊಂದಿದ ಮೂರ್ಛೆಯನ್ನು ಇನ್ನೂ ತಿಳಿಯದಿರುವಂತೆ ಇಂದ್ರಜಿತ್ತುವಿನ ಬಾಣಗಳಿಂದಲೂ ಹೀಗೆ ಮೂರ್ಛಿತನಾಗಿರಲಿಲ್ಲ. ಮೂರ್ಛಾಕ್ರಾಂತ ನಾಗಿರುವ ಈ ಲಕ್ಷ್ಮಣನನ್ನು ನೋಡಿದರೆ ಇವನ ಮೂರ್ಛೆಯು ನನ್ನನ್ನೂ ಆವರಿಸುವಂತೆ ಕಾಣುತ್ತದೆ" ಎಂದನು. ಆ ಬಾಲಕರು ನಾಶಗೊಳಿಸಿದ ಸೈನ್ಯವನ್ನು ಭರತನ ಸೈನಿಕರೆಲ್ಲರೂ ನೋಡುತ್ತಿದ್ದರು.

# ರಾಮಾಶ್ವಮೇಧ ಫಲಸ್ತುತಿ

ಅಷ್ಟರಲ್ಲಿ ಕುಶನು ಧನುಷ್ಟಂಕಾರ ಮಾಡುತ್ತ ಬಂದನು. ಶೂರನಾದ ಲವನು ಕತ್ತಿ ಗುರಾಣಿಗಳನ್ನು ಹಿಡಿದು ಯುದ್ಧಕ್ಕೆ ಬಂದನು. ಸೂರ್ಯನು ಸಮುದ್ರ ಮುದ್ರಿತವಾದ ಭೂಮಿಯನ್ನೆಲ್ಲ ತನ್ನ ಕಿರಣಗಳಿಂದ ಬೆಳಗಿ ಅಸ್ತಂಗತನಾದನು. ಅಂಧಕಾರವು ಮುಚ್ಚಿಕೊಳ್ಳಲು, ಪಕ್ಷ ಪ್ರತಿಪಕ್ಷಗಳ ವೀರರನ್ನೊಬ್ಬರೊಬ್ಬರು ತಿಳಿಯಲಾರದೆ ರಣವೀರರೆಲ್ಲರೂ ಒಬ್ಬರನ್ನೊಬ್ಬರು ಹೆಸರು ಹಿಡಿದು ಕೂಗುತ್ತಿದ್ದರು. ಮದಗಜಗಳು ನುಗ್ಗಿ ಓಡುತ್ತ ತಮ್ಮ ಕಾಲ ತುಳಿತದಿಂದ ಅನೇಕ ರಥಗಳನ್ನು ಪುಡಿಪುಡಿ ಮಾಡಿದುವು. ರಥಗಳ ವೇಗದಿಂದ ರಾವುತರು ಕುದುರೆಗಳ ಬೆನ್ನಿನಿಂದ ಬಿದ್ದು ಹೋಗುತ್ತಿದ್ದರು. ಕುದುರೆಗಳ ವೇಗದಿಂದ ಅಶ್ವಾರೋಹಕರೂ ಪದಾತಿಗಳೂ ನೆಲಕ್ಕೆ ಬೀಳುತ್ತಿದ್ದರು. ಆಗ ಲವನು ಕತ್ತಿಯನ್ನು ಝಳಪಿಸುತ್ತ ಮಹಾಸೈನ್ಯವನ್ನು ಹೊಕ್ಕು ತಲೆಗೆ ಗುರಾಣಿಯನ್ನು ಮರೆಮಾಡಿಕೊಂಡು ಖಡ್ಗದಿಂದ ಕುದುರೆಗಳ ಕಾಲನ್ನು ಬೇಗನೆ ಕಡಿದನು; ಹಾಗೆಯೇ ಆನೆಗಳ ಉದ್ದವಾದ ಸೊಂಡಿಲುಗಳನ್ನು ಕತ್ತರಿಸಿದನು. ತನ್ನ ಉದ್ದವಾದ ತೋಳುಗಳ ಆಧಾರದಿಂದ ಆನೆಗಳ ಮೇಲೆ ಹತ್ತಿ, ಕೊಡಲಿಯವನು ಕಟ್ಟಿಗೆಯನ್ನು ಸೀಳುಂವಂತೆ, ಅವುಗಳ ಕುಂಭಸ್ಥಳಗಳನ್ನು ಸೀಳಿ ಮುಕ್ತಾಫಲಗಳನ್ನು ಹಿಡಿಹಿಡಿಯಾಗಿ ತೆಗೆದುಕೊಂಡು ನೆಲಕ್ಕೆರಚಿದನು. ಆನೆಗಳ ದಂತಗಳ ಮೇಲೆ ಹೊಡೆದ ಕತ್ತಿಗಳಿಂದ ಹುಟ್ಟಿದ ಭಯಂಕರವಾದ ಬೆಂಕಿಯ ಕಿಡಿಗಳು ಸೈನಿಕರನ್ನು ಸುಡುತ್ತಿದ್ದುವು.

ಅಷ್ಟರಲ್ಲಿ, ಕ್ರುದ್ಧನಾದ ಕುಶನು ಬಾಣಗಳನ್ನು ಬಿಟ್ಟು, ಶೂರರ ತಲೆಗಳನ್ನೂ ತೋಳಬಂದಿಗಳಿಂದಲಂಕೃತವಾಗಿದ್ದ ಬಾಹುಗಳನ್ನೂ ಕತ್ತರಿಸಿ, ಆನೆಗಳ ತಲೆಗಳನ್ನು ಪ್ರತಾಪದಿಂದ ಆಕಾಶಕ್ಕೆ ಹಾರಿಸಿದನು. ಅವು ಆಕಾಶದಲ್ಲಿ ಒಟ್ಟಿಗೆ ಸೇರಿದುವು. ಅವಕ್ಕಿಂತಲೂ ಬೇರೆ ನಕ್ಷತ್ರವು ಹಿಂದೆಯೂ ಇರಲಿಲ್ಲ, ಮುಂದೆಯೂ ಹುಟ್ಟಲಾರದು. ಆದಕಾರಣ, ಹೀಗೆ ಆನೆಗಳ ಸೊಂಡಿಲುಗಳು ಆಕಾಶದಲ್ಲಿ ನಕ್ಷತ್ರತ್ವವನ್ನು ಪಡೆದು ಹಸ್ತ ನಕ್ಷತ್ರಗಳಾದುವು. ಆ ಹಸ್ತ ನಕ್ಷತ್ರಗಳು ಈಗಲೂ ದಾನೋದಕವನ್ನು ಬಹಳವಾಗಿ ವರ್ಷಿಸುತ್ತಿರುವುವು. ಅದರಿಂದ ಹಸ್ತದ ಮಳೆಯ ನೀರ ಹನಿಗಳು ಮುತ್ತಾಗುವುದಕ್ಕೆ ಕಾರಣವಾಗಿದೆ. ಹೀಗೆ ವೀರನಾದ ಕುಶನು ಬಹಳವಾಗಿ ಆನೆಗಳ ತಲೆಗಳನ್ನು ಕತ್ತರಿಸಿದುದು ಅದ್ಭುತವಾಗಿದ್ದಿತು. ಬಳಿಕ ಧನುಷ್ಟಂಕಾರದಿಂದ ದಿಗ್ಗಜಗಳನ್ನು ಕಿವುಡಾಗಿ ಮಾಡುತ್ತ ಭರತನು, ವನವನ್ನು ದಹಿಸುವ ಪವನಾಗ್ನಿಗಳಂತೆ ತಮ್ಮ ಸೈನ್ಯವನ್ನು ನಾಶಮಾಡಿದ ಅವರಿಬ್ಬರನ್ನೂ ನೋಡಿ, "ಇವರೇನು ಷಣ್ಮುಖ ಗಣೇಶರೊ"! ಎಂದುಕೊಂಡು ಮೇಘವು ಜಲಧಾರೆಗಳನ್ನು ಸುರಿಸುವಂತೆ ಹರಿತವಾದ ಬಾಣಗಳನ್ನು ಬಿಟ್ಟನು.

ಹನುಮಂತನು ಮೇಘಶ್ಯಾಮರಾಗಿಯೂ ಕಾಕಪಕ್ಷಧರರಾಗಿಯೂ ಧನುರ್ಧರರಾಗಿಯೂ ಜೊತೆಯಾಗಿಯೂ ಇರುವ ಆ ಬಾಲಕರನ್ನು ನೋಡಿ,

"ರಾಮನ ಸೈನ್ಯವನ್ನು ನೋಡುತ್ತಿರುವ ಈ ಬಾಲರು ರಾಮನ ಆಕಾರವಾಗಿಯೇ ಇರುವರು. ಭರತನೇ ಮೊದಲಾದ ಶೂರರೆಲ್ಲರೂ ಸಿದ್ಧರಾಗಿ ನಿಲ್ಲಿ" ಎಂದು ಹೇಳುತ್ತಿರಲು, ಕುಶನು ಲವನನ್ನು ಕುರಿತು, "ಎಲೈ ಲವನೇ! ಕುದುರೆಯನ್ನು ತೆಗೆದುಕೊಂಡು ಹೋಗಬೇಕೆಂಬ ಅಪೇಕ್ಷೆಯಿಂದ ಬಂದಿರುವ ಈ ಸೈನ್ಯವನ್ನು ನೋಡು. ಈ ಸೈನ್ಯದ ಮೇಲೆ ನಾನು ಹೊರಡುವೆನು. ನೀನು ಕುದುರೆಯನ್ನು ರಕ್ಷಿಸಿಕೊಂಡಿರು" ಎಂದನು. ಬಳಿಕ ಕುಶನು ಭರತನನ್ನು ನೋಡಿ, "ಶತ್ರುಘ್ನ ಲಕ್ಷ್ಮಣರಿಬ್ಬರೂ ಮೂರ್ಛೆ ಬಿದ್ದಿರುವರು. ಬಲವೆಲ್ಲವೂ ನಾಶವಾಯ್ತು. ನೀನು ನನ್ನ ಹೆಸರನ್ನು ಅರಿಯೆಯೊ? ಯುದ್ಧಕ್ಕೆ ಬಂದಿರುವ ನಾನು ಶತ್ರುವಾದ ಕುಶನೆಂಬುದನ್ನು ಕಾಣೆಯೊ?" ಎಂದು ಕೇಳಿದನು.

ಅದಕ್ಕೆ ಭರತನು, "ಎಲೈ ಕುಶನೇ! ನಾನು ಯುದ್ಧದಲ್ಲಿ ನಿನ್ನನ್ನು ಸೋಲಿಸಿ ಹುಡುಗನಾದ ನಿನ್ನನ್ನು ನಿನ್ನ ತಮ್ಮನೊಡನೆ ನಮ್ಮ ಪಟ್ಟಣಕ್ಕೆ ಕರೆದುಕೊಂಡು ಹೋಗುವೆನು. ಬೇಗನೆ ಕುದುರೆಯನ್ನು ಬಿಟ್ಟು ಹೊರಟು ಹೋಗು. ತಾಪಸಿಯಾದ ನಿಮ್ಮ ತಾಯಿಯನ್ನು ನೋಡಿದರೆ ನನಗೆ ಕರುಣೆಯುಂಟಾಗುತ್ತದೆ. ನನ್ನನ್ನೂ ನನ್ನ ತಮ್ಮನನ್ನೂ ಭರತನು ಬಿಡುಗಡೆ ಮಾಡಿದನೆಂದು ನಿಮ್ಮ ತಾಯಿಗೆ ಹೇಳು. ನೀನು ನಮ್ಮ ಸೈನ್ಯವನ್ನು ನಾಶಪಡಿಸಿದುದನ್ನು ಕ್ಷಮಿಸಿದ್ದೇನೆ" ಎಂದು ಹೇಳಿದನು. ಕುಶನು ಆ ಮಾತನ್ನು ಕೇಳಿ ಭರತನನ್ನು ಏಳು ಬಾಣಗಳಿಂದಲೂ, ವಾನರರನ್ನು ಹನ್ನೆರಡು ಬಾಣಗಳಿಂದಲೂ, ಹನುಮಂತನನ್ನು ನೂರು ಬಾಣಗಳಿಂದಲೂ ಹೊಡೆದನು. ಹಾಗೆಯೇ ನಸುನಗುತ್ತ ಅಂಗದನನ್ನು ಸಾವಿರ ಬಾಣಗಳಿಂದಲೂ, ನೀಲನನ್ನು ಐನೂರು ಬಾಣಗಳಿಂದಲೂ, ನಳನನ್ನು ಎಪ್ಪತ್ತು ಬಾಣಗಳಿಂದಲೂ, ಜಾಂಬವಂತನನ್ನು ಮೂರು ಸಾವಿರ ಬಾಣಗಳಿಂದಲೂ ಆ ಯುದ್ಧದಲ್ಲಿ ಕೋಪದಿಂದ ಹೊಡೆದನು. ಯಾರ ಯಾರ ಎದೆಯಲ್ಲಿ ಕುಶನು ಹೊಡೆದ ಬಾಣಗಳು ಬಲವಾಗಿ ನಟ್ಟುವೋ ಅವರೆಲ್ಲರೂ ಮೂರ್ಛಿತರಾಗಿ ಬಿದ್ದುಹೋದರು. ಬಲಿಷ್ಠನಾದ ಲವನು ಆರು ಬಾಣಗಳನ್ನು ಬಿಟ್ಟು ಭರತನ ಬಿಲ್ಲನ್ನು ಕತ್ತರಿಸಿ ಅವನ ರಥವನ್ನು ಚೂರು ಚೂರು ಮಾಡಿದನು. ಕುಶನ ಬಿಲ್ಲಿನಿಂದ ಹೊರಟ ಬಾಣಗಳಿಂದ ಭರತನು ಮೈಮರೆತನು. ಭರತನು ಮೂರ್ಛಾಗತನಾದುದನ್ನು ಹನುಮಂತನು ನೋಡಿ ಯೋಜನ ವಿಸ್ತಾರವಾದ ಪರ್ವತವನ್ನು ಕಿತ್ತು ಕುಶ ಲವರ ತಲೆಯ ಮೇಲೆ ಎಸೆದನು. ವಿಶಾಲಾಕ್ಷರಾದ ಅವರಿಬ್ಬರೂ ಬಾಣಗಳನ್ನು ಬಿಟ್ಟು ಆ ಪರ್ವತವನ್ನು ಆಕಾಶದಲ್ಲಿಯೇ, ಈಶ್ವರನ ದೇಹದ ಭಸ್ಮದ ರೇಣುಗಳಂತೆ ಸುಖಕರವಾಗಿರುವ, ಹಾಗೆ ಧೂಳಿ ಧೂಳಿಯಾಗಿ ಕತ್ತರಿಸಿ ಪುಡಿ ಮಾಡಿದರು. ಕುಶನು ಪೌರುಷದಿಂದ ಕನಕ ಚಿತ್ರಗಳುಳ್ಳ ಐದು ಬಾಣಗಳನ್ನು ಹನುಮಂತನ ಮೇಲೆ ಬಿಟ್ಟು ಅವನ ದೇಹವು ಭಿನ್ನವಾಗಿ ಅವನು ಮೂರ್ಛಿತನಾಗುವಂತೆ ಮಾಡಿದನು. ಬಳಿಕ ಸೈನ್ಯವೆಲ್ಲವೂ ಬಿದ್ದುಹೋಗಲು, ಉಳಿದವರು ರಾಮನ ಬಳಿಗೆ ಓಡಿ ಹೋಗಿ ಎಲ್ಲವನ್ನೂ ತಿಳಿಸಿದರು.

ಮಹಾಬಾಹುವಾದ ಶ್ರೀರಾಮನು ಆ ಸಂಗತಿಯನ್ನು ಕೇಳಿ ತಮ್ಮಂದಿರ ದುರವಸ್ಥೆಗಾಗಿ ದುಃಖಿಸುತ್ತ, ರಥಾರೂಢನಾಗಿ ಸುಗ್ರೀವ ವಿಭೀಷಣರೊಡನೆ ಹೊರಟು ಕಾಡಿಗೆ ಬಂದು, ಆಶ್ಚರ್ಯದಿಂದ ತೆರೆದ ಕಣ್ಣುಳ್ಳವನಾಗಿ, ಬಾಣದ ಪೆಟ್ಟಿನಿಂದ ನೊಂದು 'ರಾಮ, ರಾಮ' ಎಂದು ಹಂಬಲಿಸುತ್ತ ಬಿದ್ದಿರುವ ಆ ಸೈನ್ಯವನ್ನು ನೋಡಿದನು. ಧನುರ್ಧರಾಗ್ರೇಸರರಾಗಿಯೂ, ತನ್ನಂತೆ ಆಕೃತಿಯುಳ್ಳವರಾಗಿಯೂ ಇರುವ ಆ ಬಾಲಕರನ್ನು ಕಂಡು ರಾಮನು, "ಎಲೈ ಬಾಲರೆ! ನೀವು ನಮ್ಮ ಸೈನ್ಯವನ್ನೆಲ್ಲ ಧ್ವಂಸ ಮಾಡಿದಿರಷ್ಟೆ! ನೀವು ಯಾರಲ್ಲಿ ಧನುರ್ವಿದ್ಯಾಭ್ಯಾಸ ಮಾಡಿದಿರಿ? ನಿಮಗೆ ವಿಧಿವತ್ತಾಗಿ ಉಪನಯನ ಮಾಡಿದವರಾರು? ವೇದಾಧ್ಯಯನವನ್ನೂ ಕಲಾಭ್ಯಾಸವನ್ನೂ ಮಾಡಿರುವಿರಾ? ಧರ್ಮ ಶ್ರವಣ ತತ್ಪರರಾಗಿರುವಿರಾ? ಪರಸ್ತ್ರೀಯರೆಡೆಗೆ ನಿಮ್ಮ ದೃಷ್ಟಿಯು ಸೆಳೆಯದಂತಿರುವುದೆ? ಬ್ರಾಹ್ಮಣರ ವಿಷಯದಲ್ಲಿ ಪ್ರತಿಜ್ಞಾಪರಿಪಾಲನೆಯನ್ನು ಮಾಡುತ್ತಿರುವಿರಾ? ನಿಮ್ಮ ತಂದೆ ತಾಯಿಗಳಾರು? ನಿಮ್ಮ ವಾಸಸ್ಥಾನವಾವುದು? ತಿಳಿಸಿರಿ" ಎಂದು ಕೇಳಿದನು. ಆ ಮಾತನ್ನು ಕೇಳಿ ಕುಶನು, "ಎಲೈ ರಾಜನೆ! ನಮ್ಮ ವಂಶಚರಿತ್ರೆಯಿಂದ ನಿನಗೆ ಪ್ರಯೋಜನವೇನು? ನಿಮ್ಮಂತಹವರು ಕ್ಷಾತ್ರಪೌರುಷವನ್ನುಳಿದು ಮಾತಾಡಬಹುದೆ? ಬೇಗನೆ ಯುದ್ಧ ಮಾಡು; ವಿಳಂಬ ಮಾಡುವುದೇಕೆ? ಕುದುರೆಯು ನಮ್ಮದಲ್ಲವೆಂದು ಹೇಳು! ಇಲ್ಲದಿದ್ದರೆ ಯುದ್ಧ ಮಾಡು" ಎಂದನು. ಅದನ್ನು ಕೇಳಿ ಶ್ರೀರಾಮನು, "ನಿಮ್ಮ ಕುಲವನ್ನು ತಿಳಿಸಿದಲ್ಲದೆ ನಾನು ಯುದ್ಧ ಮಾಡೆನು" ಎಂದನು.

ಆಗ ಕುಶನು ರಾಮನನ್ನು ಕುರಿತು, "ಕ್ಷಮಾಶೀಲರಾದ ನಮ್ಮಿಬ್ಬರನ್ನೂ ಸೀತಾದೇವಿಯು ಕಾಡಿನಲ್ಲಿ ಪ್ರಸವಿಸಿದಳು. ನಮಗೆ ಜಾತಕರ್ಮಾದಿಗಳೆಲ್ಲವನ್ನೂ ವಾಲ್ಮೀಕಿ ಮುನಿಯು ನೆರವೇರಿಸಿ ಉಪನಯನವನ್ನೂ ಮಾಡಿ ಚೆನ್ನಾಗಿ ವೇದಾಭ್ಯಾಸ ಮಾಡಿಸಿದನು. ಅಲ್ಲದೆ, ಸಜ್ಜನರ ಮನಸ್ಸಿಗೆ ಸೌಖ್ಯಪ್ರದವಾದ ರಾಮಕಥೆಯನ್ನೂ ನಮಗೆ ಕಲಿಸಿದನು. ಆಯಾ ಅಭ್ಯಾಸಬಲದಿಂದ ನಿರ್ಮಲದೃಷ್ಟಿಯೂ ಬುದ್ಧಿ ಸ್ವಾಸ್ಥ್ಯ ಮನಃಸ್ವಾಸ್ಥ್ಯಗಳೂ ಉಂಟಾಗಿ ಪರಾಕ್ರಮವೂ ವೃದ್ಧಿಗೊಳ್ಳುತ್ತದೆ. ಆದ ಕಾರಣ, ನಿನ್ನ ಸೈನ್ಯವನ್ನೆಲ್ಲ ನಿನ್ನೆದುರಿಗೆ ನಾಶಮಾಡಿದೆವು. ನಿನಗೆ ದಾರಾಪುತ್ರ ಧನಾದಿಗಳಲ್ಲಿ ಮಮತೆಯಿಲ್ಲ. ಅದರಿಂದ, ನಾಶವಾದ ಸೈನ್ಯದ ವಿಷಯದಲ್ಲಿ ನಿನಗೇನೂ ಲಕ್ಷ್ಯವಿಲ್ಲವೆಂದು ತೋರುವುದು. ನಿನಗೆ ಶಕ್ತಿಯೇ ಇಲ್ಲವೊ? ಇದ್ದ ಶಕ್ತಿಯನ್ನು ನೀನು ಕಾಡಿನಲ್ಲಿದ್ದಾಗಲೇ ಬಿಟ್ಟಿರಬಹುದಲ್ಲವೆ? ಶಕ್ತಿ ಹೀನನಾದವನು ಯಾವನು ತಾನೆ ತೀಕ್ಷ್ಣಬಾಣಗಳಿಂದ ಯುದ್ಧ ಮಾಡಬಹುದು?" ಎಂದನು.

ಆಗ ರಾಮನು, ಸೀತಾಪುತ್ರರೆಂದು ಹೇಳಿದುದರಿಂದ ಆ ಇಬ್ಬರು ಬಾಲರನ್ನೂ ತನ್ನ ಮಕ್ಕಳೆಂದು ತಿಳಿದು, "ನಮಗೆ ಇನ್ನು ಯುದ್ಧವು ಅಯುಕ್ತವಾದುದು" ಎಂದು ಹೇಳಿ ಧನುವನ್ನ ಕೈಬಿಟ್ಟು, ಹಾಗೆಯೇ ರಥದಲ್ಲಿ ಬಿದ್ದು ಮೂರ್ಛಿತನಾದನು. ಬಳಿಕ, ಸತ್ಯಪರಾಕ್ರಮನೂ ಧರ್ಮಾತ್ಮನೂ ಧೀರನೂ ಪರಪುರಂಜಯನೂ ಆದ ರಾಮನು

ಮೂರ್ಛೆಯಿಂದೆಚ್ಚೆತ್ತು ಸುಗ್ರೀವನನ್ನು ಕುರಿತು, "ಎಲೈ ಕಪಿಶ್ರೇಷ್ಠನೇ! ಈ ಶೂರರಿಬ್ಬರೂ ಯಾರ ಮಕ್ಕಳೆಂಬುದನ್ನು ವಿಚಾರಿಸಿ ತಿಳಿ" ಎಂದನು. ಅದಕ್ಕೆ ಸುಗ್ರೀವನು, "ಎಲೈ ರಾಮನೆ! ಇವರಿಬ್ಬರೂ ಪುರಾಣಪುರುಷನಾದ ಆ ವಿಷ್ಣುವಿನ ಮಕ್ಕಳೆಂದು ತೋರುವುದು. ಇಲ್ಲಿ ವನಮಧ್ಯದಲ್ಲಿ ನೋಡಿದರೆ ಇವರು ನಿನ್ನ ಪ್ರತಿಬಿಂಬದಂತೆ ಇರುವರು. ಒಡೆಯನೇ ಇಲ್ಲದೆ ಯುದ್ಧದಲ್ಲಿ ಜಯಶಾಲಿಯಾಗುವ ಮತ್ತೊಬ್ಬನನ್ನು ಕಾಣಲಿಲ್ಲ. ಇವರ ಮೇಲೆ ಯುದ್ಧ ಮಾಡಲು ನಿನ್ನೆದುರಿಗೆ ಈಗ ತೆರಳುವೆನು" ಎಂದು ಹೇಳಿ ಒಂದು ಮರವನ್ನು ಕಿತ್ತು ಅವರ ಮುಂದೆ ಹಾಕಿದನು. ಅವರು ಆ ಮರವನ್ನು ಹರಿತವಾದ ಬಾಣಗಳಿಂದ ಚೂರು ಚೂರು ಮಾಡಿ ಆ ಸುಗ್ರೀವನನ್ನು ಮೂರ್ಛೆಗೊಳಿಸಿದರು. ಅಷ್ಟರಲ್ಲಿ ನೀಲನು ಯುದ್ಧಕ್ಕೆ ನಿಂತನು. ಕುಶನು ಕೋಪಾವಿಷ್ಟನಾಗಿ ನೀಲನನ್ನು ಬಾಣದಿಂದ ಹೊಡೆದನು. ಆ ನೀಲನ ರಕ್ತದಿಂದ ಬಹುಮಂದಿ ನೀಲರು ಹುಟ್ಟುತ್ತ ಬರಲು, ಮಹಾಬಲಶಾಲಿಗಳಾದ ಅನೇಕ ನೀಲರಿಂದ ಯುದ್ಧಭೂಮಿಯು ತುಂಬಿ ಹೋಗುವಂತಾಯ್ತು. ಆಗ ಕುಶನು ಮನಸ್ಸಿನಲ್ಲಿ ಚೆನ್ನಾಗಿ ವಿಚಾರಮಾಡಿ ನೋಡಿ ಜಲೂಕಾಸ್ತ್ರ (ಜಿಗಣೆಯ ರೂಪವಾದ ಬಾಣ)ವನ್ನು ಪ್ರಯೋಗಿಸಿ ಅವರೆಲ್ಲರನ್ನೂ ಹೊಡೆದು ಕೆಡಹಿದನು. ನೀಲನೂ ಮುರಿದುಬಿದ್ದನು; ಸೈನಿಕರೂ ಭಗ್ನರಾದರು. ಸೈನಿಕರು ಯಾರೂ ಇಲ್ಲದುದರಿಂದ ರಾಮನು ಏಕಾಕಿಯಾಗಿ ನಿಂತು, ತೀಕ್ಷ್ಣಗಳಾಗಿ ಕಾಲಾಗ್ನಿಗೆ ಸಮಾನವಾದ ತೇಜಸ್ಸುಳ್ಳವಾಗಿರುವ ಬಾಣಗಳನ್ನು ಪ್ರಯೋಗಿಸಲು, ಆ ಬಾಣಗಳು, ಕೃಪಣನಾಗಿಯೂ ದರಿದ್ರನಾಗಿಯೂ ಇರುವವನ ಮನೋರಥಗಳಂತೆಯೂ ಆಕಾಶದಲ್ಲಿ ಶರತ್ಕಾಲದ ಮೇಘಗಳಂತೆಯೂ, ನಿಷ್ಫಲಗಳಾಗಿ ಬಿದ್ದುಹೋದುವು. ರಾಮನು ಕುಪಿತನಾಗಿ ಯುದ್ಧದಲ್ಲಿ ಯಾವ ಬಾಣಗಳನ್ನು ಬಿಟ್ಟರೂ ಅವುಗಳನ್ನು ಅವರಿಬ್ಬರೂ ಎರಡೆರಡು ತುಂಡಾಗಿ ಕತ್ತರಿಸಲು, ಅವು ನಾಲ್ಕು ತುಂಡುಗಳಾಗಿ ಬಿದ್ದುಹೋದವು. ಹೀಗೆ ಯುದ್ಧವು ಲೋಕಕ್ಕೆ ವಿಸ್ಮಯವನ್ನುಂಟುಮಾಡಿತು. ರಾಮನು ಆ ಬಾಲಕರಿಗಿರುವ ತನ್ನ ಸಮಾನ ಬಲವನ್ನೂ ಸೀತೆಯ ಮುಖದಂತಿರುವ ಮುಖವನ್ನೂ ಚೆನ್ನಾಗಿ ತಿಳಿದು ಅವರ ಬಾಣದ ಪೆಟ್ಟಿನಿಂದ ಮೂರ್ಛಿತನಾಗಿ ರಥದಲ್ಲಿ ಬಿದ್ದನು.

ಬಳಿಕ ಕುಶಲವರು ರಾಮನು ಮೂರ್ಛಿತನಾಗಿ ಬಿದ್ದಿರುವುದನ್ನು ಕಂಡು ರಥವನ್ನು ಹತ್ತಿ, ಅವನ ಕುಂಡಲಗಳನ್ನೂ, ಕೇಯೂರ ಕಂಠಹಾರಗಳನ್ನೂ, ಲಕ್ಷ್ಮಣನ ಸರ್ವಾಭರಣಗಳನ್ನೂ, ರಣಭೂಮಿಯಲ್ಲಿ ಬಿದ್ದಿದ್ದ ಉಳಿದ ಎಲ್ಲ ವೀರರ ಆಭರಣಗಳನ್ನೂ ತೆಗೆದುಕೊಂಡರು. ಅಷ್ಟರಲ್ಲಿ ಲವನು ಕುಶನನ್ನು ಕುರಿತು, "ಎಲೈ ಅಣ್ಣನಾದ ಕುಶನೇ! ಮಹಾಬಲನಾದ ಹನುಮಂತನನ್ನು ಹಿಡಿದುಕೊಂಡು ಬರುವೆನು; ಆ ಕಪಿಯನ್ನು ನೋಡಿದರೆ ಸೀತಾದೇವಿಯು ಸಂತೋಷವನ್ನು ಹೊಂದುವಳೆಂಬುದಕ್ಕೆ ಸಂದೇಹವಿಲ್ಲ. ನೀನು ದುರ್ಜಯವಾದ ಶ್ರೀರಾಮನ ರಥವನ್ನು ಹತ್ತು, ನಾನು ರಮ್ಯವಾದ ಲಕ್ಷ್ಮಣನ ರಥವನ್ನೇರಿ ಹೊರಡುವೆನು. ಜಾಂಬವಂತನೇ ಮೊದಲಾದ

ವೀರರನ್ನು ನಿನ್ನ ರಥದಲ್ಲಿ ಉರುಳಿಸಿಬಿಡು" ಎಂದನು. ಮೂರ್ಛೆಹೊಂದದ ಹನುಮಂತನೂ ಜಾಂಬವನೂ, 'ಈಗ ನಾವು ಕಣ್ಣು ಮುಚ್ಚಿಕೊಳ್ಳೋಣ' ಎಂದು ನಿರ್ಧರವಾಗಿ ಹೇಳಿಕೊಂಡರು. ಹನುಮಂತನು ಜಾಂಬವಂತನನ್ನು ನೋಡಿ, "ಎಲೈ ಜಾಂಬವನೇ! ರಾಮಾದಿ ವೀರರೆಲ್ಲರೂ ಈ ಬಾಲಕರ ಬಾಣಗಳಿಂದ ಮೂರ್ಛಿತರಾಗಿರುವುದನ್ನು ನೋಡು. ರಾಮನ ಮಗನು ನನ್ನನ್ನೂ ಮೂರ್ಛಿತನನ್ನಾಗಿ ಮಾಡುತ್ತಿದ್ದಾನೆ. ಕುಶನು ನನ್ನನ್ನು ಬಲಾತ್ಕಾರವಾಗಿ ಸೀತೆಯ ಬಳಿಗೆ ತೆಗೆದುಕೊಂಡುಹೋದರೆ ನಾನೇನು ಮಾಡಲಿ? ನನಗೆ ಮರಣವೇ ಉಂಟಾಗುವುದು; ಇದಕ್ಕೆ ಸಂಶಯವಿಲ್ಲ" ಎಂದು ಹೇಳುತ್ತಿರಲು, ಯುದ್ಧಭೂಮಿಯಲ್ಲಿದ್ದ ಲವನು ಸಂತೋಷದಿಂದ ಬಂದು, ಕಪಟ ಮೂರ್ಛಿತರಾಗಿದ್ದ ಶೂರರಾದ ಹನುಮಂತನನ್ನೂ ಜಾಂಬವಂತನನ್ನೂ ತೆಗೆದುಕೊಂಡನು. ತರುವಾಯ ಕುಶಲವರು ಸೀತೆಯ ಬಳಿಗೆ ಬಂದು ಎಲ್ಲವನ್ನೂ ತಿಳಿಸಿದರು. ಲವನು "ಅಮ್ಮಾ! ಸೇನಾಸಹಿತನಾದ ರಾಮನನ್ನು ಜಯಿಸಿ ಆಭರಣಗಳೆಲ್ಲವನ್ನೂ ತಂದಿರುವೆವು. ವಿನೋದಾರ್ಥವಾಗಿ ವಾನರರಿಬ್ಬರನ್ನು ನಾನು ಹಿಡಿದು ತಂದಿರುವೆನು, ನೋಡು. ಅಣ್ಣನು ಯುದ್ಧ ಮಾಡಿ ಜಯಶಾಲಿಯಾಗಿ ಬಂದನು" ಎಂದು ಹೇಳಿದನು. ಸೀತಾದೇವಿಯು ಮಕ್ಕಳನ್ನು ತಬ್ಬಿಕೊಂಡು ಲವನನ್ನು ಕುರಿತು, "ಮಗನೇ! ಮಾನಿಷ್ಠರಾದ ಈ ವಾನರರನ್ನು ತೆಗೆದುಕೊಂಡು ಹೋಗಿ ಯುದ್ಧಭೂಮಿಯಲ್ಲಿ ಬಿಡು. ಇವರು ನನ್ನನ್ನು ನೋಡಿದರೆ ಪ್ರಾಣವನ್ನು ಬಿಡುವರು" ಎಂದು ಹೇಳಲು, ಬುದ್ಧಿಶಾಲಿಯಾದ ಲವನು ಅವರಿಬ್ಬರನ್ನೂ ಯುದ್ಧ ಭೂಮಿಯಲ್ಲಿ ಬಿಟ್ಟು ಬಂದನು.

ಅಷ್ಟರಲ್ಲಿ ವಾಲ್ಮೀಕಿ ಮುನಿಯು ವರುಣಲೋಕದಿಂದ ಹೊರಟು ಮುನಿಗಳೊಡನೆ ಅಲ್ಲಿಗೆ ಬಂದು ಸೇರಿದನು. ಬಾಲಕರಿಬ್ಬರೂ ಆತನ ಬಳಿಗೆ ಬಂದು ತಾವು ಮಾಡಿದ ಕಾರ್ಯವನ್ನೆಲ್ಲ ತಿಳಿಸಿದರು. ವಾಲ್ಮೀಕಿಯು ಎಲ್ಲವನ್ನೂ ತಿಳಿದು ಅಮೃತಮಯವಾದ ಉದಕದಿಂದ ಪ್ರೋಕ್ಷಣೆ ಮಾಡಿ ರಾಮ ಲಕ್ಷ್ಮಣರೆಲ್ಲರನ್ನೂ ಎಬ್ಬಿಸಿ, ರಾಮನನ್ನು ಕುರಿತು, "ಮಹಾರಾಜನಾದ ರಘುನಂದನನೇ! ಇವರಿಬ್ಬರೂ ನಿನ್ನ ಮಕ್ಕಳು; ಇವರನ್ನು ಪರಿಗ್ರಹಿಸು. ಸೀತೆಯು ದೋಷರಹಿತಳೆಂದು ನಿನಗೆ ತೋರಿದರೆ ಆಕೆಯನ್ನೂ ಕರೆದುಕೊಂಡು ಹೋಗಬಹುದು" ಎಂದನು. ರಾಮನು ಎದ್ದು ಸೇನಾಸಮೇತನಾಗಿ ಹೊರಟು ಅಯೋಧ್ಯೆಯನ್ನು ಸೇರಿದನು. ವಾಲ್ಮೀಕಿಯು ನಸುನಗುತ್ತ ಯಜ್ಞಾಶ್ವವನ್ನು ಬಿಟ್ಟು ಬಿಡಲು, ಆ ಶೂರರು ಅದನ್ನು ರಕ್ಷಣೆ ಮಾಡಿಕೊಂಡರು. ಬಳಿಕ ಯಜ್ಞವು ನಡೆಯಿತು. ಯಜ್ಞವು ನಡೆಯುತ್ತಿರುವಾಗ ವಾಲ್ಮೀಕಿಮುನಿಯು ಮಕ್ಕಳೊಡನೆ ಸೀತಾದೇವಿಯನ್ನು ಕರೆದುಕೊಂಡು ಹೋಗಿ ರಾಮನ ಬಳಿಗೆ ಬಿಟ್ಟನು. ಶ್ರೀರಾಮನು ಪತ್ನೀಪುತ್ರಸಮೇತನಾಗಿ ಯಜ್ಞ ಪೂರ್ತಿಯಾದ ಬಳಿಕ ಋಷಿಗಳನ್ನು ಪುರಸ್ಕರಿಸಿ ಕಳುಹಿಸಿಕೊಟ್ಟನು. ಶ್ರೀರಾಮನು ಸೀತಾದೇವಿಯಲ್ಲಿ ತನಗಿದ್ದ ಪ್ರೀತಿಯನ್ನು ತನ್ನ ಮಕ್ಕಳಲ್ಲಿಯೂ ಇಟ್ಟನು.

"ಹೀಗೆ ಪೂರ್ವದಲ್ಲಿ ಶ್ರೀರಾಮನಿಗೆ ತನ್ನ ಪುತ್ರರೊಡನೆ ಹೇಗೆ ಯುದ್ಧವು ಸಂಭವಿಸಿತೋ ಹಾಗೆಯೇ ಅರ್ಜುನನಿಗೂ ಅವನ ಮಗನಿಗೂ ಅದ್ಭುತವಾದ ಯುದ್ಧವು ನಡೆಯಿತು" ಎಂದು ಜೈಮಿನಿಯು ಎಲ್ಲವನ್ನೂ ಪರೀಕ್ಷಿದ್ರಾಜನಿಗೆ ಹೇಳಿದನು. "ಎಲೈ ಮುನಿಗಳಿರಾ! ನಾನು ಅದನ್ನೇ ನಿಮ್ಮೆಲ್ಲರಿಗೂ ತಿಳಿಸಿದೆನು. ವಾಲ್ಮೀಕಿಯು ತಂದೆ ಮಕ್ಕಳಿಗಾದ ಈ ಯುದ್ಧವನ್ನು ರಾಮಾಯಣದಲ್ಲಿ ಹೇಳಲಿಲ್ಲ. ಹಾಗೆ ಹೇಳಿದ್ದರೆ ಈ ಲೋಕವು ಕರುಣಾ ಸಮುದ್ರದಲ್ಲಿ ಮುಳುಗಿ ಹೋಗುತ್ತಿದ್ದಿತು. ಈ ಆಖ್ಯಾನವನ್ನು ಯಾವ ನರಶ್ರೇಷ್ಠರು ಕೇಳುತ್ತಾರೆಯೋ ಅವರು ಪುತ್ರ ಪೌತ್ರ ಸಹಿತರಾಗಿ ಮನೋಹರವಾದ ಭೋಗಗಳನ್ನ ನುಭವಿಸಿ ಸರ್ವಪಾಪವಿಮುಕ್ತರಾಗಿ ಶಾಶ್ವತವಾದ ವಿಷ್ಣುಪದವನ್ನು ಪಡೆಯುವರು. ಈ ಉತ್ತಮವಾದ ಇತಿಹಾಸವನ್ನು ಹೇಳಿದವನೂ ಕೇಳಿದವನೂ ರಾಜಸೂಯಾಶ್ವಮೇಧಗಳ ಫಲವನ್ನು ಹೊಂದುವುದಲ್ಲದೆ ಸ್ವರ್ಣ ವಿಮಾನದಲ್ಲಿ ಕುಳಿತು ಸ್ವರ್ಗಕ್ಕೆ ಹೋಗುತ್ತಾನೆ; ಮತ್ತೆ ರೂಪ ಲಕ್ಷಣೈಶ್ವರ್ಯಸಂಪನ್ನನಾಗಿ ಶುದ್ಧವಂಶದಲ್ಲಿ ಜನಿಸುತ್ತಾನೆ. ಶ್ರಾವ್ಯವಾದ ಈ ಉಪಾಖ್ಯಾನವನ್ನು ಕೇಳಿದರೆ, ಕೋಕಿಲೆಯ ಶಬ್ದವನ್ನು ಕೇಳಿದ ಮೇಲೆ ಕ್ರೂರವಾದ ಕಾಕಧ್ವನಿಯು ರುಚಿಸದಂತೆ, ಮತ್ತೊಂದು ಉಪಾಖ್ಯಾನವು ರುಚಿಸಲಾರದು."

# ಬಭ್ರುವಾಹನ ವಿಜಯ

ಹಂಸಧ್ವಜನು ಬಭ್ರುವಾಹನನ ಬಾಣಗಳನ್ನೂ ರಥಸಹಸ್ರವನ್ನೂ ಕತ್ತರಿಸಿ ಬಲವಾದ ಯುದ್ಧಮಾಡಿ ಬಭ್ರುವಾಹನನ ಅಸ್ತ್ರಗಳನ್ನೆಲ್ಲ ವ್ಯರ್ಥಪಡಿಸಿ ಅವನನ್ನು ರಥಸಹಿತವಾಗಿ ಕೆಳಕ್ಕೆ ಕೆಡಹಿ ಬಾಣಗಳಿಂದ ಅವನ ದೇಹವನ್ನು ಭೇದಿಸಿ ಐದು ಅಕ್ಷೌಹಿಣೀ ಸೈನ್ಯವನ್ನು ಕೊಂದನು. ತನ್ನ ಮಕ್ಕಳು ಯುದ್ಧದಲ್ಲಿ ಮುರಿದು ಬೀಳುವರೆಂದು ಹೇಳಿದ್ದ ಶ್ರೀಕೃಷ್ಣನ ವಾಕ್ಯವನ್ನು ನೆನೆದು ಬಭ್ರುವಾಹನನು ಅರ್ಜುನನ ಮೇಲೆ ಬಾಣವನ್ನು ಬಿಡುತ್ತ ಬಂದನು. ಅವನು ಸಾವಿರಾರು ಮಂದಿ ಸೈನಿಕರನ್ನು ಕೆಡಹಿದನು. ಅವನ ಬಾಣಸಮೂಹದಿಂದ ಹಂಸಧ್ವಜನ ಕುದುರೆಗಳೂ ರಥವೂ ಯುದ್ಧದಲ್ಲಿ ಚೂರ್ಣವಾದುವು. ಹಂಸಧ್ವಜನ ಎದೆಯು ಸೀಳಿಹೋಗಲು, ಅವನು ಮೂರ್ಛಿತನಾಗಿ ಬಿದ್ದನು. ಮಹಾ ಪರಾಕ್ರಮಶಾಲಿಯೂ ಮಹಾತ್ಮನಾಗಿಯೂ ಇರುವ ಹಂಸಧ್ವಜನು ಬಿದ್ದ ಕೂಡಲೆ ಸುವೇಗನು ಬಭ್ರುವಾಹನನೊಡನೆ ಯುದ್ಧಕ್ಕೆ ನಿಂತನು. ಅವನು ಬಭ್ರುವಾಹನನ ಎದೆಗೆ ಒಂಬತ್ತು ಬಾಣಗಳನ್ನು ಹೊಡೆದು ಅವನ ಛತ್ರ ಧ್ವಜಗಳನ್ನು ಮೂರು ಬಾಣಗಳಿಂದ ಕತ್ತರಿಸಿ ಹಾಕಿದನು; ಬಳಿಕ ಅನೇಕ ಶತ ಸಹಸ್ರ ಬಾಣಗಳನ್ನು ಅವನ ಎದೆಗೆ ಬಿಟ್ಟನು. ಅಲ್ಲದೆ, ಸಾವಿರಾರು ಮಂದಿ ವೀರರ ಮೇಲೆ ಯುದ್ಧ ಮಾಡಿ ಚಂದ್ರನಂತೆ ಶುಭ್ರವಾಗಿರುವ ನೂರಾರು ಆನೆಗಳನ್ನು ಕೊಂದು ನೆಲವೆಲ್ಲವೂ ಮಾಂಸದ ಕೆಸರಿನಿಂದ ಭಯಂಕರವಾಗುವಂತೆ ಮಾಡಿದನು. ಆ ಯುದ್ಧ ಭೂಮಿಯೆಲ್ಲವೂ ಆನೆಗಳ ತಲೆಗಳಿಂದ ಉತ್ತು, ತಳಮೇಲು ಮಾಡಿದಂತಾಗಲು, ಭೈರವಗಳು ಆನೆ ಕುದುರೆಗಳ ಹೆಗಲುಗಳಿಗೆ ಮೂರೆಳೆಯಾಗಿ ಹೊಸೆದ ಕರುಳಿನ ಹಗ್ಗವನ್ನು ಕಟ್ಟಿ, ಆನೆಯ ತಲೆಗಳನ್ನು ಗೆಡ್ಡೆಗಳಂತೆ ನೆಲದಲ್ಲಿ ಹೂಳುತ್ತ, ಮುತ್ತುಗಳನ್ನು ಬೀಜಗಳಂತೆ ಬಿತ್ತುತ್ತಲೂ ಇದ್ದುವು. ಯಕ್ಷಿಣಿಯರು ಕತ್ತರಿಸಿ ಹೋದ ಆನೆಗಳ ಕಾಲುಗಳನ್ನು ಒನಕೆಗಳನ್ನಾಗಿ ಮಾಡಿಕೊಂಡು ಹಾಡು ಹೇಳುತ್ತ ನರಶಿರಸ್ಸುಗಳನ್ನು ಕುಟ್ಟುತ್ತಿದ್ದರು. ಹಾಗೆ ಕುಟ್ಟಿದುದನ್ನು ಮತ್ತೆ ಕೆಲವರು, ಕತ್ತರಿಸಿ ಹೋದ ಆನೆಗಳ ಮುಖವೆಂಬ ಯಂತ್ರಗಳಿಂದ ಜಲ್ಲಿಸಿ ಪುಡಿ ಮಾಡುತ್ತಿದ್ದರು. ಸುವೇಗನು ಕಾಲಾಗ್ನಿಗೆ ಸಮಾನವಾದ ಬಾಣವನ್ನು ಸಂಧಾನ ಮಾಡಿಬಿಡಲು, ಬಭ್ರುವಾಹನನು ಅದನ್ನು ಮಧ್ಯಕ್ಕೆ ಎರಡು ತುಂಡು ಮಾಡಿದನು. ಹಾಗಾದರೂ ಅದರ ಅಗ್ರಭಾಗವು ಅವನೆದುರಿಗೆ ಬರಲು, ಅದನ್ನೂ ಮತ್ತೆ ಎರಡು ತುಂಡಾಗಿ ಮಾಡಿ ನೋಡುತ್ತಿದ್ದನು. ಈ ಎರಡನೆಯ ಅರ್ಧವು ಪುನಃ ತನ್ನ ಎದುರಿಗೆ ಬರುತ್ತಿರಲು, ಅದನ್ನೂ ಎರಡು ತುಂಡು ಮಾಡಿದನು. ಆ ಬಾಣವು ನಾಲ್ಕು ಚೂರುಗಳಾಗಿ ನೆಲಕ್ಕೆ ಬಿದ್ದು ಹೋಯಿತು. ತುದಿಯ ಭಾಗವಾಗಿ ಸೇರಿಕೊಂಡಿದ್ದ ಐದನೆಯ ಚೂರು ಬಂದು ಬಭ್ರುವಾಹನನ ಎದೆಯಲ್ಲಿ ನುಗ್ಗಲು ಅವನು ಮೂರ್ಛಿತನಾದನು.

ಅಷ್ಟರಲ್ಲಿಯೇ ಅವನು ಹೇಗೋ ಮೂರ್ಛೆಯಿಂದೆಚ್ಚತ್ತು ಪ್ರಲಯಾಗ್ನಿಯಂತೆ ಉರಿಯುತ್ತ ಅರ್ಜುನನ ರಥಕ್ಕೆ ಸಹಾಯವಾಗಿ ನಿಂತಿದ್ದ ಸೇನೆಯ ಮೇಲೆ ಬಾಣ ಪ್ರಯೋಗ

ಮಾಡಿದನು. ಆ ದಿನದ ಯುದ್ಧದಲ್ಲಿ ಅರ್ಜುನಪುತ್ರನೂ ಕರ್ಣಪುತ್ರನೂ, ದೇಹ ನಾಶವಾದರೆ ಜೀವವು ಹೇಗೆ ಅಡಗಿ ನಿಲ್ಲುವುದೋ ಹಾಗೆ, ಪರಸ್ಪರವಾಗಿ ಯುದ್ಧಕ್ಕೆ ನಿಂತರು. ಮೂರ್ಛಿತರಾದ ಉಳಿದ ಯೋಧರನ್ನು ಜೀವಸಹಿತವಾಗಿ ಯುದ್ಧ ಭೂಮಿಯಿಂದ ಹೊರಕ್ಕೆ ಸಾಗಿಸಿದರು. ಪೂರ್ವದಲ್ಲಿ ತೀರ್ಥಯಾತ್ರೆಯ ಕಾಲದಲ್ಲಿ, ಅರ್ಜುನನ ಆಯುಧದ ಗಾಯಗಳನ್ನು ವಿಧವಿಧವಾದ ಔಷಧಗಳಿಂದ ಗುಣ ಮಾಡಿ ಮಹಾಶಾಪದಿಂದ ತಪ್ಪಿಸಿದ್ದ ನಾಗರಾಜಪುತ್ರಿಯರಾದ ಉಲೂಪಿಯೂ ಚಿತ್ರಾಂಗದೆಯೂ ದೈವಯೋಗದಿಂದ ಅರ್ಜುನನ ಬಳಿಗೆ ಬಂದು ಸೇರಿದರು. ಆಗ ಅರ್ಜುನನು ವೃಷಕೇತುವನ್ನು ಕುರಿತು, "ಎಲೈ ವೃಷಕೇತುವೇ! ನನ್ನ ಸೈನ್ಯವು ನಾಶವಾಯಿತು. ನಮ್ಮ ಸಮಸ್ತ ವಸ್ತುಗಳನ್ನೂ ಶತ್ರುಗಳು ಅಪಹರಿಸಿದರು. ಹಂಸಧ್ವಜನೇ ಮೊದಲಾದ ವೀರರೆಲ್ಲರೂ ನನ್ನೆದುರಿಗೇ ಬಿದ್ದು ಹೋದರು. ಪ್ರದ್ಯುಮ್ನನನ್ನೂ ಅವನ ಮಗನನ್ನೂ ಶತ್ರುಗಳು ಸೆರೆ ಹಿಡಿದು ಮಣಿಪುರಕ್ಕೆ ತೆಗೆದುಕೊಂಡುಹೋದರು. ಅವರಿಬ್ಬರೂ ನನಗಾಗಿ ಯುದ್ಧಮಾಡಿ ಬಾಣಗಳಿಂದ ಸೀಳಿದ ದೇಹವುಳ್ಳವರಾದರು. ಅನುಸಾಲ್ವನು ಯುದ್ಧದಲ್ಲಿ ಎಲ್ಲಿ ಬಿದ್ದನೋ ಗೊತ್ತೇ ಇಲ್ಲ. ಈಗ ತಾನೆ ಸುವೇಗನು ಮೃತನಾಗಲು, ನಮ್ಮ ವೀರರು ಅವನನ್ನು ಛತ್ರ ಚಾಮರ, ಧ್ವಜ, ಧನುರ್ವಸ್ತ್ರ ಸಹಿತವಾಗಿ ಸಾಗಿಸಿಕೊಂಡು ಹೋದರು. ಉಳಿದಿರುವನು ನೀನೊಬ್ಬನೇ; ಮತ್ತೊಬ್ಬನೂ ಕಾಣಿಸಲಿಲ್ಲ. ನೀನು ಹಸ್ತಿನಪುರಕ್ಕೆ ಹೊರಟು ಹೋಗಿ ಧರ್ಮಜ ಕೃಷ್ಣರ ಬಳಿಯನ್ನು ಸೇರು. ದಾತೃಗಳೆಲ್ಲರಿಗೂ ಬೀಜಭೂತನಾಗಿರುವ ಕುಲ ಪುತ್ರನಾದ ನಿನಗೆ ಶುಭವಾಗಲಿ" ಎಂದು ಹೇಳುತ್ತಿರುವಾಗ ಅರ್ಜುನನ ಕಿರೀಟದ ಮೇಲೆ ಒಂದು ಹದ್ದು ಕುಳಿತು ಗಟ್ಟಿಯಾಗಿ ಕೂಗಿತು. ಆಗ ಅರ್ಜುನನು ತನ್ನ ತಲೆಯ ಮೇಲೆ ಕುಳಿತು ತನಗೆ ಮೃತ್ಯುವನ್ನು ಸೂಚಿಸುತ್ತಿರುವ ಹದ್ದನ್ನೂ, ತನ್ನ ರಥದಲ್ಲಿ ಗೂಡು ಕಟ್ಟಿಕೊಂಡು ಅದರಲ್ಲಿ ಮಲಗಿರುವ ಪಾರಿವಾಳವನ್ನೂ, ತಲೆಗಾಣಿಸದ ತನ್ನ ನೆಳಲನ್ನೂ, ಮೂಗಿಲ್ಲದೆ ಕಾಣುವ ತನ್ನ ಮುಖವನ್ನೂ, ತೇಜೋಹೀನವಾದ ಕಣ್ಣುಗಳನ್ನೂ ನೋಡಿ, "ಎಲೈ ಪುತ್ರನೇ! ನೀನು ಪಟ್ಟಣಕ್ಕೆ ಹೋಗಿ ನನಗೆ ಯುದ್ಧದಲ್ಲಿ ತೋರುತ್ತಿರುವ ಭಯಂಕರಗಳಾದ ದುರ್ನಿಮಿತ್ತಗಳನ್ನು ಧರ್ಮ ಭೀಮ ಕೃಷ್ಣರಿಗೆ ತಿಳಿಸು. ನೀನೂ ನನ್ನೊಡನೆ ಯುದ್ಧದಲ್ಲಿ ಮೃತನಾದರೆ ನಿನ್ನ ನಾಶದಿಂದ ಅವರೆಲ್ಲರೂ ಪ್ರಾಣತ್ಯಾಗ ಮಾಡುವರು. ನೀನು ಬಹಳವಾಗಿ ಯುದ್ಧಮಾಡಿದ್ದೀಯೆ; ನಿನ್ನ ದೇಹವೆಲ್ಲ ಬಾಣಗಳಿಂದ ಸೀಳಿ ಹೋಗಿದೆ. ನಿನ್ನನ್ನು ಬಿಟ್ಟು ಪೃಥೆಯು ಬದುಕಿರುವುದಿಲ್ಲ. ಆದಕಾರಣ ನೀನು ನನ್ನನ್ನು ಬಿಟ್ಟುಹೋಗು. ನನ್ನಿಂದ ಕೆಲಸವೂ ಕೆಟ್ಟುಹೋಯಿತು. ಧರ್ಮರಾಜನು ದೀಕ್ಷೆಯನ್ನು ಧರಿಸಿ ಅಸಿಪತ್ರ ವ್ರತಾಚರಣೆಯನ್ನು ಮಾಡುತ್ತಿರುವನು. ಯಜ್ಞ ಕರ್ಮವು ಹೇಗೆ ನಡೆಯುವುದು? ಯುಧಿಷ್ಠಿರನಿಗೆ ಯಜ್ಞಾಂತದ ಅವಭೃಥ ಸ್ನಾನಾದಿಗಳು ನಡೆಯಲಿಲ್ಲ; ಅರುವತ್ತುನಾಲ್ಕು ದಂಪತಿಗಳು ಜಲಾಹರಣಕ್ಕಾಗಿ ಹೊರಡಲಿಲ್ಲ; ಯುಧಿಷ್ಠಿರ ಭೀಮಾದಿವೀರರು ನನ್ನ ಬಂಧುಗಳು. ನೂರು ಕಡ್ಡಿಗಳಿಂದಲೂ ಹುಲಿಯ ಚರ್ಮದಿಂದಲೂ ಕೂಡಿದ ಛತ್ರವನ್ನು ಯಜ್ಞಾರಂಭದಲ್ಲಿ ಧರ್ಮಜನೆದುರಿಗೆ ಹಿಡಿಯಲಿಲ್ಲ; ಗೌರೀ ಸಂಜ್ಞೆಯುಳ್ಳ ಸಹಸ್ರ ಸ್ತ್ರೀಯರು

(ಹತ್ತು ವರುಷದ ಹುಡುಗಿಯರು) ಚಾಮರಗಳನ್ನು ಹಿಡಿದು ಧರ್ಮನಂದನನೆದುರಿಗೆ ಹೊರಡಲಿಲ್ಲ; ಲಾಜಾಕ್ಷತೆಗಳ ಮಳೆಯು ಸುರಿಯಲಿಲ್ಲ; ಬ್ರಾಹ್ಮಣರ ವೇದಘೋಷವು ದೇವಲೋಕದವರೆಗೂ ವ್ಯಾಪಿಸಲಿಲ್ಲ; ಚಿನ್ನದ ಸುವ್ರಗಳನ್ನು ಮಾಡಿಸಲಿಲ್ಲ; ಸ್ರುಕ್ಕುಗಳ ಸಂಸ್ಕಾರವಾಗಲಿಲ್ಲ; ಯಜ್ಞದಲ್ಲಿ ವೈಕಂಕತ ಚಷಾಲಗಳೆಂಬ ಪಾತ್ರೆಗಳು ಪ್ರಕಾಶಿಸಲಿಲ್ಲ; ಬಿಲ್ವ, ಎಲಚಿ, ಮುತ್ತುಗ, ಕಗ್ಗಲಿ-ಇವುಗಳಿಂದ ಮಾಡಿದ ಯೂಪಸ್ತಂಭಗಳನ್ನೂ ಪತಾಕೆಗಳನ್ನೂ ನಮ್ಮವರು ಪೂಜಿಸಲಿಲ್ಲ; ಶ್ರೀಕೃಷ್ಣ ಸಹಿತಳಾದ ರುಕ್ಮಿಣಿಯನ್ನು ಸಂತೋಷಪಡಿಸಲಿಲ್ಲ; ಧರ್ಮರಾಜನು ಯಜ್ಞಾಂತದಲ್ಲಿ ಅನುಸೂಯಾರುಂಧತಿ ಮೊದಲಾದ ಮುತ್ತೈದೆಯರಾದ ಮುನಿಪತ್ನಿಯರನ್ನು ಅವರ ಪತಿಗಳೊಡನೆ ನಮಸ್ಕರಿಸಿ ಅವರ ಆಶೀರ್ವಾದಕ್ಕೆ ಪಾತ್ರನಾಗಲಿಲ್ಲ. ನನ್ನ ಜೀವನವು ನಿಂದಿತವೂ ವ್ಯರ್ಥವೂ ಆದುದೆಂದು ತಿಳಿವೆನು. ಆದಕಾರಣ ಯುದ್ಧ ಮಾಡುತ್ತೇನೆ" ಎಂದು ಹೇಳಿದನು.

ವೃಷಕೇತುವು ಆ ಮಾತನ್ನು ಕೇಳಿ, "ಅರ್ಜುನನನ್ನು ಯುದ್ಧದಲ್ಲಿ ಬಿಟ್ಟು ನಾನು ಮೃತ್ಯುಭಯದಿಂದ ತಲೆತಪ್ಪಿಸಿಕೊಂಡು ಹೋಗಲಾರೆನು. ಪ್ರಕಾಶಿಸುತ್ತಿರುವ ನಮ್ಮ ಪಿತಾಮಹನಾದ ಸೂರ್ಯನು ನನ್ನಿಂದ ಅವಮಾನವನ್ನು ಹೊಂದಿ ಬಿದ್ದುಹೋಗುವನು. ಭಗ್ನನಾದವನು ಭಂಗವನ್ನು ಪಡೆಯುತ್ತಾನೆ. ಅದರಿಂದ ಮೃತ್ಯುವೆಂತಹುದು? ನಾನು ಹಿಂದಿರುಗುವುದೆಂದರೇನು? ನೀನು ಹೊರಡು. ಯುದ್ಧ ವಿಮುಖನಾಗಿ ನಿನ್ನನ್ನು ಬಿಟ್ಟು ಹೋಗಿರುವ ನನ್ನನ್ನು ಏಕಪತ್ನಿಯಾದ ನನ್ನ ಪತ್ನಿಯು ನೋಡುವುದಿಲ್ಲ; ಇದು ಸತ್ಯ. ಎಲೈ ಪಾರ್ಥನೇ! ನನ್ನ ಪೌರುಷನನ್ನು ನೋಡು: ಸೇನಾಸಹಿತನಾಗಿ ಬಂದಿರುವ ಆ ಬಭ್ರುವಾಹನನನ ಮೇಲೆ ನಾನು ನಿನ್ನೆದುರಿಗೆ ಯುದ್ಧ ಮಾಡುತ್ತೇನೆ. ಯಾವನು ಮಿತ್ರನಾಗಿಯೂ ಗೋವಿಗಾಗಿಯೂ ಬ್ರಾಹ್ಮಣನಿಗಾಗಿಯೂ ಸ್ವಾಮಿ ಕಾರ್ಯಕ್ಕಾಗಿಯೂ ಯುದ್ಧದಲ್ಲಿ ಪ್ರಾಣಗಳನ್ನು ಬಿಡುವನೋ ಅವನಿಗೆ ಪುಣ್ಯಲೋಕ ಪ್ರಾಪ್ತಿಯಾಗುವುದಲ್ಲದೆ ಮುಕ್ತಿಯೂ ದೊರೆಯುವುದು; ಇದಕ್ಕೆ ಸಂದೇಹವಿಲ್ಲ. ಮಹಾಬಾಹುವಾದ ಪಾರ್ಥನು ಎಲ್ಲಿಯವರೆಗೂ ಯುದ್ಧಭೂಮಿಯಲ್ಲಿರುವನೋ ಅಲ್ಲಿಯವರೆಗೆ ಈ ಯಜ್ಞವು ನಡೆಯುವುದು. ಏಕೆ ವೃಥಾ ನನ್ನೊಡನೆ ಹೇಳುವೆ?" ಎಂದು ಹೇಳಿ ನಮಸ್ಕಾರ ಮಾಡಿ ಸಂತೋಷದಿಂದ ರಥ ಪತಾಕೆಗಳೊಡನೆ ಹೋಗಿ ಬಭ್ರುವಾಹನನನ್ನು ಕರೆದು, "ನೀನು ಯುದ್ಧದಲ್ಲಿ ಈ ವರೆಗೆ ಕೊಂದ ಪಾರ್ಥನ ಕಡೆಯ ಶೂರರೆಲ್ಲರಿಗೂ ಈಗ ದೊಡ್ಡ ಶಾಂತಿಯನ್ನು ಮಾಡುವೆನು" ಎಂದು ಹೇಳುತ್ತಿರಲು, ಬಭ್ರುವಾಹನನು ವೃಷಕೇತುವನ್ನು ಮೂರು ಬಾಣಗಳಿಂದ ಹೊಡೆದನು. ಅವು ಅವನ ಎದೆಯನ್ನು ಭೇದಿಸಿಕೊಂಡು, ಬಾಯಾರಿಕೆಯನ್ನು ಪರಿಹರಿಸಲು ಪಾತಾಳದಲ್ಲಿರುವ ಭೋಗವತೀ ನದಿಯ ನೀರನ್ನು ಕುಡಿಯುವುದಕ್ಕೆ ಹೋಗುವುವೋ ಎಂಬಂತೆ ಹೋಗಿ, ನೆಲವನ್ನು ಹೊಕ್ಕುವು. ವೃಷಕೇತುವು ಆರು ಬಾಣಗಳನ್ನು ಬಭ್ರುವಾಹನನ ಎದೆಗೆ ಹೊಡೆಯಲು, ಅವನು ಆ ಏಟಿಗೆ ಭ್ರಾಂತನಾಗಿ ಹೇಗೋ ತನ್ನನ್ನು ತಾನೇ ಸಮಾಧಾನಪಡಿಸಿಕೊಂಡು ಕಂಗೆಡದೆ ವೃಷಕೇತುವಿನೊಡನೆ ಯುದ್ಧಕ್ಕೆ ನಿಲ್ಲಲು, ಅವನು ಬಭ್ರುವಾಹನನ ರಥವನ್ನು ಚೂರು

ಚೂರು ಮಾಡಿ ಕೆಡಹಿ, ಸಾರಥಿಯನ್ನೂ ಕುದುರೆಗಳನ್ನೂ ಕೊಂದು, ಪ್ರತಾಪದಿಂದ ಶಂಖಧ್ವನಿಯನ್ನು ಮಾಡಿ, ಸುವರ್ಣಚಿತ್ರಿತಗಳಾದ ಬಾಣಗಳಿಂದ ಅವನನ್ನು ತುಂಬಿಸಿದನು. ಬಳಿಕ ಬಭ್ರುವಾಹನನು ವೃಷಕೇತುವನ್ನು ಬಾಣಗಳಿಂದ ಹೊಡೆದು ಶತಸಹಸ್ರ ಬಾಣಗಳಿಂದ ಅವನ ವಿಚಿತ್ರವಾದ ರಥವನ್ನೂ ಸಾರಥಿಯನ್ನೂ ನೊಗವನ್ನೂ ಕತ್ತರಿಸಿದನು.

ಬಭ್ರುವಾಹನನು ಆಗ್ನೇಯಾಸ್ತ್ರವನ್ನು ಪ್ರಯೋಗಿಸಲು, ವೃಷಕೇತುವು ವಾರುಣಾಸ್ತ್ರವನ್ನು ಬಿಟ್ಟನು. ಬಳಿಕ ಮಹಾಬಲನೂ ಶ್ರೀಮಂತನೂ ಆದ ಬಭ್ರುವಾಹನನು ವಾಯವ್ಯಾಸ್ತ್ರ, ಪರ್ವತಾಸ್ತ್ರ, ಐಂದ್ರಾಸ್ತ್ರ, ಕ್ರೂರವಾದ ಕೌಬೀರಾಸ್ತ್ರ, ಸೌರಾಸ್ತ್ರ, ಶಾಂಭವಾಸ್ತ್ರ, ಸಕಲಾಸ್ತ್ರಗಳನ್ನೂ ನಾಶಪಡಿಸುವ ಕಾರ್ತಿಕೇಯಾಸ್ತ್ರ, ಯಾಮ್ಯಾಸ್ತ್ರ ಮೊದಲಾದ ಅಸ್ತ್ರಗಳನ್ನೂ ಶಸ್ತ್ರಗಳನ್ನೂ ಯುದ್ಧದಲ್ಲಿ ಪ್ರಯೋಗಿಸಿದನು. ಹೀಗೆ ಶಸ್ತ್ರಾಸ್ತ್ರ ಪ್ರಯೋಗದಿಂದ ಬಹಳವಾಗಿ ಯುದ್ಧವಾಯಿತು. ಉಭಯಪಕ್ಷದಲ್ಲಿ ಅನೇಕ ಜನ ವೀರರು, ಪ್ರಳಯಕಾಲದಲ್ಲಿ ಯಮನಿಂದ ಹೇಗೋ ಹಾಗೆ, ಸಂಹೃತರಾದರು, ವೃಷಕೇತುವು ಧ್ವಂಸ ಮಾಡಿದ ಗಜ ರಥ ಪದಾತಿಗಳಿಂದ ಬಹಳವಾಗಿ ಭೂತತುಷ್ಟಿಯಾಗುವ ರುದ್ರಕ್ರೀಡೆಯಾಯಿತು. ಅವನ ಬಾಣಗಳು ಬಭ್ರುವಾಹನನನ್ನು ಆವರಿಸಿಕೊಳ್ಳಲು, ಅವನ ವೈಷ್ಣವಾಸ್ತ್ರವನ್ನು ನೆನೆದು ಅದರಿಂದ ಎಲ್ಲ ಅಸ್ತ್ರಗಳನ್ನೂ ಶಾಂತಿಗೊಳಿಸಿ, ಬಾಡಬಾಸ್ತ್ರವನ್ನು ಸಂಧಾನ ಮಾಡಿ ಕರ್ಣಪುತ್ರನನ್ನು ಕುರಿತು, "ನಾನು ಅನೇಕರನ್ನು ಕೊಂದರೂ ವೃಷಕೇತುವು ನನ್ನನ್ನು ಬಾಣಗಳಿಂದ ಪೀಡಿಸಲಿಲ್ಲ. ಇಂದ್ರನು ವೃತ್ರನನ್ನು ಕೊಂದಂತೆ ಇಲ್ಲಿ ನಾನು ಇವನನ್ನು ಕೊಲ್ಲುವೆನು" ಎಂದು ಹೇಳಿ ಪ್ರಯೋಗಿಸಿದನು. ಆ ಬಾಣವು ವೃಷಕೇತುವಿನ ಎದೆಯಲ್ಲಿ ನಟ್ಟು ಅವನನ್ನು ಆಕಾಶಕ್ಕೆ ಹಾರಿಸಿಕೊಂಡು ಹೋಗಿ ದಿಕ್ಕು ದಿಕ್ಕುಗಳಲ್ಲಿ ಎಲ್ಲಾ ನದೀ ಸಮುದ್ರಗಳನ್ನೂ ಸುತ್ತಿಸಿ ನೆಲದ ಕಡೆಗೆ ಬಾರದೆ ಹೋಗಲು, ಅದು ಅದ್ಭುತವಾಗಿ ತೋರಿತು. ಇವನು ಸ್ವಶರೀರದಲ್ಲಿಯೇ ತಮ್ಮ ಪಿತಾಮಹನ ದೇಹವನ್ನು ಭೇದಿಸುವನೋ ಏನೋ! ಎಂದು ತಂದೆ ಮಕ್ಕಳಿಬ್ಬರೂ ಮೂರು ಮುಹೂರ್ತಕಾಲ ಯುದ್ಧಭೂಮಿಯಲ್ಲಿ ಆ ಬಾಣವು ಎಲ್ಲೆಲ್ಲಿಗೆ ವೃಷಕೇತುವನ್ನು ತೆಗೆದುಕೊಂಡು ಹೋಗುವುದೋ ಅಲ್ಲಲ್ಲಿ ನೋಡುತ್ತಿದ್ದರು. ಮೂರು ಮೂಹೂರ್ತದ ಮೇಲೆ ವೃಷಕೇತು ಅರ್ಜುನನ ಮುಂದೆ ಆ ಮಣಿಪುರದಲ್ಲಿ ನೆಲಕ್ಕೆ ಬಿದ್ದನು.

ಬಳಿಕ ವೃಷಕೇತು ಕುಪಿತನಾಗಿ ನಸುನಗುತ್ತ ರಥಸಹಿತನಾಗಿ ಆ ಬಭ್ರುವಾಹನನ ಮೇಲೆ ಐದುಬಾಣಗಳನ್ನು ಪ್ರಯೋಗಿಸಲು, ಆ ಬಾಣಗಳು ಬಭ್ರುವಾಹನನನ್ನು ಅವನ ರಥಾಶ್ವ ಸೂತ ಕೇತನಗಳೊಡನೆ ಮನೋಹರವಾದ ಸ್ವರ್ಗಲೋಕಕ್ಕೆ ಹಾರಿಸಿಕೊಂಡು ಹೋದುವು. ರಥವು ಭಯಂಕರವಾದ ಸೂರ್ಯಮಂಡಲದೊಳಕ್ಕೆ ನುಗ್ಗುತ್ತಿರಲು, ತನ್ನ ದೇಹವು ಬಾಣಗಳಿಂದ ಸೀಳಿಹೋಗಿದ್ದರೂ ಲಕ್ಷ್ಯಮಾಡದೆ, ಬಭ್ರುವಾಹನನು ರಥವನ್ನು ಬಿಟ್ಟುಬಿಟ್ಟನು. ಅದು ಸೂರ್ಯನಿಂದ ಸುಟ್ಟು ಸಂಪಾತಿಯಂತೆ ಬೀಳುತ್ತಿರಲು, ಅದನ್ನೂ,

ಹಾಗೆಯೇ ಬೀಳುತ್ತಿದ್ದ ಬಭ್ರುವಾಹನನನ್ನೂ ನೋಡಿ ವೃಷಕೇತುವು, "ನಮ್ಮ ಕಡೆಯ ಶೂರನಾದ ಹಂಸಧ್ವಜನನ್ನು ನೀನು ಹಿಂದೆ ಜಯಿಸಿದೆಯಾದ ಕಾರಣ ಎಲೈ ಬಭ್ರುವಾಹನನೇ! ಅದಕ್ಕಾಗಿ ನಿನ್ನನ್ನು ದೇವಲೋಕಕ್ಕೆ ಕಳುಹಿಸುವೆನು" ಎಂದು ಹೇಳಿ ಪುನಃ ಬಾಣಗಳಿಂದ ಅವನನ್ನು ಆಕಾಶಕ್ಕೆ ಹಾರಿಸಿದನು. ಬಭ್ರುವಾಹನನು ಆ ಬಾಣಗಳನ್ನು ಮೂರು ತುಂಡಾಗಿ ಕತ್ತರಿಸಿ ಕುಪಿತನಾಗಿ ವೃಷಕೇತುವಿನ ಮೇಲೆ ಪರ್ವತದಂತೆ ಬಿದ್ದನು. ವೃಷಕೇತುವು ಕೈಗಳನ್ನು ಮಸೆದು ಕೊರಲನ್ನು ನಡುಗಿಸುತ್ತ ಐದು ಬಾಣಗಳಿಂದ ಹೊಡೆದನು. ಹೀಗೆ ಇವರಿಬ್ಬರೂ ನೆಲದಲ್ಲಿ ನಿಂತು ಕ್ರೂರವಾದ ಬಾಣಗಳಿಂದ ಯುದ್ಧ ಮಾಡುತ್ತಿರಲು ಅರ್ಜುನನು ಆಶ್ಚರ್ಯದಿಂದ ನೋಡುತ್ತಿದ್ದನು.

ಆಗ ವೃಷಕೇತುವು ಪಾರ್ಥನನ್ನು ಕುರಿತು, "ಪ್ರಭುವೇ! ಪೂರ್ವದಲ್ಲಿ ಕರ್ಣನ ರಥವು ನೆಲದಲ್ಲಿ ಹೂತು ಹೋದಾಗ ಆ ಮಹಾ ಯುದ್ಧದಲ್ಲಿ ನಿಲ್ಲೆಂದು ಅವನು ಹೇಳಿದಂತೆ ಇವನು ಹೇಳಲಿಲ್ಲ. ನನ್ನಿಂದ ಅವನ ದೇಹವು ಸೀಳಿಹೋಗಿದ್ದರೂ ಯುದ್ಧವನ್ನು ಬಿಡಲಿಲ್ಲ" ಎಂದು ಹೇಳುತ್ತಿರಲು, ಆ ಬಭ್ರುವಾಹನನು ನಾನಾ ವಿಧ ಶಸ್ತ್ರಾಸ್ತ್ರಗಳಿಂದ ಸೀಳಿಹೋದ ದೇಹವುಳ್ಳವನಾದರೂ, ಪಾರ್ಥನೆದುರಿಗೆ ಪುನಃ ವೃಷಕೇತುವಿನ ತಲೆಯ ಮೇಲೆ ಬಿದ್ದನು. ಅವರಿಬ್ಬರೂ ಸ್ವಲ್ಪಕಾಲ ರಥದಲ್ಲಿ ನಿಂತು ಯುದ್ಧ ಮಾಡುತ್ತಲೂ, ವಿರಥರಾದಾಗ ಆಕಾಶಕ್ಕೆ ಹಾರುತ್ತಲೂ ಕೆಳಕ್ಕೆ ಬೀಳುತ್ತಲೂ, ಪುನಃ ರಥವನ್ನು ಹತ್ತುತ್ತಲೂ, ಒಬ್ಬರನ್ನೊಬ್ಬರು ಕ್ರೂರವಾದ ಬಾಣಗಳಿಂದ ಸ್ವರ್ಗಕ್ಕೆ ಹಾರಿಸುತ್ತಲೂ ಇರುವುದನ್ನು ಜನರೆಲ್ಲರೂ ನೋಡುತ್ತಿದ್ದರು. ಇಬ್ಬರ ದೇಹದ ಮಾಂಸವೂ ಬಾಣಗಳಿಂದ ಸಾವಿರ ಭಾಗವಾಗಿ ಕತ್ತರಿಸಿಹೋಯಿತು. ಆ ಮಾಂಸವನ್ನು ಹದ್ದು ಮತ್ತು ಪಾರಿವಾಳದ ಆಕಾರವುಳ್ಳ ಬಾಣಗಳು ಕಚ್ಚಿ ಆಕಾಶಕ್ಕೆ ಹಾರುತ್ತಿದ್ದುವು. ಅವರಿಬ್ಬರೂ, ಆಕಾಶದಲ್ಲಿದ್ದವನು ನೆಲಕ್ಕೂ ನೆಲದ ಮೇಲಿದ್ದವನು ಆಕಾಶಕ್ಕೂ ಹೋಗಿ ಯುದ್ಧ ಮಾಡುತ್ತಿರಲು ಹಾಗೆಯೇ ಐದು ದಿನಗಳು ಕಳೆದುಹೋದುವು. ಹೀಗೆ ಯುದ್ಧ ಮಾಡುತ್ತಿದ್ದ ವೃಷಕೇತುವನ್ನು ನೋಡಿ ಬಭ್ರುವಾಹನನು ಐದನೆಯ ದಿವಸ ಅನೇಕ ತೀಕ್ಷ್ಣ ಬಾಣಗಳಿಂದ ಅವನ ಮೈಯನ್ನು ತುಂಬಿಸುತ್ತ, "ಎಲೈ ವೃಷಕೇತುವೇ! ನೀನೇ ಧನ್ಯನು. ಯಾವ ಮಾನಿಷ್ಠನೂ ನನ್ನ ಮೇಲೆ ಹೀಗೆ ಯುದ್ಧ ಮಾಡಲಿಲ್ಲ; ನೀನು ಈಗ ನಾರಾಯಣಸ್ಮರಣೆಯನ್ನು ಮಾಡು; ಇನ್ನು ಬಾಣಗಳಿಂದ ನಿನ್ನನ್ನು ಕೆಡಹುವೆನು" ಎಂದು ಕೋಪದಿಂದ ಕೆಂಪಾದ ಕಣ್ಣುಗಳುಳ್ಳವನಾಗಿ ಹೇಳಿ, ಅವನ ಮೇಲೆ ಅರ್ಧಚಂದ್ರ ಬಾಣವನ್ನು ಬಿಡಲು, ಅದು ಬರುತ್ತಿರುವಾಗಲೇ ವೃಷಕೇತುವು ಅದನ್ನು ಮೂರು ತುಂಡಾಗಿ ಕತ್ತರಿಸಿ ಆರ್ಭಟಿಸಿದನು. ಅಷ್ಟರಲ್ಲಿ ಬಭ್ರುವಾಹನನು ಸುವರ್ಣ ಚಿತ್ರಿತವಾದ ಮತ್ತೊಂದು ಬಾಣವನ್ನು ಬಿಡಲು, ಅದು ವೃಷಕೇತುವಿನ ಕಂಠನಾಳವನ್ನು ಛೇದಿಸಿ ಅವನ ತಲೆಯನ್ನು ತೆಗೆದುಕೊಂಡು ಆಕಾಶಕ್ಕೆ ಹೋಯಿತು. ದೇಹವು ನೆಲಕ್ಕೆ ಬಿದ್ದು ಹೋಗಲು, ಕತ್ತರಿಸಿದ ಆ ತಲೆಯು ಆಕಾಶದಿಂದ ಕೆಳಕ್ಕೆ ಬಂದು ಬಭ್ರುವಾಹನನ ಎದೆಯ ಮೇಲೆ ಬಿದ್ದು ಬಳಿಕ ಚಂಡಿನಂತೆ ಪುಟಿ ನೆಗೆದು ಪಾರ್ಥನ ಪಾದಗಳ ಮೇಲೆ ಬಿದ್ದಿತು.

ವೃಷಕೇತುವಿನ ತಲೆಯು ಆ ಯುದ್ಧದಲ್ಲಿ ಬಹು ಸಂತೋಷದಿಂದ ಕೇಶವ, ರಾಮ, ನೃಸಿಂಹ' ಎಂದು ಹರಿನಾಮಸ್ಮರಣೆಯನ್ನು ಮಾಡುತ್ತಿರಲು, ಕುಂಡಲಾಲಂಕೃತವಾದ ಆ ತಲೆಯನ್ನು ಪಾರ್ಥನು ಎರಡು ಕೈಗಳಿಂದಲೂ ತೆಗೆದುಕೊಂಡನು. ಮುಂಡವು ಓಡಾಡುತ್ತ, ಯುದ್ಧದಲ್ಲಿ ಶತ್ರುಗಳನ್ನು ಕೆಡಹುತ್ತ, ಸಂಭ್ರಮದಿಂದ ಕುಣಿದಾಡುತ್ತಿರಲು, ಅರ್ಜುನನು ಆ ರೂಪವನ್ನು ನೋಡಿ, "ಆಹಾ! ಮಗನೇ! ದೊಡ್ಡ ಕಷ್ಟವು ಪ್ರಾಪ್ತವಾಯಿತಲ್ಲಾ! ಎಲೈ ಪುರುಷಶ್ರೇಷ್ಠನೇ! ಯುದ್ಧ ಭೂಮಿಯಲ್ಲಿ ನಾನು ನಿನ್ನನ್ನು ಬಿಟ್ಟು ಹೋಗಿ ಧರ್ಮಾತ್ಮನಾದ ಧರ್ಮರಾಜನಿಗೂ ಕುಂತಿಗೂ ಏನು ಹೇಳಲಿ? 'ನೀನು ಶಿಶುವನ್ನು ರಕ್ಷಿಸಬೇಕು' ಎಂದು ನಮ್ಮ ತಾಯಿಯು ನನ್ನನ್ನು ಶಿಕ್ಷಿಸಿ ಕಳುಹಿಸಿದ್ದಳು. ಈಗ ಆಕೆಗೂ ಭೀಮಸೇನನಿಗೂ ನಕುಲ ಸಹದೇವರಿಗೂ, ನನ್ನ ಪ್ರಿಯನಾದ ಶ್ರೀಕೃಷ್ಣದೇವನಿಗೂ ಏನು ಹೇಳಲಿ? ಯೌವನಾಶ್ವನ ಕುದುರೆಯನ್ನು ನೀನು ಪೌರುಷದಿಂದ ತೆಗೆದುಕೊಂಡು ಬಂದೆಯಲ್ಲವೇ! ಎಲೈ ಮಗನೇ! ಶ್ರೀಕೃಷ್ಣನಿಗೆ ನಾವು ಹೇಗೆ ಪ್ರಾಣವೋ ಹಾಗೆ ಶ್ರೀಕೃಷ್ಣನು ನಿನಗೆ ಪ್ರಾಣವಲ್ಲವೇ? ಹೀಗಿರುವಲ್ಲಿ ಕೃಷ್ಣನು ಎದುರಿಗಿಲ್ಲದೆ ನೀನು ಪ್ರಾಣಗಳನ್ನು ಬಿಟ್ಟುದು ಹೇಗೆ? ನಿನ್ನ ದೇಹವನ್ನು ಆಕಾಶದಲ್ಲಿ ಪಕ್ಷಿಗಳು ತಿಂದು ಹಾಕಿರಬಹುದು. ನಿಮ್ಮ ತಂದೆಯು ಪೂರ್ವದಲ್ಲಿ ಇಂದ್ರನಿಗೆ ತನ್ನ ದೇಹವನ್ನು ಕತ್ತರಿಸಿ ಕೊಟ್ಟಂತೆಯೇ ಅವನ ಮಗನಾದ ನೀನು ಇಂದ್ರಪುತ್ರನಾದ ನನ್ನ ಕಾರ್ಯಕ್ಕಾಗಿ ನಿನ್ನ ದೇಹವನ್ನು ಆಕಾಶದಲ್ಲಿಯ ಪಕ್ಷಿಗಳಿಗೆ ಒಪ್ಪಿಸಿದೆ. ಅನೇಕ ವೇಳೆ ಭೀಮಸೇನನೊಬ್ಬನೇ ಮಹಾಯುದ್ಧಕ್ಕೆ ಹೋಗುತ್ತಾನೆ; ಎರಡನೆಯವನೊಬ್ಬನೂ ಅವನಿಗೆ ಸಹಾಯಕನಾಗಿ ಹೋಗುವುದಿಲ್ಲ. ನೀನು ಪ್ರತಿ ದಿನವೂ ಶತ್ರುಗಳ ಶಿರಸ್ಸೆಂಬ ಕಮಲವನ್ನು ಕೈಯಿಂದ ತೆಗೆದುಕೊಂಡು ಸಂತೋಷದಿಂದ ಪಿತಾಮಹನಾದ ಸೂರ್ಯನಿಗೆ ಅರ್ಘ್ಯಪ್ರಧಾನ ಮಾಡಿದೆ. ಸೂರ್ಯನೂ ಅರ್ಜುನನೂ ಇವರಿಬ್ಬರೂ ಪ್ರಸಿದ್ಧರಾದ ವೀರರಾಗಿದ್ದರು. ನೀನು ಈಗ ಬಿದ್ದು ಹೋದುದರಿಂದ ನಾವಿಬ್ಬರೂ ಬಿದ್ದಂತೆಯೇ ಭಾವಿಸಬೇಕು. ಸೂರ್ಯನು ಆಕಾಶದಲ್ಲಿ ನಿನ್ನ ಯಶಸ್ಸಿನಿಂದ ಸತ್ಕೃತನಾದನು. ನಾನಾದರೋ 'ಕೃಷ್ಣ, ಗೋವಿಂದ' ಎಂದು ಜಪಿಸುತ್ತಿರುವ ಈ ತಲೆಯಿಂದ ಸತ್ಕೃತನಾಗಿದ್ದೇನೆ. ಎಲೈ ಮಗನೇ! 'ನಮ್ಮ ತಂದೆಯು ಯುದ್ಧದಲ್ಲಿ ಅರ್ಜುನನಿಂದ ಹತನಾದನು' ಎಂದು ನನ್ನೊಡನೆ ಈಗ ವೈರವನ್ನುಂಟು ಮಾಡುತ್ತಿರುವೆಯಾ? ಪಾರ್ಥನನ್ನು ಹೀಗೆ ದುಃಖಕ್ಕೆ ಗುರಿಮಾಡಿ ನೀನು ಹೊರಟುಹೋದೆ. ಹಿಂದೆ ನಿಮ್ಮ ತಂದೆಯ ರಥವನ್ನು ಭೂಮಿಯು ನುಂಗಿದಾಗ ಆ ವೀರನು, 'ನೀನು ಮಾತಂಗಾಕ್ರಾಂತಳಾಗಿ ಹೋಗು' ಎಂದು ಭೂಮಿಯನ್ನು ಶಪಿಸಿದನು. ಈಗ ನನಗೆ ಉಪಕಾರವನ್ನು ಮಾಡುವವನೊಬ್ಬನನ್ನೂ ಕಾಣೆನು. ನನ್ನ ಸೈನ್ಯವೆಲ್ಲ ನಾಶವಾಯ್ತು. ಶೂರನೂ ಸುಭದ್ರಾನಂದನನೂ ಆದ ನನ್ನ ಮಗ ಅಭಿಮನ್ಯುವು ಹತನಾದನು. ಈಗ ನನ್ನ ವಂಶವು ನಷ್ಟವಾಯ್ತು. ಕೃಷ್ಣನೂ ನನ್ನನ್ನು ಬಿಟ್ಟನು, ನೀನೂ ಹತನಾಗಲು, ನಿನ್ನನ್ನು ಬಿಟ್ಟು ನನಗೆ ಜಯಲಕ್ಷ್ಮಿಯು ಸೂರ್ಯನಿಲ್ಲದ ಭೂಮಿಯೂ, ದೀಪವಿಲ್ಲದ ಮನೆಯೂ, ಸ್ತ್ರೀತ್ವ ಪುಂಸ್ತ್ವ ಚಿಹ್ನೆಯಿಲ್ಲದ ಮನುಷ್ಯನೂ ಹೇಗೋ ಹಾಗೆ ಶೋಭಿಸದು" ಎಂದು ಹೇಳುತ್ತ, ವೃಷಕೇತುವನ್ನು ಸ್ಮರಿಸಿಕೊಂಡು ಗಟ್ಟಿಯಾಗಿ ಅತ್ತನು. ಹಾಗೆಯೇ "ಎಲೈ

ಕೃಷ್ಣನೇ! ಎಲ್ಲಿರುವೆ? ಸ್ಮರಿಸಿದ ಮಾತ್ರಕ್ಕೆ ಬರುತ್ತಿದ್ದ ನೀನು ದುಃಖಿತನಾಗಿರುವ ನನ್ನನ್ನು ಕಾಣದವನಂತಿರುವೆಯಾದುದರಿಂದ, ಈಗ ನೀನು ನನ್ನನ್ನು ಕೈಬಿಟ್ಟಂತೆ ಕಾಣುವುದು" ಎಂದು ಹಂಬಲಿಸುತ್ತ, ವೃಷಕೇತುವಿನ ತಲೆಯನ್ನು ತನ್ನ ಎದೆಯ ಮೇಲಿಟ್ಟುಕೊಂಡು ಹಾಗೆಯೇ ಮೂರ್ಛಿತನಾಗಿ ನೆಲಕ್ಕೆ ಬಿದ್ದನು.

ಬಳಿಕ, ಚಿತ್ರಾಂಗದೆಯ ಮಗನಾದ ಬಭ್ರುವಾಹನನು ನೆಲಕ್ಕೆ ಬಿದ್ದ ಅರ್ಜುನನನ್ನು ನೋಡಿ ತನ್ನ ಬಿಲ್ಲಿನ ತುದಿಯಿಂದ ಬಡಿದು ನಗುತ್ತ, "ಎಲೈ ಪಾರ್ಥನೇ! ವೈಶ್ಯರು ತೂಕ ಮಾಡುವುದಕ್ಕಾಗಿ ಬಂದಿದ್ದಾರೆಯಲ್ಲಾ! ನಾನು ಯುದ್ಧ ಸಮುದ್ರದಲ್ಲಿ ಕೀರ್ತಿನಾವೆಯನ್ನು ಹತ್ತಿರುವೆನು. ವೀರರೆಲ್ಲರ ಶಿರಸ್ಸುಗಳಲ್ಲಿ ಭಾರವಾದುವನ್ನೂ ಹಗುರವಾದುವುಗಳನ್ನೂ ತೂಗಿದುದಾಯ್ತು. ಈ ವೃಷಕೇತುವಿನ ಚಿತ್ರವಾದ ಶಿರಸ್ಸನ್ನು ಮಹಾದೇವನಿಗಾಗಿ ಶಿವಲಿಂಗಕ್ಕೆ ಸಮರ್ಪಿಸು, ಏಳು! ಹರನು ಸಂತುಷ್ಟನಾಗಿ ನಿನಗೆ ಪಾಶುಪತಾಸ್ತ್ರವನ್ನು ಕೊಟ್ಟು ಯುದ್ಧಕ್ಕಾಗಿ ನೀನು ಅದನ್ನು ಸ್ಮರಿಸಿಕೊಳ್ಳುವಂತೆ ಮಾಡುವನು. ಆದರಿಂದ ನೀನು ಯುದ್ಧದಲ್ಲಿ ನಾಶ ರಹಿತನಾಗುವೆ" ಎಂದನು.

ಬಳಿಕ, ಬಲಿಷ್ಠನಾದ ಅರ್ಜುನನು ಎಚ್ಚತ್ತು ಕುಪಿತನಾಗಿ, ಆ ತಲೆಯನ್ನು ತನ್ನ ರಥದಲ್ಲಿಟ್ಟು, ಧನುವನ್ನು ಹಿಡಿದು, ಶೂರನಾದ ತನ್ನ ಮಗನನ್ನು ಕುರಿತು, "ಎಲೈ ಬಭ್ರುವಾಹನನೇ! ರುದ್ರರೂಪನಾದ ನನ್ನನ್ನು ನೋಡಿ ತಪ್ಪಿಸಿಕೊಂಡು ನೀನು ಎಲ್ಲಿ ಹೋಗುವೆ? ನಮ್ಮ ವೃಷಕೇತುವನ್ನು ನೀನು ಪರಾಕ್ರಮದಿಂದ ಕೊಂದ ಮೇಲೆ ನೀನು ಬದುಕುವುದೆಂದರೇನು? ಬಾಣವನ್ನು ತೆಗೆದುಕೊ. ನನ್ನ ಏಟನ್ನು ಸಹಿಸು. ನಾನು ಪರ್ವತವನ್ನು ಭೇದಿಸುವೆನು" ಎಂದು, ಮೇಘವು ಮಳೆಯನ್ನು ಸುರಿಸುವಂತೆ ಬಾಣಗಳನ್ನು ಬಿಟ್ಟನು. ಅವು ಬಭ್ರುವಾಹನನ ಪ್ರಬಲವಾದ ಬಲವನ್ನು ಅವನೆದುರಿಗೆ ಭೇದಿಸಿತು. ಮಹಾಬಲನಾದ ಪಾರ್ಥನು ಆ ಶೂರನ ಶರೀರವನ್ನು ಭೇದಿಸಿ ಗುಡುಗಿನಂತೆ ಭಯಂಕರವಾದ ಸಿಂಹನಾದವನ್ನು ಮಾಡಿದನು. ಅರ್ಜುನನ ಬಾಣಗಳು ಹಾರಿಸಿಕೊಂಡು ಹೋದ ಆನೆಗಳೂ ಕುದುರೆಗಳೂ ರಥಗಳೂ ಪದಾತಿಗಳೂ ಆಕಾಶದಲ್ಲಿ ಗುಡಿಗಟ್ಟಿ ನಿಂತುವು. ಕೋಟೆಯ ಗೋಡೆಗಳನ್ನೊಡೆದುಹಾಕುವ ಆ ಪಾರ್ಥನ ಬಾಣಗಳು ಲೋಕವನ್ನೆಲ್ಲ ವ್ಯಾಪಿಸಿದುವು. ಚಂಡಮಾರುತವು ಬೀಸಿ ನೆಲದಿಂದ ತರಗೆಲೆಗಳನ್ನು ಹುಲ್ಲುಕಡ್ಡಿಗಳನ್ನೂ ಹೊಡೆದುಕೊಂಡು ಹೋಗಿ ಆಕಾಶದಲ್ಲಿ ಸುತ್ತಿಸುವಂತೆ, ಅರ್ಜುನನು ಬಾಣಗಳಿಂದ ಆ ಸೈನ್ಯವನ್ನು ಸುತ್ತಿಸಿದನು. ಅರ್ಜುನನ ಯುದ್ಧದಲ್ಲಿ ಅವನ ಬಾಣವರ್ಷದಿಂದ ಸತ್ತುಬಿದ್ದು ಹೋದ ದೇಹಗಳು ಅವನ ತೇಜಸ್ಸಿನಿಂದ ಉರಿದುಹೋದುವು. ಅವರ ಶರಪುಂಖದಿಂದ ಹುಟ್ಟಿದ ವಾಯುವು ಧೂಳಿಯನ್ನು ಹೊಡೆದುಕೊಂಡು ಹೋಗುತ್ತಿದ್ದಿತು. ಸೇನಾಸಮೇತನಾದ ಆ ಪಾಂಡವನು ಕೊಂದ ಕುದುರೆಗಳನ್ನೂ ಜನರನ್ನೂ ಅವನು ಪ್ರಬಲವಾದ ಬಡಬಾಗ್ನಿಯಂತೆ ಸುಟ್ಟನು. ಕಾಶಿಯಲ್ಲಿ ಭವಭೀತರಾದ ಜನರು ತಮ್ಮ ಮರಣ ಕಾಲದಲ್ಲಿ ಈಶ್ವರದರ್ಶನ ಮಾಡಿ ಹೇಗೆ ಮೋಕ್ಷವನ್ನು ಪಡೆವರೋ, ಹಾಗೆ ಯುದ್ಧದಲ್ಲಿ ಅರ್ಜುನನನ್ನು ನೋಡಿದ ವೀರರೆಲ್ಲರೂ

ದೇಹಾವಸಾನವನ್ನು ಪಡೆದು ಮೋಕ್ಷವನ್ನು ಹೊಂದಿದರು. ಬಲಿಷ್ಠನಾದ ಅರ್ಜುನನು ಕ್ರೂರವಾದ ಬಾಣಗಳಿಂದ ಬಭ್ರುವಾಹನನನ್ನು ಮುಚ್ಚಿ ಆರ್ಭಟಿಸಿದನು. ಅರ್ಜುನನು ಬಾಣವನ್ನು ತೆಗೆದುಕೊಳ್ಳುವುದು, ಹೂಡುವುದು, ಬಿಡುವುದು- ಇವುಗಳನ್ನು ಜನರು ತಿಳಿಯಲಾರದೆ ಅದನ್ನು ಪ್ರಳಯವೆಂದು ತಿಳಿದು, ಅವನ ತೇಜಸ್ಸಿಗೊಳಗಾಗಿ ಬಿದ್ದು ಹೋದರು.

ಬಳಿಕ, ಬಭ್ರುವಾಹನನು ಕ್ರುದ್ಧನಾಗಿ ತೀಕ್ಷ್ಣಗಳಾದ ನಾಲ್ಕು ಬಾಣಗಳಿಂದ ಅರ್ಜುನನನ್ನೂ, ಮೂರು ಬಾಣಗಳಿಂದ ಸಾರಥಿಯನ್ನೂ ಕುದುರೆಗಳನ್ನೂ, ಒಂದರಿಂದ ಛತ್ರವನ್ನೂ, ಏಳರಿಂದ ಹನುಮಂತನನ್ನೂ ಹೊಡೆದನು. ಹೀಗೆ ಅವರಿಬ್ಬರೂ ಜಯಾಪೇಕ್ಷೆಯಿಂದ ಮಹಾಯುದ್ಧವನ್ನು ಮಾಡುತ್ತಿದ್ದರು. ಆಗ ಬಭ್ರುವಾಹನನು ಅರ್ಜುನನನ್ನು ಕುರಿತು, "ಎಲೈ ಪಾರ್ಥನೇ! ಪೂರ್ವದಲ್ಲಿ ನೀನು ದ್ರೋಣನಿಂದಲೂ ದೇವತೆಗಳಿಂದಲೂ ಶಿಕ್ಷಿತನಾಗಿ ಅಸ್ತ್ರಗಳನ್ನು ಪಡೆದೆಯಷ್ಟೆ! ಅವೆಲ್ಲವೂ ಈಗ ಏಕೆ ವ್ಯರ್ಥವಾದುವು? ಎಲೈ ಮೂಢನೇ! ನಿನ್ನ ಸಾರಥಿಯು ಏಕೆ ಬರಲಿಲ್ಲವೆಂಬುದನ್ನು ನೀನರಿಯೆ. ಬುದ್ಧಿಹೀನನಾದ ನೀನು ಪತಿವ್ರತೆಯಾದ ನಮ್ಮ ತಾಯಿಯನ್ನು ದೂಷಿಸಿದೆ. ಸತ್ಪುರುಷರಿಗೆ ಮಾಡಿದ ಅಪರಾಧವು ಭಯಂಕರವಾದುದು. ಹಿಂದೆ ನೀನು ಎಲ್ಲೆಲ್ಲಿ ಯುದ್ಧ ಮಾಡುತ್ತ ಸ್ಮರಿಸಿದರೂ ಅಲ್ಲಲ್ಲಿ ಕೃಷ್ಣನು ಕೂಡಲೆ ಬಂದು ಸೇರುತ್ತಿದ್ದನು. ಮಹಾತ್ಮನಾದ ಆ ವಿಷ್ಣುವಿನ ಸ್ಮರಣೆಯನ್ನು ಈಗ ನೀನು ಮರೆತೆ. ಈಗಲೂ ನೀನು ಅವನನ್ನು ಸ್ಮರಿಸುವವರೆಗೂ ನಾನು ನಿರೀಕ್ಷಿಸುತ್ತೇನೆ; ಯುದ್ಧವನ್ನು ಮಾಡುವುದಿಲ್ಲ. ಕೃಷ್ಣನ ಸ್ಮರಣೆಯನ್ನು ಮರೆತವರಿಗೆ ಅಡಿಗಡಿಗೆ ದೊಡ್ಡ ಹಾನಿಯುಂಟಾಗುವುದು. ಶ್ರೀಕೃಷ್ಣನು ನಿರ್ಮ್ಮರ್ಯಾದೆಯನಾದುದರಿಂದ ನೀನು ಅವನನ್ನು ನೆನೆ, ವೃಥಾ ಗರ್ವಪಡಬೇಡ. ಎಲೈ ಇಂದ್ರನಂದನನೇ! ಮಹಾತ್ಮನಾದ ಕರ್ಣಪುತ್ರನು ಹಿಂದೆ ನನ್ನ ಮೇಲೆ ಹೇಗೆ ಯುದ್ಧ ಮಾಡಿದನೋ ನೀನೂ ಹಾಗೆ ಯುದ್ಧಮಾಡಿ ನನಗೆ ನಿನ್ನ ಶೌರ್ಯವನ್ನು ತೋರಿಸು. ವೃಷಕೇತುವು ಯುದ್ಧದಲ್ಲಿ ಶೂರನು. ಅವನೂ ಈಗ ಸ್ವರ್ಗಸ್ಥನಾದನು" ಎಂದನು.

ಬಭ್ರುವಾಹನನಾಡಿದ ಮಾತುಗಳನ್ನು ಕೇಳಿ ಪಾರ್ಥನು ಕುಪಿತನಾಗಿ ಭ್ರಾಂತಿಯನ್ನುಳಿದು ಸುವರ್ಣಾಲಂಕೃತವಾಗಿದ್ದ ಭಲ್ಲಾಯುಧಗಳಂತೆ ತೀಕ್ಷ್ಣಗಳಾದ ಬಾಣಗಳನ್ನು ತೆಗೆದುಕೊಂಡು ನಸುನಗುತ್ತ ರಥಾರೂಢನಾಗಿದ್ದ ಶೂರನಾದ ತನ್ನ ಮಗನನ್ನು ಹೊಡೆಯಲು, ಅಗ್ನಿಸದೃಶಗಳಾದ ಆ ಬಾಣಗಳು ತನ್ನ ಮೇಲೆ ಬಂದು ಬಿದ್ದರೂ ಅವನು ಯುದ್ಧವನ್ನು ಬಿಡಲಿಲ್ಲ. ಅತ್ಯುಗ್ರನಾದ ಆ ಬಭ್ರುವಾಹನನು ಬಾಣಗಳಿಂದ ಆಕಾಶವನ್ನು ತುಂಬಿ, ಅರ್ಜುನನನ್ನೂ ಹರಿತವಾದ ಬಾಣಗಳಿಂದ ಹೊಡೆದು ವ್ಯಥೆಪಡಿಸಿದನು. ಪಾರ್ಥನು ಗಂಗಾಶಾಪದಿಂದ ಮೋಹಿತನಾಗಿ ಕರ್ತವ್ಯವನ್ನು ಮರೆತನು. ತಾನು ಯಾವ ಯಾವ ಅಸ್ತ್ರಗಳನ್ನು ಪ್ರಯೋಗಿಸಿದರೂ ಅವುಗಳನ್ನೆಲ್ಲ ಅವನ ಮಗನು ಕತ್ತರಿಸುತ್ತ ಬಂದನು. ಅಷ್ಟರಲ್ಲಿ, ಶತ್ರುಸಂಹಾರಕನಾದ ಬಭ್ರುವಾಹನನು ಕ್ರುದ್ಧನಾಗಿ ಬಡಬಾಗ್ನಿಯಂತೆ ಉರಿಯನ್ನು ಕಾರುತ್ತ, ಯಮನಿಗೆ ಸಮಾನವಾದ ಅರ್ಧಚಂದ್ರ ಬಾಣವನ್ನು ತೆಗೆದುಕೊಂಡು

ತನ್ನ ಧನುವಿನಲ್ಲಿ ಸಂಧಾನ ಮಾಡಿದನು. ಆಗ, ಇಂದ್ರಾದಿದೇವತೆಗಳೂ ಪಿತೃಗಳೂ ಸೂರ್ಯಾದಿ ಗ್ರಹಗಳೂ ಭುಜಂಗರೂ ಹೆದರಿ ಗಡಗಡನೆ ನಡುಗಿದರು; ಭೂಮಿಯು ಎರಡು ಭಾಗವಾಗಿ ಬಿರಿದು ಹೋಯಿತು; ಉಲ್ಕಾಪಾತವುಂಟಾಯಿತು; ಚಂಡಮಾರುತವು ಮಳಲನ್ನೆರಚುತ್ತ ಭಯಂಕರವಾಗಿ ಬೀಸಿತು; ಮೇಘಗಳು ರಕ್ತವರ್ಷವನ್ನು ಸುರಿಸಿದುವು; ಅರ್ಜುನನು ಪ್ರಳಯಾಗ್ನಿಗೆ ಸಮಾನವಾದ ಆ ಬಾಣವನ್ನು ನೋಡಿ, ಭಯಂಕರಗಳಾದ ತನ್ನ ಬಾಣಗಳಿಂದಲೂ ಅದನ್ನು ಶಾಂತಿಗೊಳಿಸಲು ಸಮರ್ಥನಾಗದೆ, ಶ್ರೀಕೃಷ್ಣನನ್ನು ಧ್ಯಾನಿಸುತ್ತಿರುವಷ್ಟರಲ್ಲಿ, ಆ ವೇಗವುಳ್ಳ ಬಾಣವು ಕರ್ಣಕುಂಡಲದಿಂದ ಹೊಳೆಯುತ್ತಿರುವ ಅವನ ತಲೆಯನ್ನು ಕತ್ತರಿಸಿ ನೆಲಕ್ಕೆ ಕೆಡಹಿತು. ಬಳಿಕ, ವೃಷಕೇತುವಿನ ತಲೆಯೂ ಅನೇಕ ರತ್ನಭೂಷಿತವಾದ ಆ ಅರ್ಜುನನ ದೇಹವೂ ಆ ರಣಾಂಗಣದಲ್ಲಿ ಬಿದ್ದು ಹೋದುವು. ಕಾರ್ತಿಕಮಾಸದ ಏಕಾದಶೀ ಬುಧವಾರದ ದಿವಸ ಪ್ರದೋಷಕಾಲದಲ್ಲಿ ಉತ್ತರಾ ನಕ್ಷತ್ರದಲ್ಲಿ, ಅರ್ಜುನನ ತಲೆಯು ಹರಿನಾಮಸ್ಮರಣೆ ಮಾಡುತ್ತ ಕತ್ತರಿಸಿ ಬಿದ್ದು ಕ್ಷಣಕಾಲದಲ್ಲಿ ಬೇರೆ ಮುಖದಂತೆ ಕಳಾಹೀನವಾಯಿತು. ವೃಷಕೇತು ಧನಂಜಯರ ಎರಡು ತಲೆಗಳನ್ನೂ ನೋಡುತ್ತಿದ್ದ ಜನರೆಲ್ಲರೂ ಮರುಗುತ್ತ, ಇಬ್ಬರು ಸೂರ್ಯರು ನೆಲಕ್ಕೆ ಬಿದ್ದಂತೆ ಭಾವಿಸಿದರು.

ಆಗ ಚಿತ್ರಾಂಗದೆಯು ಯುದ್ಧವಾರ್ತೆಯನ್ನೂ, ಅರ್ಜುನನಿಗೆ ಶಾಪ ಬಂದಿರುವುದನ್ನೂ ನಾರದರಿಂದ ತಿಳಿದು, ಧರ್ಮರಾಜನ ಅಪ್ಪಣೆಯಿಲ್ಲದೆಯೇ, ಅಲ್ಪ ಪರಿವಾರದೊಡನೆ ರಥಾರೂಢಳಾಗಿ ಮಣಿಪುರಕ್ಕೆ ಬಂದಳು. ಆಗ ಭಯಂಕರವಾದ ಹಾಹಾಕಾರವುಂಟಾಯಿತು. ಬಭ್ರುವಾಹನನ ಸೈನ್ಯದಲ್ಲಿ ಮಹಾ ಹರ್ಷವುಂಟಾಗಲು, ವಾದ್ಯಗಳು ಭೋರ್ಗರೆಯುತ್ತಿದ್ದುವು. ಕನ್ಯೆಯರು ಸಂತೋಷದಿಂದ ಹೂಮಳೆಗರೆದರು. ತಮ್ಮೊಡೆಯನ ವಿಜಯಕ್ಕಾಗಿ ವಂದಿಗಳು ಆ ಬಭ್ರುವಾಹನನ ಪೌರುಷನನ್ನು ಹೊಗಳುತ್ತ ಬಂದರು. ಯುದ್ಧದಲ್ಲಿ ಬಂಧು ಬಳಗದವರ ಪ್ರೇಮವನ್ನೇ ಮರೆತುಬಿಟ್ಟಿದ್ದ ದೊರೆಯಾದ ಬಭ್ರುವಾಹನನೂ ಸಂತುಷ್ಟನಾಗಿ, ಪತಾಕೆಗಳಿಂದ ವಿರಾಜಮಾನವಾಗಿಯೂ, ಗಂಧೋದಕವನ್ನು ತಳಿದು ಹೂಗಳನೆರಚಿದುದರಿಂದ ಅಲಂಕೃತವಾಗಿಯೂ, ಎಲ್ಲೆಡೆಗಳಲ್ಲಿಯೂ ನರ್ತಿಸುತ್ತಿರುವ ಸ್ತ್ರೀಯರಿಂದ ರಮ್ಯವಾಗಿಯೂ ಇರುವ ತನ್ನ ಪಟ್ಟಣವನ್ನು ಹೊಕ್ಕನು. ಗೋರೋಚನ, ದಧಿ, ದೂರ್ವ, ಕುಂಕುಮ-ಇವುಗಳಿಂದ ಕೂಡಿದ ಆರತಿಗಳನ್ನು ಹಿಡಿದು ದಿವ್ಯಾಂಬರಾಲಂಕೃತರಾದ ಸ್ತ್ರೀಯರು ಪುತ್ರ ಸಮೇತರಾಗಿ ಬಂದು ಉಲೂಪಿಗೂ ಬಭ್ರುವಾಹನನಿಗೂ ನೀರಾಜನವನ್ನು ಮಾಡಿದರು. ಆ ಸ್ತ್ರೀಯರು ಚಿತ್ರಾಂಗದೆಯನ್ನು ಕುರಿತು, "ಎಲೈ ದೇವೀ! ಮಹಾಬಲನಾಗಿಯೂ ವೀರನಾಗಿಯೂ ಇರುವ ಮಗನನ್ನು ಪಡೆದಿರುವುದರಿಂದ ನೀನು ಧನ್ಯಳು. ಲೋಕದಲ್ಲಿ ಸರ್ವದಾ ವಿಜಯಿಯೆನಿಸಿಕೊಂಡಿದ್ದ ಅರ್ಜುನನನ್ನು ನಿನ್ನ ಮಗನು ಸಂಹರಿಸಿದನಷ್ಟೆ!" ಎಂದು ಹೇಳಿದರು. ದಿವ್ಯಾಲಂಕಾರಭೂಷಿತಳಾಗಿ ಮಗನಿಗೆ ಆರತಿಯನ್ನೆತ್ತುವುದಕ್ಕಾಗಿ ಬರುತ್ತಿದ್ದ ಚಿತ್ರಾಂಗದೆಯು ಅವರ ಮಾತನ್ನು ಕೇಳಿ ಹಾಗೆಯೇ ಬಿದ್ದುಹೋದಳು. ಆಗ ಬಭ್ರುವಾಹನನ ಮನೆಯಲ್ಲಿ, ಮಹಾ ಸಂತೋಷ ಸಂದರ್ಭದಲ್ಲಿ ದುಃಖವು ಬಂದೊದಗಿತು. ಆ

ಮನೆಯಲ್ಲಿದ್ದ ಸ್ತ್ರೀಯರೆಲ್ಲರೂ ತಮ್ಮೊಡತಿಯು ಬಿದ್ದುದನ್ನು ನೋಡಿ ಆಕೆಯ ಸುತ್ತಲೂ ಸುತ್ತಿಕೊಂಡು ಅಳುತ್ತ, ಆಕೆಗೆ ಶೀತಳವಾದ ಚಂದನೋದಕವನ್ನು ತಳಿದು ಬೀಸಣಿಗೆಯಿಂದ ಬೀಸುತ್ತ, ಮುಷ್ಟಿಯಿಂದ ಎದೆಯನ್ನು ಚಚ್ಚಿಕೊಳ್ಳುತ್ತಿದ್ದರು. ಅವರಲ್ಲೊಬ್ಬಳು ಬಭ್ರುವಾಹನನ ಬಳಿಗೆ ಹೋಗಿ, "ಎಲೈ ನರಶ್ರೇಷ್ಠನೇ! ನಿಮ್ಮ ತಾಯಿಯು ನೆಲಕ್ಕೆ ಬಿದ್ದುಹೋಗಿರುವಳು. ಅದಕ್ಕೆ ಕಾರಣವೇನೋ ನಮಗೆ ತಿಳಿಯದು. ಆಕೆಯನ್ನೂ ಉಲೂಪಿಯನ್ನೂ ಬೇಗನೆ ಬಂದು ಎಚ್ಚರಗೊಳಿಸು. ನಿನಗೆ ಶುಭವಾಗಲಿ" ಎಂದು ಹೇಳಿದಳು.

ಬಭ್ರುವಾಹನನು ರಥದಿಂದಿಳಿದು ಬಂದು ಕಂಠಸೂತ್ರವೂ ಕಿವಿಯ ಓಲೆಗಳೂ ಇಲ್ಲದೆ ಉರಗಿಗಳೋಪಾದಿಯಲ್ಲಿ ದುಃಖದಿಂದ ನಿಟ್ಟುಸಿರನ್ನು ಬಿಡುತ್ತಿದ್ದ ತನ್ನ ತಾಯಿಯರಾದ ಚಿತ್ರಾಂಗದೆಯನ್ನೂ ಉಲೂಪಿಯನ್ನೂ ನೋಡಿ ಅವರಿಬ್ಬರನ್ನೂ ಮೇಲಕ್ಕೆಬ್ಬಿಸಿ ಕಣ್ಣುಗಳನ್ನೊರಸಿ, ಅಸುವಿರುವುದನ್ನು ಕಂಡು ಸಂತೋಷದಿಂದ, "ನನ್ನ ತಾಯಿಯರಾದ ನೀವಿಬ್ಬರೂ ಇಂತಹ ಸಂತೋಷಕಾಲದಲ್ಲಿ ನೆಲಕ್ಕೆ ಬೀಳಲು ಕಾರಣವೇನು? ನಾನು ಕುದುರೆಗಾಗಿ ಯುದ್ಧ ಮಾಡಿದೆನು. ಅರ್ಜುನನೆಂಬುವನು ಅಶ್ವ ರಕ್ಷಣೆಗಾಗಿ ಪ್ರದ್ಯುಮ್ನನೇ ಮೊದಲಾದ ಶೂರರಾಗಿಯೂ ಧೀರರಾಗಿಯೂ ಇರುವ ಯೋಧರೊಡನೆ ಬಂದಿದ್ದನು. ನಾನು ಯುದ್ಧದಲ್ಲಿ ಅವರೆಲ್ಲರನ್ನೂ ಜಯಿಸಿ ಪಾರ್ಥನನ್ನು ಸಂಹರಿಸಿದೆನು. ಶೂರರೆಲ್ಲರಿಗೂ ಶೂರನಾಗಿಯೂ ಬಾಲನಾಗಿಯೂ ಇದ್ದ ಕರ್ಣನ ಮಗನಾದ, ಮಹಾಬಲಶಾಲಿಯೆಂದು ಪ್ರಸಿದ್ಧನಾದ, ವೃಷಕೇತುವು ನನ್ನನ್ನು ರಣಾಂಗಣದಲ್ಲಿ ಮೋಹಗೊಳಿಸಿದನು. ಪರಿಶುದ್ಧನಾದ ಅವನನ್ನು ನಾನು ಬಹು ಕಷ್ಟತರವಾಗಿ ಯುದ್ಧದಲ್ಲಿ ಕೊಂದೆನು. ಎಲೈ ಜನನಿಯೇ! ಮಾಂಗಲ್ಯಸೂತ್ರವನ್ನೂ ಕರ್ಣಭೂಷಣಗಳಾದ ತಾಟಂಕಗಳನ್ನೂ ತೆಗೆದುಕೊ. ನಿನ್ನ ರೂಪವು ಅಲಂಕಾರರಹಿತವಾಗಿರುವುದರಿಂದ ಅಮಂಗಳಕರವಾಗಿರುವುದು" ಎಂದನು.

ಅದಕ್ಕೆ ಚಿತ್ರಾಂಗದೆಯು, "ಎಲೈ ಮಗನೇ! ಪಾಪರೂಪನಾದ ನೀನು ಈಗ ಎಂತಹ ಕೆಲಸವನ್ನು ಮಾಡಿದೆ! ಧರ್ಮರಾಜನಿಗೆ ತಮ್ಮನಾಗಿಯೂ, ಶ್ರೀಕೃಷ್ಣನ ಪ್ರಿಯ ಮಿತ್ರನಾಗಿಯೂ, ಕುಂತಿಗೆ ಐರಾವತವನ್ನು ತಂದು ಕೊಟ್ಟವನಾಗಿಯೂ, ಶ್ರೇಷ್ಠನಾಗಿಯೂ ಇದ್ದ ನಿಮ್ಮ ತಂದೆಯಾದ ಅರ್ಜುನನನ್ನು ಕೊಂದು ನೀನು ನನ್ನ ಅಲಂಕಾರವನ್ನೂ ನಾಶಮಾಡಿದೆ, ಕಂಠಸೂತ್ರವನ್ನೂ ಅಪಹರಿಸಿದೆ; ನನ್ನ ಓಲೆಯು ನಷ್ಟವಾಯಿತು. ಎಲೈ ಮೂಢನೇ! ಮಾತನಾಡುವುದಕ್ಕೆ ನಾಚಿಕೆಯಾಗುವುದಿಲ್ಲವೇ? ಪಾರ್ಥನನ್ನು ಯುದ್ಧದಲ್ಲಿ ಕೊಂದ ನಿನ್ನ ತೇಜೋಬಲಗಳನ್ನು ಸುಡಬೇಕು. ಈಗ ಯಜ್ಞ ನಷ್ಟವಾದುದರಿಂದ ಬ್ರಾಹ್ಮಣರೊಡನೆ ಯಜ್ಞ ದೀಕ್ಷಿತನಾಗಿದ್ದ ಧರ್ಮಾತ್ಮನಾದ ಧರ್ಮನಂದನನು ಯಾವ ಅವಸ್ಥೆಯನ್ನು ಹೊಂದುವನೋ? ಕುಂತಿಯ ಮೊಮ್ಮಗನಾದ ನೀನು ಆಕೆಯು ಪಾರ್ಥನನ್ನಗಲುವಂತೆ ಮಾಡಿದೆ. ವಿನಯಸಂಪನ್ನನಾದ ಆ ಪಾರ್ಥನ ಮಗನಾದ ನಿನ್ನ ಮನಸ್ಸು ನಿಮ್ಮ ತಂದೆಯ ವಿಷಯದಲ್ಲಿ ಕೃಪಾಹೀನವಾದುದು ಹೇಗೆ? ಶೂರನಾದ ನನ್ನ ಪತಿಯು ಅನ್ಯಾಯವಾಗಿ ನಿನ್ನಿಂದ ಹತನಾದನು! ನೀನು ನನ್ನೊಡನೆ ಆಲೋಚಿಸದೆ ಹೇಗೆ ಯುದ್ಧ ಮಾಡಿದೆ? ಎಲೈ ಪಿತೃಘಾತಕನೇ! ನೀನು ಸಂಗ್ರಹಿಸಿದ ಅಸ್ತ್ರಗಳು ನಿನ್ನ

ಎದೆಯನ್ನು ಏಕೆ ಭೇದಿಸಲಾರದೆ ಹೋದುವು? ಎಲೈ ದುರ್ಮತಿಯೇ! ಕರ್ಣಾಭರಣವನ್ನು ಕಿತ್ತುಹಾಕಿ, ನನ್ನ ಕೊರಲಿಗೆ ಕಗ್ಗಲಿಯ ಮರದ ಬೆಂಕಿಯಿಂದ ಕಾಯ್ದ ಸಂಕಲೆಯನ್ನೂ, ಕಿವಿಗೆ ಕಬ್ಬಿಣದ ಸಲಾಕಿಯನ್ನೂ ಬೇಗನೆ ಹಾಕು. ನನ್ನ ಪತಿಯು ಬಿದ್ದಿರುವೆಡೆಯನ್ನು ಬೇಗನೆ ತೋರಿಸು. ನಾನೂ ಅವನ ಸಂಗಡ ಹೋಗುವೆನು" ಎಂದು ಹೇಳಿ ಭೂಷಣಗಳನ್ನು ಪರಿತ್ಯಾಗಮಾಡಿ ಪಾರ್ಥನಿದ್ದ ಸ್ಥಳಕ್ಕೆ ಹೊರಟಳು.

ಆಗ ಉಲೂಪಿಯು ಅವಳನ್ನು ತಡೆದು, "ಎಲೌ ದೇವೀ! ಪಾರ್ಥನ ಮರಣ ವಿಷಯದಲ್ಲಿ ನನಗೆ ಸಂಶಯವುಂಟಾಗಿದೆ. ಅದಕ್ಕಾಗಿ ನಾನು ನಮ್ಮ ವನಕ್ಕೆ ಹೋಗಿ ನೋಡುವೆನು. ಹಿಂದೆ ಪಾರ್ಥನು, 'ಆ ವನದಲ್ಲಿರುವ ಐದು ದಾಳಿಂಬೆಯ ಗಿಡಗಳು ಯಾವಾಗ ಸುಟ್ಟು ಹೋಗುವುವೋ ಆಗ ತನಗೆ ಮರಣವೆಂದು ತಿಳಿ' ಎಂದು ಹೇಳಿದ್ದನು. ಈ ಸಂಕೇತವನ್ನು ತಿಳಿಯೋಣ ಬಾ!" ಎಂದು ಅವಳನ್ನೂ ಕರೆದುಕೊಂಡು ಹೋಗಿ, ಆ ವನದಲ್ಲಿ ಬೆಂಕಿಯಿಲ್ಲದೆ ಸುಟ್ಟುಹೋಗಿರುವ ಐದು ದಾಳಿಂಬೆಯ ಗಿಡಗಳನ್ನು ನೋಡಿ, ಆ ನಾಗ ಕನ್ಯೆಯು "ಹಾ! ನಾಥಾ!" ಎಂದು ಪ್ರಳಾಪಿಸುತ್ತ, ಚಿತ್ರಾಂಗದೆಯೊಡನೆ ಅಲ್ಲಿಂದ ಹೊರಟು, ಸೇನಾಸಮೇತಳಾಗಿ ಮಗನನ್ನು ಕರೆದುಕೊಂಡು, ದೀಪಗಳನ್ನು ತೆಗೆಯಿಸಿಕೊಂಡು ಅರ್ಜುನನ ತಲೆಯು ಬಿದ್ದಿದ್ದ ಸ್ಥಳಕ್ಕೆ ಬಂದು, ಅಲ್ಲಿ ತಲೆಗೆದರಿ ಮಲಿನನಾಗಿ ಬಿದ್ದಿದ್ದ ಪಾರ್ಥನನ್ನು ನೋಡಿ, ತಲೆಯು ಕತ್ತರಿಸಿ ಬಿದ್ದಿದ್ದ ವಿಷ್ಣುಭಕ್ತನಾದ ಆ ಅರ್ಜುನನ ಪಾದಗಳ ಮೇಲೆ ಬಿದ್ದು, "ನಾಥನೇ! ನನ್ನ ದೇಹವು ಹೋಯಿತು. ನನಗೆ ನಿನ್ನ ಪಾದಸ್ಪರ್ಶವುಂಟಾಗಲಿ. ನಿನ್ನ ಪಾದ ಸ್ಪರ್ಶದಿಂದ ದೇಹಸಹಿತಳಾಗಿ ನಿನ್ನೊಡನೆ ಉತ್ತಮಗತಿಯನ್ನು ಪಡೆವೆನು. ನನ್ನ ಮಗನು ಮಾಡಿದ ಅವಮಾನದಿಂದ ನೀನು ಕುಪಿತನಾಗಿದ್ದರೆ ಈಗ ನಾನು ನಿನ್ನ ಸೇವೆಯನ್ನು ಮಾಡುತ್ತೇನೆ, ಕ್ಷಮಿಸು. ವಿರಾಟರಾಜನ ಗೋವುಗಳನ್ನು ಕೌರವರು ಅಪಹರಿಸುತ್ತಿದ್ದಾರೆ, ಅವನ್ನು ಹಿಂದಿರುಗಿಸು ಏಳು! ಎಲೈ ಅರ್ಜುನನೇ! ದ್ರೋಣನಿಗೆ ಅವಮಾನ ಮಾಡಿದ ದ್ರುಪದನನ್ನು ಕಟ್ಟಿ ತಂದು ಆತನಿಗೆ ಏಕೆ ತೋರಿಸದಿರುವೆ? ದ್ರೌಪದಿಯ ಸ್ವಯಂವರಕ್ಕಾಗಿ ವೀರರೆಲ್ಲರೂ ಬಂದಿರುವರು. ನೀನು ಮತ್ಸ್ಯಯಂತ್ರವನ್ನು ಭೇದಿಸಿ ಆಕೆಯನ್ನು ಕರೆದುಕೊಂಡು ಬಾ. ನಾನು ನಿನ್ನೆದುರಿಗೆ ಸವತಿಯು ಮಾತ್ಸರ್ಯವನ್ನೆಂದಿಗೂ ತೋರಿಸುವಳಲ್ಲ. ಇದೋ! ಅಗ್ನಿಯು ನಿನ್ನನ್ನು ಖಾಂಡವವನವನ್ನು ಕೇಳಿಕೊಳ್ಳಲು ಬಂದಿರುವನು. ಪುನಃ ಆ ವನಕ್ಕೆ ಶರಪಂಜರವನ್ನು ಕಟ್ಟು. ಕಪಟ ಕಿರಾತ ವೇಷಧರನಾದ ಪರಮೇಶ್ವರನು ನಿನಗೆ ಸೇರಿದ ಮಹಾ ವರಾಹವನ್ನು ತೆಗೆದುಕೊಂಡು ಹೋಗುತ್ತಿರುವನು" ಎಂದು ಹೀಗೆ ಪ್ರಲಾಪಿಸುತ್ತ ಆ ಉಲೂಪಿಯೂ ಚಿತ್ರಾಂಗದೆಯೂ ಪಾರ್ಥನ ತಲೆಯನ್ನೂ, ಕುಂಡಲಸಹಿತವಾದ ವೃಷಕೇತುವಿನ ತಲೆಯನ್ನೂ ಹಿಡಿದುಕೊಂಡು ಮೇಘ ಧ್ವನಿಯಂತೆ ಗಟ್ಟಿಯಾದ ಶಬ್ದದಿಂದ ಅಳುತ್ತಿದ್ದರು. "ಎಲೈ ಮಹಾಬಾಹುವಾದ ವೃಷಕೇತುವೇ! ಪಾರ್ಥನು ಯುದ್ಧದಲ್ಲಿ ನಿಮ್ಮ ತಂದೆಯನ್ನು ಕೊಂದನು. ಆ ಪಿತೃ ವೈರವನ್ನೂ ನೀನು ನೆನೆಯಲಿಲ್ಲ. ವೃಷಕೇತುವು ಮೃತನಾದುದರಿಂದ ನಾನು ಮೃತಳಾದಂತೆಯೇ ಸರಿ. ಎಲೈ ಬಭ್ರುವಾಹನನೇ! ನನ್ನ ತಲೆಯನ್ನು ಕತ್ತಿಯಿಂದ ಕಡಿದುಹಾಕಿ ಪರಶುರಾಮನಿಗಿಂತ ಹೆಚ್ಚಿನವನಾಗು; ನಿನ ಇಷ್ಟವು ನೆರವೇರಲಿ; ನಿನಗೆ ಒಳ್ಳೆಯದಾಗಲಿ. ಪರಶುರಾಮನು

ಪೂರ್ವದಲ್ಲಿ ತಮ್ಮ ತಾಯಿಯಾದ ರೇಣುಕೆಯನ್ನು ಮಾತ್ರ ಕೊಂದನು. ನೀನು ತಂದೆಯನ್ನು ಕೊಂದುದಲ್ಲದೆ ತಾಯಿಯರಿಬ್ಬರನ್ನೂ ಬಲಾತ್ಕಾರದಿಂದ ಕೊಂದುಬಿಡು. ರಾಮನು ನಿನಗೆ ಸಮಾನನಾಗಲಾರನು. ಎಲೈ ಮಗನೇ! ಕಟ್ಟಿಗೆಯನ್ನು ತಂದೊಟ್ಟಿ ಉರಿಗೊಳಿಸಿ ಉಲೂಪಿ ಯೊಡನೆ ನನ್ನನ್ನೂ ಅದರಲ್ಲಿ ಹಾಕಿ ಸುಟ್ಟುಬಿಡು. ಯಾಚಕರಿಗೆ ಕಲ್ಪವೃಕ್ಷವೆನಿಸಿಕೊಂಡಿದ್ದ ವೃಷಕೇತುವನ್ನು ಕೊಂದು ಎಂತಹ ದುಃಖಕರವಾಗಿಯೂ ಕಷ್ಟಕರವಾಗಿಯೂ ಇರುವ ಕಾರ್ಯವನ್ನು ಮಾಡಿದೆ! ನಾನು ಧರ್ಮರಾಜನು ಮಾಡುವ ಯಜ್ಞಕ್ಕಾಗಿ ಪಾರ್ಥನೊಡನೆ ಹೊರಟು ರುಕ್ಮಿಣಿ, ಸತ್ಯಭಾಮೆ, ದ್ರೌಪದಿ, ಸುಭದ್ರೆ, ಉತ್ತರೆ, ಉಷೆ ಮೊದಲಾದವರೊಡನೆ ಕೃಷ್ಣನನ್ನು ದರ್ಶನಮಾಡಿ ಎಲ್ಲರನ್ನೂ ನೋಡಿಕೊಂಡು ಹೆಚ್ಚಾದ ಧನವನ್ನು ಸಮರ್ಪಿಸಿ ಬರಬೇಕೆಂಬಾಸೆಯುಳ್ಳವಳಾಗಿದ್ದೆನು. ನಿನ್ನಿಂದ ನಾನು ಹತಾಶಳಾದೆನು" ಎಂದಳು.

ಆಗ ಬಭ್ರುವಾಹನನು ಚಿತ್ರಾಂಗದೆಯನ್ನು ಕುರಿತು, "ಅಮ್ಮಾ! ನಾನು ಪಾರ್ಥನು ನಮ್ಮ ತಂದೆಯೆಂಬುದನ್ನು ಬಲ್ಲೆನು. ಕುದುರೆಯನ್ನು ತೆಗೆದುಕೊಂಡು ಹೋಗಿ ಆತನಿಗೊಪ್ಪಿಸಿ ನಮಸ್ಕಾರ ಮಾಡಿ ಬರಬೇಕೆಂದು ಆತನ ಬಳಿಗೆ ಹೋದೆನು. ಆ ಅರ್ಜುನನು ನನ್ನನ್ನು ನಿಂದಿಸಿ ಆಡಿದ ದುರ್ಭಾಷೆಗಳನ್ನು ಹೇಳಲು ನನಗೆ ಅಸಾಧ್ಯವು. ಬಳಿಕ, ಲೋಕದ ಜನರು ನನ್ನನ್ನು ಪಿತೃವಧೆಯನ್ನು ಮಾಡಿದವನೆಂಬ ಅಪಖ್ಯಾತಿಗೊಳಗಾಗಿಸಿ ಬಹಿಷ್ಕೃತನನ್ನಾಗಿ ಮಾಡಿ ಕೈಬಿಡುವರೆಂಬುದಕ್ಕೆ ಸಂದೇಹವಿಲ್ಲವೆಂದು ಭಾವಿಸಿದೆನು. ಪಿತೃ ಘಾತಕನಾದ ನನ್ನನ್ನು ಶುದ್ಧನನ್ನಾಗಿ ಮಾಡಲು ಲೋಕದಲ್ಲಿ ಯಾವ ತೀರ್ಥವೂ, ದಾನವೂ, ವ್ರತವೂ, ಯಜ್ಞವೂ, ಜ್ಞಾನವೂ ಇಲ್ಲ. ಆ ಶ್ರೀಕೃಷ್ಣನು, ತನ್ನ ಮಿತ್ರನಾದ ಪಾರ್ಥನನ್ನು ನಾನು ಕೊಂದುದರಿಂದ, ಕುಪಿತನಾಗಿ ನನ್ನನ್ನು ನರಕಕ್ಕೆ ಕೆಡಹುವನು. ಆ ಕೃಷ್ಣನ ಸ್ಮರಣೆಯಿಂದಲೇ ಪಾತಕಗಳೆಲ್ಲವೂ ಪರಿಹಾರವಾಗುವುವು. ಆದರೆ ವಿಷ್ಣುಭಕ್ತನಾಗಿಯೂ ತನ್ನ ಭಕ್ತನಾಗಿಯೂ ಇರುವ ಪಾರ್ಥನನ್ನು ಕೊಂದ ನನ್ನ ಪಾಪವು ಬಹು ಕುತ್ಸಿತವಾದುದೆಂದು ತಿಳಿದು, ತನ್ನ ಮಿತ್ರನಿಗಾಗಿ ದುಃಖಪಡುತ್ತಿರುವ ಕೃಷ್ಣನು ನನ್ನ ಪಾಪವನ್ನು ಕ್ಷಮಿಸುವುದಿಲ್ಲ. ಇಲ್ಲಿ ಪ್ರತ್ಯಕ್ಷನಾಗಿದ್ದರೂ, ತಾನು ಪಾಪನಾಶಕನಾಗಿದ್ದರೂ ಪಾರ್ಥವಧಾದೋಷವನ್ನು ಪರಿಹರಿಸನು. ಆದಕಾರಣ, ಅಗ್ನಿ ಪ್ರವೇಶಮಾಡಬೇಕೆಂಬ ಶುಭಮತಿಯು ನನಗುಂಟಾಗಿದೆ. ನಮ್ಮ ತಾಯಿಯಾದ ಉಲೂಪಿಯು ಪನ್ನಗಿಯಾಗಿದ್ದರೂ ನಾನು ಹುಟ್ಟಿದ ಕೂಡಲೇ ನನ್ನನ್ನು ಪಿತೃಘಾತಕನೆಂದು ತಿಳಿದು ಬಾಲಸರ್ಪದಂತೆ ನನ್ನನ್ನು ಕೊಲ್ಲದೆ ಮರೆತಳು. ಹಾಗೆ ಮಾಡಿದರೆ ಜನನೀ ದುಃಖಕಾರಕನಾಗಿ ದುಷ್ಟನಾದ ನಾನು ಇರುತ್ತಿರಲಿಲ್ಲ. ಶತ್ರು ಸ್ತ್ರೀಯರಿಗೆ ಮೊದಲು ವೈಧವ್ಯ ದೀಕ್ಷಾ ಗುರುವಾಗಿದ್ದು ಈಗ ತಾಯಿಗೆ ವೈಧವ್ಯದುಃಖವನ್ನುಂಟು ಮಾಡಿದವನಾಗಿದ್ದೇನೆ. ಆದಕಾರಣ, ಈಗ ನಾನು ಅಗ್ನಿಪ್ರವೇಶ ಮಾಡುವೆನು. ಇಲ್ಲದಿದ್ದರೆ ನನಗೆ ಶುದ್ಧನಾಗುವುದಕ್ಕೆ ಉಪಾಯಾಂತರವಿಲ್ಲ" ಎಂದು ಹೇಳಿ ಸೇವಕರನ್ನು ಕರೆದು, "ಕಟ್ಟಿಗೆಯನ್ನು ಗುಡ್ಡೆ ಹಾಕಿ ದೊಡ್ಡದಾದ ಚಿತೆಯನ್ನೊಡ್ಡಿರಿ. ನಾನು ಬೇಗನೆ ಅಗ್ನಿ ಪ್ರವೇಶ ಮಾಡುವೆನು" ಎಂದು ಆಜ್ಞೆ ಮಾಡಿದನು.

ಆಗ ಉಲೂಪಿಯು "ಎಲೈ ಪಿತೃಘ್ನನಾದ ದುರ್ಮತಿಯೇ! ಒಂದು ಕ್ಷಣ ಕಾಲ ತಾಳು. ಈಗ ಒಂದು ಉಪಾಯವನ್ನು ಮಾಡಬೇಕಾಗಿದೆ. ಅದರಿಂದ ಪಾರ್ಥನು ಬದುಕಿದರೂ ಬದುಕಬಹುದು. ಆತನನ್ನು ಉಳಿಸುವುದಕ್ಕೆ ಒಂದು ಉಪಾಯವು ತೋರುವುದು: ಎಲೈ ಪುತ್ರನೇ! ಪಾತಾಳದಲ್ಲಿ ಮೃತಸಂಜೀವಕವೆಂಬ ಮಣಿಯೊಂದಿರುವುದು. ಆ ಮಣಿಯು ನಾಗರಾಜನ ಬಂಡಾರದಲ್ಲಿ ರಕ್ಷಿತವಾಗಿರುವುದು. ಮಹಾ ವಿಷದಿಂದ ಮೃತರಾದ ಪನ್ನಗರನ್ನು ಅವರು ಪುನಃ ಆ ಮಣಿಯಿಂದ ಬದುಕಿಸುತ್ತಿರುವರು. ಆ ಸರ್ಪಗಳು ತಮ್ಮ ದೃಷ್ಟಿಯಿಂದಲೇ ತರು ಲತಾ ಗುಲ್ಮಗಳಿಂದ ಕೂಡಿದ ಬೆಟ್ಟಗಳನ್ನು ಸುಟ್ಟುಬಿಡುವುವು. ಅಲ್ಲಿ ಕರ್ಕೋಟಕ, ಕುಲಿಕ, ವಾಸುಕಿ, ತಕ್ಷಕ, ಶಂಖಕ, ದೀರ್ಘಜಿಹ್ವ, ಮೂಷಕಾದ ಮೊದಲಾದ ಸರ್ಪಶ್ರೇಷ್ಠಗಳಿರುವುವು. ಅವುಗಳಲ್ಲಿ ಕೆಲವಕ್ಕೆ ನೂರು ಹೆಡೆಗಳು, ಕೆಲವಕ್ಕೆ ಇನ್ನೂರು, ಮುನ್ನೂರು, ನಾನ್ನೂರು, ಐನೂರು, ಆರುನೂರು, ಏಳುನೂರು, ಎಂಟುನೂರು, ಒಂಭಯ್ನೂರು. ಹೆಡೆಗಳು ದೀಪದಂತೆ ಬೆಳಗುವ ರತ್ನಗಳಿಂದ ಕೂಡಿ ಶೋಭಿಸುತ್ತಿರುವುವು. ಇವರೆಲ್ಲರಿಗಿಂತಲೂ ಬಲಿಷ್ಠನಾಗಿ, ಪರ್ವತಗಳ ಸಹಿತವಾಗಿ ಭೂಮಂಡಲವನ್ನು ಹೊರುತ್ತ, ಲಕ್ಷ್ಮೀ ಸಹಿತನಾದ ವಾಸುದೇವನಿಗೆ ಶಯನಸ್ಥಾನವಾಗಿ ನಿರ್ಭಯನಾಗಿರುವ ಆದಿಶೇಷನೇ ಉಳಿದವನು. ಇವನಿಂದ ಮಣಿಯನ್ನು ಕಿತ್ತು ತರುವ ಸಮರ್ಥನಾರು? ನಿಮ್ಮ ತಂದೆಯನ್ನು ಬದುಕಿಸುವುದಕ್ಕೆ ಈ ಉಪಾಯವಿದ್ದರೂ ಇದು ಅಸಾಧ್ಯವಾದುದರಿಂದ ವ್ಯರ್ಥವೇ ಸರಿ. ನನ್ನನ್ನು ವೈಧವ್ಯ ದುಃಖವು ಬಹಳವಾಗಿ ಬಾಧಿಸುತ್ತಿರುವುದು. ಕುಂತಿಯು ಬಂದು ಪತಿಘಾತಿನಿಯಾದ ಈ ಪನ್ನಗಿಯನ್ನು ನೋಡುವುದಕ್ಕೆ ಮುಂಚೆಯೇ ಸಹಗಮನವನ್ನು ಮಾಡುವೆನು. ಅಥವಾ, ನನ್ನ ಸಖಿಯೂ ನಿಮ್ಮ ತಾಯಿಯೂ ಆದ ಈ ಚಿತ್ರಾಂಗದೆಯನ್ನೂ ನನ್ನನ್ನೂ ನೀನೇ ಕೊಂದುಬಿಡು. ಪೂರ್ವದಲ್ಲಿ ಗರುಡನಿಂದ ಪ್ರಾಣಭಯವನ್ನು ಹೊಂದಿದ ಪನ್ನಗರಿಗೆ ಈಶ್ವರನು ಜೀವರೂಪವಾದ ಆ ಮಣಿಯನ್ನು ಕೊಟ್ಟನು. ಆದಕಾರಣ ಅವರು ಅದನ್ನು ಕೊಡಲಾರರೆಂದು ದುಃಖಿಸುತ್ತಿರುವೆನು" ಎಂದಳು.

ಅದನ್ನು ಕೇಳಿ ಬಭ್ರುವಾಹನನು, ಅಮ್ಮಾ! ಅರ್ಜುನಾಂತಕನಾದ ನಾನು ಕೋಪಿಸಿಕೊಂಡರೆ, ಅಲ್ಪಗಳಾದ ಆ ಸರ್ಪಗಳೆಷ್ಟರವು? ಆ ಪನ್ನಗಗಳು ತಮ್ಮ ವಿಷ ಗರ್ಜನೆಯಿಂದಲೂ ಬಲದಿಂದಲೂ ಒಂದು ವೇಳೆ ಮಣಿಯನ್ನು ಕೊಡದೆಹೋದರೆ ಸಪ್ತ ಪಾತಾಳಗಳನ್ನೂ ಭೇದಿಸಿ ಆ ಮಹಾ ವಿಷಧರಗಳಾದ ಸರ್ಪಗಳ ಹೆಡೆಗಳನ್ನು ಮುರಿದುಹಾಕಿ ಸಂಜೀವಕ ಮಣಿಯನ್ನು ತೆಗೆದುಕೊಂಡು ಬರುವೆನು. ಪರಮೇಶ್ವರನನ್ನೂ ಇಂದ್ರಾದಿ ದೇವತೆಗಳನ್ನೂ ಯುದ್ಧದಲ್ಲಿ ಸಂತೋಷಪಡಿಸಿದ ನಮ್ಮ ತಂದೆಯನ್ನೇ ನಾನು ಯುದ್ಧದಲ್ಲಿ ಕೊಂದೆನು. ಹೀಗಿರುವಾಗ ನಮ್ಮ ಮಾತಾಮಹರನ್ನು ಕೊಲ್ಲುವುದು ನನಗೆ ಯಾವ ವಿಷಯ? ಮೊದಲು ನನ್ನೆದುರಿಗೆ ನಿಲ್ಲುವ ಸರ್ಪಗಳನ್ನೆಲ್ಲ ಕೊಲ್ಲುವೆನು. ಬಳಿಕ ಆ ಮಣಿಯನ್ನು ತಂದು ಪಾರ್ಥನನ್ನೂ ಮಿಕ್ಕ ಆ ಸರ್ಪಗಳನ್ನೂ ವೃಷಕೇತು ಮೊದಲಾದ ವೀರರನ್ನೂ ಅದರಿಂದಲೇ ಪುನಃ ಬದುಕಿಸುವೆನು. ಒಂದು ಕ್ಷಣ ಕಾಲ ನಿರೀಕ್ಷಿಸುತ್ತಿರು.

ನಾನು ತಂದ ಆ ಸಂಜೀವಕಮಣಿಯಿಂದ ಆ ಸರ್ಪಗಳೂ ಇತರರೂ ಬದುಕಿಕೊಂಡು ಸುಖವಾಗಿ ಹೊರಟುಹೋಗುವರು. ನಮ್ಮ ವೀರರೊಡನೆ ಸೇರಿ ನಿನ್ನ ಪತಿಯಾದ ಪಾರ್ಥನನ್ನು ನಾನು ಬರುವವರೆಗೂ ರಕ್ಷಿಸಿಕೊಂಡಿರು. ಈಗ ದೇವತೆಗಳ ಸಹಿತವಾಗಿ ಮೂರು ಲೋಕವೂ ನನ್ನ ಪರಾಕ್ರಮವನ್ನು ನೋಡಲಿ" ಎಂದನು. ಅದನ್ನು ಕೇಳಿ ಉಲೂಪಿಯು, "ಎಲೈ ಮೂಢನೆ! ಮಣಿಯನ್ನು ತರುವುದರಲ್ಲಿ ನಿನ್ನ ಪರಾಕ್ರಮವನ್ನು ಹೇಳಿಕೊಂಡು, ಮಹಾ ವಿಷವುಳ್ಳ ಆ ಸರ್ಪಗಳನ್ನು ಹೇಗೆ ಅಲ್ಲಗಳೆಯುತ್ತಿರುವೆ! ಶೇಷರಾಜನು ಮಾಯಾವಿಯಾಗಿಯೂ, ಮಹಾಕಾಯನಾಗಿಯೂ, ಮನೋವೇಗವುಳ್ಳವ ನಾಗಿಯೂ ಇರುವನಲ್ಲವೆ? ದುರ್ಬಲನಾದ ನೀನು ಬಲಿಷ್ಠನೊಡನೆ ವೈರವನ್ನು ಸಾಧಿಸಲು ನಿನಗೆ ನಾಚಿಕೆಯಾಗುವುದಿಲ್ಲವೇ?" ಎಂದಳು. ಅದಕ್ಕೆ ಬಭ್ರುವಾಹನನು, "ನಾನು ಆಡಿದ ಮಾತು ಎಂದಿಗೂ ಸುಳ್ಳಾಗದು. ಕುಪಿತನಾದ ಈಶ್ವರನು ಇಂದ್ರ, ಯಮ, ಕುಬೇರರೊಡನೆ ಸೇರಿ ಆ ಸರ್ಪಗಳನ್ನೂ ರಕ್ಷಿಸಿಕೊಂಡಿದ್ದರೂ ನನಗೆ ಭಯವಿಲ್ಲ. ಸ್ವಶಕ್ತಿಯಿಂದ ನಾನು ದೇವತೆಗಳನ್ನೂ ಸರ್ಪಗಳನ್ನೂ ಚಿತ್ರಪ್ರತಿಮೆಗಳಂತೆ ಮಾಡುವೆನು. ಪಾಂಡುವಿನ ಮೊಮ್ಮಗನೂ ಅರ್ಜುನನ ಮಗನೂ ಆದ ನನಗೆ ಭಯವೆಲ್ಲಿಯದು?" ಎಂದನು. ಅದಕ್ಕೆ ಉಲೂಪಿಯು, "ಮಗನೇ! ಸಾಹಸವನ್ನು ಮಾಡಬೇಡ. ನಿನಗೊಂದುಪಾಯವನ್ನು ಹೇಳುವೆನು: ನನ್ನ ಮಿತ್ರನಾಗಿಯೂ ಮಂತ್ರಾಲೋಚನೆಯಲ್ಲಿ ಸಮರ್ಥನಾಗಿಯೂ ಇರುವ ಪುಂಡರೀಕನೆಂಬ ಮಂತ್ರಿಯೊಬ್ಬನಿರುವನು. ಅವನನ್ನು ಮೊದಲು ಪಾತಾಳಲೋಕಕ್ಕೆ ನಮ್ಮ ತಂದೆಯ ಬಳಿಗೆ ಕಳುಹಿಸುವೆನು. ಅವನು ಅವರ ಮನಸ್ಸಿನಲ್ಲಿ ದಯೆಯೂ ಸಂತೋಷವೂ ಉಂಟಾಗುವಂತೆ ಮಾಡುವನು. ಬುದ್ಧಿಯಿಂದ ಸಾಧ್ಯವಾಗುವ ಕಾರ್ಯವು ಶಕ್ತಿಯಿಂದಾಗಲಾರದು. ಬುದ್ಧಿಯಿಂದಲೂ ತಾಳ್ಮೆಯಿಂದಲೂ ಲೋಕದಲ್ಲಿ ಪ್ರಾಣಿಗಳಿಗೆ ಕಾರ್ಯ ಸಿದ್ಧಿಯಾಗುವುದು. ಬುದ್ಧಿಶಾಲಿಯಾದವನು ಯಾವನು ತಾನೆ ಕ್ಲೇಶಕಾರಿಯಾದ ಪೌರುಷವನ್ನು ಮಾಡುವನು?" ಎಂದು ಹೇಳಿ ಮಗನನ್ನು ತಡೆದು, ಆ ಪುಂಡರೀಕನೆಂಬ ಪನ್ನಗನನ್ನು ಕರೆದು, ಅರ್ಜುನನ್ನುಳಿಸುವುದಕ್ಕಾಗಿ ಹೀಗೆ ಹೇಳಿದಳು: "ಎಲೈ ಪನ್ನಗನೇ! ನನ್ನ ಕಂಠಹಾರವನ್ನೂ ಕಿವಿಯ ಓಲೆಗಳನ್ನೂ ತೆಗೆದುಕೊಂಡು ನನ್ನ ಆಜ್ಞೆಯಂತೆ ಶೇಷನ ಬಳಿಗೆ ಹೋಗಿ, ನನ್ನ ಮಗನಿಂದ ಅರ್ಜುನನಿಗೂ ವೃಷಕೇತುವಿಗೂ ಆದ ಗತಿಯನ್ನು, ಮಹಾತ್ಮರೊಡನೆ ಸೇರಿ ದುಷ್ಟ ಸಂಗವಿಲ್ಲದವನಾದ ಮಹನೀಯನಾದ ಆತನಿಗೆ ಸಮಯವರಿತು ತಿಳಿಸಿ, ನಿನ್ನ ವಶಕ್ಕೆ ಸಂಜೀವಕಮಣಿಯನ್ನು ಕೊಡುವಂತೆ ಮಾಡು. ನನ್ನ ಹಿತಕ್ಕಾಗಿ ಹೊರಡುವ ನಿನಗೆ ಮಾರ್ಗದಲ್ಲಿ ಮಂಗಳವಾಗಲಿ" ಎಂದು ಹೇಳಿದಳು.

ಅದನ್ನು ಕೇಳಿ ಆ ಪನ್ನಗನು ಆಲೋಚಿಸಿ, ದುಃಖಾಕ್ರಾಂತಳಾದ ಉಲೂಪಿಯನ್ನು ಸಮಾಧಾನಗೊಳಿಸಿ, "ಎಲೌ ದೇವೀ! ನಿನ್ನ ಅಪ್ಪಣೆಯಂತೆ ದಿವ್ಯ ಮಣಿಯನ್ನು ತೆಗೆದುಕೊಂಡು ಬರುವುದಕ್ಕಾಗಿ ನಾನು, ಸರ್ಪರಾಜನ ಮನೆಗೆ ಹೋಗುವೆನು. ನಿನ್ನ ಮಗನೊಡನೆ ನೀನು ಅರ್ಜುನನ ದೇಹವನ್ನು ಕಾಪಾಡಿಕೊಂಡಿರು. ಆತನ ದೇಹವು ಬಹುಕಾಲ ಇರಲಾರದು. ಈ ಲೋಕದಲ್ಲಿ ಮೃತರಾದ ಪ್ರಾಣಿಗಳ ದೇಹವು ನಷ್ಟವಾಗಿ

ಹೋಗುವುದು. ರಾಜಸಭೆಗೆ ಹೋದ ಕಾರ್ಯವು ಬೇಗನೆ ನೆರವೇರದು. ರಾಜರು ಬಹುಕಾರ್ಯ ತತ್ಪರರಾದುದರಿಂದ ಸ್ನೇಹವನ್ನು ಸ್ಮರಿಸುವುದಿಲ್ಲ. ಅರ್ಜುನನ ದೇಹವನ್ನು ನಾನು ಕಚ್ಚುತ್ತೇನೆ. ನನ್ನ ವಿಷದಿಂದ ಆತನು ನಾಶವಾಗುವುದಿಲ್ಲ. ರತಿಯು ಮನ್ಮಥನನ್ನು ರಕ್ಷಿಸಿಕೊಂಡಿದ್ದಂತೆ, ಅರ್ಜುನನ ದೇಹವನ್ನು ನೀನು ರಕ್ಷಿಸಿಕೊಂಡಿರು" ಎಂದನು. ಅದಕ್ಕೆ ಬಭ್ರುವಾಹನನು, "ನನ್ನೊಡನೆ ಯುದ್ಧ ಮಾಡಿ ಬಿದ್ದು ಹೋಗಿರುವ ಈ ವೃಷಕೇತುವಿನ ದೇಹವನ್ನು ನೀನು ಮೊದಲು ಕಚ್ಚು. ಪಾರ್ಥಸಖನಾದ ಇವನು ತನ್ನ ಜೀವವನ್ನುಳಿಸಿಕೊಳ್ಳಲಿ. ಇವನನ್ನು ಬಿಟ್ಟು ನಮ್ಮ ತಂದೆಯು ಪ್ರಾಣಧಾರಣೆಯನ್ನು ಮಾಡನು. ಇವರಿಬ್ಬರಿಗೂ ಗಾಯವಿಲ್ಲದಂತೆ ಮಾಡಿ ನೀನು ಹೊರಡು. ಈ ಪಾಂಡವನ ದೇಹವನ್ನು ಈಗ ನಾನು ಉಳಿಸುವುದರಲ್ಲಿ ಸಂದೇಹವಿಲ್ಲ" ಎಂದು ಹೇಳಿದನು.

ಆಗ ಪುಂಡರೀಕನು, ಅವನ ಮಾತಿನಂತೆ ಅರ್ಜುನನನ್ನೂ ವೃಷಕೇತುವನ್ನೂ ಕಚ್ಚಿ ನಾಗಪುರಕ್ಕೆ ಹೋಗಿ ಮಹಾ ಸರ್ಪಗಳಿಂದ ಪ್ರಕಾಶಿಸುತ್ತ ಭಯಂಕರವಾಗಿರುವ ಅತಳವನ್ನು ನೋಡಿದನು. ಅದು ಸುವರ್ಣಮಯವಾಗಿಯೂ ವಿಸ್ತಾರವಾದ ವನಗಳಿಂದ ರಮ್ಯವಾಗಿಯೂ ಹತ್ತು ಸಾವಿರ ಯೋಜನ ವಿಸ್ತಾರವಾದುದೆಂದು ಶಾಸ್ತ್ರಜ್ಞರು ನಿಷ್ಕರ್ಷಿಸಿರುವುದಾಗಿಯೂ ನಾಗ ಕನ್ಯೆಯರಿಂದ ವ್ಯಾಪ್ತವಾಗಿಯೂ ಮಂಗಳಕರವಾಗಿಯೂ ಇದ್ದಿತು. ಅಲ್ಲಿಂದ ಹೊರಟು, ದಿವ್ಯವಾದ ಸಂಪಗೆಯ ಮರಗಳಿಂದ ಶೋಭಿಸುತ್ತಿರುವ ವಿತಳವನ್ನೂ ಫಲಭರಿತವಾದ ಸುವರ್ಣ ಶಮೀ ವೃಕ್ಷಗಳುಳ್ಳ ಸುತಲವನ್ನೂ ಬಗೆಬಗೆಯಾದ ಪಕ್ಷಿಗಳಿಂದಲೂ ಮಾವಿನ ಮರಗಳಿಂದಲೂ ಚಿತ್ರತರವಾದ ಮಹಾತಲವನ್ನೂ, ಮರಕತ ರತ್ನಗಳಿಂದಲೂ ಚಂದನವೃಕ್ಷಗಳಿಂದಲೂ ಶೋಭಿಸುತ್ತಿರುವ ರಸಾತಲವನ್ನೂ, ಅಲ್ಲಿ ಉಯ್ಯಾಲೆಯಾಡುತ್ತಿರುವ ಪನ್ನಗಿಯರನ್ನೂ ನೋಡಿ ವಿಸ್ಮಿತನಾದನು. ಬಳಿಕ ಪಾತಾಳವನ್ನು ಹೊಕ್ಕು ಭೋಗವತೀ ನದೀ ತೀರದಲ್ಲಿ ದಿವ್ಯ ಚಂಪಕ ಪುಷ್ಪಗಳಿಂದ ಅರ್ಚಿತವಾಗಿಯೂ ಸರ್ಪಗಳಿಂದಲೂ ಘನಕುಚೆಯರಾಗಿ ಮೆರೆಯುತ್ತಿರುವ ನಾಗಸ್ತ್ರೀಯರಿಂದಲೂ ಸ್ತುತಿಸಲ್ಪಡುವುದಾಗಿಯೂ ಇರುವ ಶ್ರೇಷ್ಠತರವಾದ ಹಾಟಕೇಶ್ವರಲಿಂಗವನ್ನು ನೋಡಿ ಹೃಷ್ಟನಾಗಿ, ಭೋಗವತಿಯಲ್ಲಿ ಸ್ನಾನಮಾಡಿ ಹಾಟಕೇಶ್ವರನಿಗೆ ನಮಸ್ಕರಿಸಿ ಅಲ್ಲಿಂದ ಹೊರಟು, ಪಾಪ ಪರಿಹಾರಕವಾದ ಕಮಲ ಗಂಧದಿಂದಲೂ ದಿವ್ಯ ವೃಕ್ಷಲತೆಗಳಿಂದಲೂ ಮಹಾನಾಗಗಳಿಂದ ರಕ್ಷಿತವಾಗಿರುವ ಒಂಬತ್ತು ಅಮೃತಕುಂಡಗಳಿಂದಲೂ ಪ್ರಕಾಶಮಾನ ವಾಗಿರುವ ಶೇಷರಾಜನ ಮಹತ್ತರವಾದ ಮಂದಿರವನ್ನು ಹೊಕ್ಕನು. ಎಲ್ಲ ರೀತಿಗಳಿಂದಲೂ ಎಲ್ಲ ಕಡೆಗಳಲ್ಲಿಯೂ ಚಿತ್ರತರವಾಗಿಯೂ ಮಂಗಳಕರವಾಗಿಯೂ ನಾನಾ ರತ್ನಖಚಿತ ವಾಗಿಯೂ ಬಗೆಬಗೆಯ ಕೊಠಡಿಗಳಿಂದ ಪ್ರಕಾಶಿಸುತ್ತಿರುವುದಾಗಿಯೂ ಸಹಸ್ರ ಫಣೆಗಳುಳ್ಳ ಶೇಷರಾಜನಿಂದಲಂಕೃತವಾಗಿಯೂ ಇರುವ ಆ ಮನೆಯನ್ನು ನೋಡಿ, ಅಲ್ಲಿ ತಕ್ಷಕ ಪನ್ನಗ ಕರ್ಕೋಟಕಾದಿ ಪನ್ನಗಗಳೊಡನೆ ಕೂಡಿ ಮಹಾತೇಜಸ್ವಿಯಾಗಿ ತ್ರಿಕರಣದಲ್ಲಿಯೂ ನಾರಾಯಣಸ್ಮರಣೆ ಮಾಡುತ್ತ ಕುಳಿತಿರುವ ಶೇಷರಾಜನನ್ನು ಕಂಡು ನಮಸ್ಕರಿಸಿ, ಆತನ ಪುತ್ರಿಯು ಕೊಟ್ಟಿರುವ ಕಂಠಹಾರವನ್ನೂ ಕಿವಿಯೋಲೆಗಳನ್ನೂ ತೋರಿಸಿ, ಆ ಪುಂಡರೀಕನು

ಆತನೆದುರಿಗೆ ಸಭಾ ಮಧ್ಯದಲ್ಲಿ ನಿಂತು, ಆತನನ್ನು ಕುರಿತು, "ಸ್ವಾಮೀ! ಉಲೂಪಿಯು ಕಾರ್ಯಾಂತರಕ್ಕಾಗಿ ನನ್ನನ್ನು ನಿನ್ನ ಬಳಿಗೆ ಕಳುಹಿಸಿರುವಳು. ನಾನು ನಿನ್ನನ್ನು ಶರಣುಹೊಂದಿರುವೆನು. ನಿನ್ನ ಮೊಮ್ಮಗನು ತಮ್ಮ ತಂದೆಯಾದ ಅರ್ಜುನನನ್ನು ಸಂಹರಿಸಿದನು. ಆತನ ಜೀವವನ್ನುಳಿಸುವುದಕ್ಕಾಗಿ ದಿವ್ಯ ಮಣಿಯನ್ನು ಕೊಡಬೇಕು" ಎಂದು ಕೇಳಿದನು.

ಅದನ್ನು ಕೇಳಿ ಶೇಷರಾಜನು, "ಅಯ್ಯಾ! ನನ್ನ ಮಗಳ ಗಂಡನಾದ ಆ ಅರ್ಜುನನು ಮಹಾಬಾಹುವಾಗಿಯೂ, ಸವ್ಯಸಾಚಿಯಾಗಿಯೂ, ಶ್ರೀಕೃಷ್ಣನ ಸಾರಥ್ಯವುಳ್ಳವನಾಗಿಯೂ, ಯುದ್ಧದಲ್ಲಿ ಈಶ್ವರನನ್ನು ಸಂತೋಷಪಡಿಸಿ ಅವನಿಂದ ವರವನ್ನು ಪಡೆದವನಾಗಿಯೂ, ಸುರಾಸುರರಿಗೂ ಅಜೇಯನಾಗಿಯೂ ಇರುವನಲ್ಲವೇ! ಅವನ ಮಾತನ್ನು ಈಶ್ವರನು ತೆಗೆದುಹಾಕಲಾರನು. ವಿಷ್ಣು ಭಕ್ತನಾಗಿಯೂ ಧನುರ್ಧರನಾಗಿಯೂ ಇರುವ ಆತನ ಪೌರುಷವನ್ನು ನಾನು ಬಲ್ಲೆನು. ಆತನನ್ನು ಕೊಂದವನು ಕೃಷ್ಣನನ್ನು ತಾನೇ ಹೇಗೆ ಬಿಟ್ಟನು? ಆ ಪಾರ್ಥನನ್ನು ರಕ್ಷಿಸಲು ಕೃಷ್ಣನನ್ನು ಬಿಟ್ಟರೆ ಮತ್ತಾರು ಸಮರ್ಥರು? ಹೀಗಿದ್ದರೂ ನನ್ನ ಮಗಳಾದ ಉಲೂಪಿಯು ಈ ಸಂದರ್ಭದಲ್ಲಿ ಹಿತಕಾರಿಣಿಯಾಗಿ ನಿನ್ನನ್ನು ನನ್ನ ಬಳಿಗೆ ಕಳುಹಿಸಲು ಕಾರಣವೇನು? ಅರ್ಜುನನ ಮರಣವನ್ನು ಕೇಳಿ ನನಗೆ ಆಶ್ಚರ್ಯವುಂಟಾಗಿದೆ. ಎಲ್ಲವನ್ನೂ ವಿಶದವಾಗಿ ತಿಳಿಸು" ಎಂದನು. ಅದಕ್ಕೆ ಪುಂಡರೀಕನು, "ಎಲೈ ಶೇಷರಾಜನೇ! ಧರ್ಮನಂದನನು ಯುದ್ಧದಲ್ಲಿ ಭೀಷ್ಮ ದ್ರೋಣ ಮೊದಲಾದ ಜ್ಞಾತಿಗಳನ್ನು ಸಂಹರಿಸಿದುದರಿಂದ ದುಃಖಿತನಾಗಿ ಅಶ್ವಮೇಧಯಾಗವನ್ನು ಮಾಡಬೇಕೆಂದಾಲೋಚಿಸಿ ಅದಕ್ಕಾಗಿ ಕುದುರೆಯನ್ನು ಅರ್ಜುನನ ರಕ್ಷಣೆಯಿಂದ ಬಿಡಲು, ಅದನ್ನು ಪಾಂಡವಪುತ್ರನಾದ ಬಭ್ರುವಾಹನನು ಹಿಡಿದು ಕಟ್ಟಿದನು. ಮಹಾಬಾಹುವಾದ ಅವನಿಗೂ ಪಾರ್ಥನಿಗೂ ಮಣಿಪುರದಲ್ಲಿ ಯುದ್ಧವು ನಡೆಯಿತು, ಅರ್ಜುನನು ಗಂಗಾ ಶಾಪಗ್ರಸ್ತನಾದ ಕಾರಣ ತನ್ನ ಮಗನಿಂದ ಹತನಾದನು. ನಿನ್ನ ಮಗಳ ಪ್ರಿಯಪತಿಯಾದ ಆ ಪಾರ್ಥನ ಪ್ರಾಣವನ್ನುಳಿಸುವುದಕ್ಕಾಗಿ ಉಲೂಪಿಯು ತನ್ನ ಸೇವಕನಾದ ನನ್ನನ್ನು ಕುತೂಹಲದಿಂದ ನಿನ್ನ ಬಳಿಗೆ ಕಳುಹಿಸಿರುವಳು. ಈ ಸಂದರ್ಭದಲ್ಲಿ ನಿನಗೆ ಕೀರ್ತಿಯುಂಟಾಗುವ ಕಾರ್ಯವನ್ನು ಮಾಡು. ಎಲೈ ಪ್ರಭುವೇ! ಧರ್ಮರಾಜನ ತಮ್ಮನಾಗಿಯೂ ಶ್ರೀಕೃಷ್ಣನ ಭಕ್ತನಾಗಿಯೂ, ಮಹಾಕ್ರತುವನ್ನು ಮಾಡಿಸುವವನಾಗಿಯೂ ಇರುವ, ಯುದ್ಧದಲ್ಲಿ ಮೃತನಾದ ನಿನ್ನ ಅಳಿಯನನ್ನು ಬದುಕಿಸು. ಮಹಾತ್ಮರ ವೈಭವವು ಸರ್ವದಾ ಲೋಕದಲ್ಲಿ ಪರೋಪಕಾರಕ್ಕಾಗಿಯೇ ಆಗುವುದು. ದುರ್ಜನರ ಧನವು ಇತರರ ನಾಶಮಾತ್ರಕ್ಕೆ ಕಾರಣವಾಗುವುದು. ಮಹಾತ್ಮರು, ಬಿದ್ದು ಹೋಗಿರುವವರನ್ನು ತಮ್ಮ ಹಣದಿಂದಲೂ ನಡತೆಯಿಂದಲೂ ರಕ್ಷಿಸುತ್ತಾರೆ. ವಿಷ್ಣು ಭಕ್ತನಾಗಿಯೂ ಕೃಷ್ಣ ರಕ್ಷಿತನಾಗಿಯೂ ನಿನ್ನ ಮಗಳ ಗಂಡನಾಗಿಯೂ ಇರುವವನ ವಿಷಯದಲ್ಲಿ ಹೇಳಬೇಕಾದುದೇನು?" ಎಂದನು.

ಶೇಷನು, ಹೀಗೆ ಯಾಚಿಸುತ್ತಿರುವ ಪುಂಡರೀಕನ ಮಾತನ್ನು ಕೇಳಿ ಮಹಾ ಸರ್ಪಗಳನ್ನು ಕುರಿತು, "ಎಲೈ ಸರ್ಪಗಳಿರಾ! ದೈವಸಂಕಲ್ಪವನ್ನು ನೋಡಿರಿ. ಪಾರ್ಥನ

ಜೀವವನ್ನುಳಿಸುವುದಕ್ಕಾಗಿ ನಾನು ಮಣಿಯನ್ನು ಕೊಡುವೆನು. ಪಾರ್ಥನು ಬದುಕದಿದ್ದರೆ ನನ್ನ ಧನದಿಂದಲೂ ರಾಜ್ಯದಿಂದಲೂ ದೇಹದಿಂದಲೂ ಪ್ರಯೋಜನವೇನು? ಈಗ ಮೃತನಾಗಿರುವ ಅರ್ಜುನನನ್ನು ಅಮೃತದಿಂದಾಗಲಿ ಮಣಿಯಿಂದಾಗಲಿ ಬದುಕಿಸುವೆನು. ವಿಷ್ಣುಭಕ್ತನನ್ನುಳಿಸುವುದಕ್ಕಾಗಿ ಕೊಡದೆ ಲೋಭದಿಂದ ನನ್ನಲ್ಲಿಯೇ ಇಟ್ಟುಕೊಂಡು ಅಮೃತವು ಗಂಜಿಯಂತೆಯೂ, ಮಣಿಯು ಕವಡೆಯಂತೆಯೂ ಅಲ್ಪ ವಸ್ತುಗಳೆಂದೆನಿಸುವುವು. ಅಕೃತ್ಯವನ್ನು ಮಾಡುವವರನ್ನು ದಂಡಿಸುವವನು ಅಶ್ವಮೇಧಕ್ಕೆ ಪ್ರಯತ್ನಪಟ್ಟ ಅರ್ಜುನನನ್ನು ದಂಡಿಸಿದ ಶ್ರೀಕೃಷ್ಣನಲ್ಲವೇ! ಆದಕಾರಣ, ನನ್ನ ಆಜ್ಞೆಯಂತೆ ಈ ಪುಂಡರೀಕನು ಮಣಿಯನ್ನು ತೆಗೆದುಕೊಂಡು ಹೋಗಿ ವಿಷ್ಣುಭಕ್ತನಾದ ಪಾರ್ಥನನ್ನು ಬದುಕಿಸಲಿ" ಎಂದು ಹೇಳಿದನು. ಆ ಮಾತನ್ನು ಕೇಳಿ ಸರ್ಪಗಳೆಲ್ಲವೂ ಇದು ತಮಗೆ ಅನಿಷ್ಟವೆಂದು ಭಾವಿಸಿ ದುಃಖಪಡುತ್ತಿರಲು, ಅವುಗಳಲ್ಲಿ ಬುದ್ಧಿಶಾಲಿಯಾದ ಧೃತರಾಷ್ಟ್ರಕನೆಂಬ ಪನ್ನಗನು ಶೇಷನನ್ನು ಕುರಿತು ಈ ವಿಷಯದಲ್ಲಿ ವಿಸ್ತರವಾಗಿ ಪ್ರಸಂಗ ಮಾಡಿದನು : "ಎಲೈ ನಾಥನೇ! ಕೊಡಬಾರದ ವಸ್ತುವು ಔದಾರ್ಯವುಳ್ಳವರಿಗೆ ಲೋಕದಲ್ಲಿ ಒಂದೂ ಇಲ್ಲ. ಆದರೂ ನಾನು ನನ್ನ ಯೋಗ್ಯತೆಗೆ ತಕ್ಕ ಮಾತನ್ನಾಡುವೆನು. ಎಲೈ ರಾಜನೇ! ಮನುಷ್ಯ ಲೋಕದಲ್ಲಿ ಮೃತನಾದ ಮನುಷ್ಯನಿಗಾಗಿ, ಜೀವವನ್ನುಳಿಸುವ ಈ ಮಣಿಯನ್ನು ಕೊಡುವುದಕ್ಕೆ ನೀನು ಒಪ್ಪಬಹುದೇ? ಗುರುದ್ರೋಹಿಯೂ ಕೃತಘ್ನನೂ ಆಗಿರುವವನಿಗೆ ಯಾವ ಔಷಧಿಯೂ ಮಣಿಯೂ ಮಂತ್ರಗಳೂ ದೇವತೆಗಳೂ ಪ್ರಯೋಜಕಗಳಾಗವು. ಅಶಾಶ್ವತರಾದ ಮಾನವರು ಮೃತ್ಯುವಿಗೆ ತುತ್ತಾಗಿ ಮೃತಿಯನ್ನು ಹೊಂದಿಯೇ ಹೊಂದುವರು. ಫಲದಾಯಕಗಳಾದ ವೃಕ್ಷಗಳು ತಮ್ಮ ಮೂಲವನ್ನು ಇತರರಿಗೆ ತೋರಿಸವು. ನೀನು ನಮ್ಮ ಸರ್ವಸ್ವವಾಗಿಯೂ ಜೀವಪ್ರದವಾಗಿಯೂ ಇರುವ ಮಣಿಯನ್ನು ಕೊಟ್ಟು ಬಿಡಲಪೇಕ್ಷಿಸುತ್ತಿದ್ದೀಯೆ. ನಮಗೆ ಗರುಡನೊಡನೆ ಸರ್ವದಾ ಯುದ್ಧ ಪ್ರಸಕ್ತಿ ಇದ್ದೇಯಿರುವುದು. ಆ ಗರುಡನು ಮತಂಗಮುನಿಯ ಶಾಪದಿಂದ ಪಾತಾಳವನ್ನು ಪ್ರವೇಶಿಸದಿರುವನು. ಕೃತಘ್ನರಾದ ಮನುಷ್ಯರೆಲ್ಲರೂ ಮಣಿಯಿಂದ ಗರ್ವಿತರಾಗಿ ಅಮೃತವನ್ನೂ ಅಪಹರಿಸಿ ನಮ್ಮನ್ನು ವಿಷಭಯಕ್ಕೆ ಗುರಿ ಮಾಡುವರು. ಅಮೃತವನ್ನೂ ಮಣಿಯನ್ನೂ ನಾವು ಕಳೆದುಕೊಂಡ ಕೂಡಲೆ ನಮ್ಮ ಹೆಡೆಗಳಲ್ಲಿರುವ ರತ್ನಗಳನ್ನು ಮೃಗಲೋಚನೆಯರಾದ ಸ್ತ್ರೀಯರಾದರೂ ನಮ್ಮನ್ನು ಲಕ್ಷಿಸದೆ ಕಿತ್ತುಕೊಂಡು ಹೋಗುವರು. ಬಳಿಕ ಎರಡು ತಲೆಯುಳ್ಳ ಉರುಸಿಂಗಿ ಹಾವಿನಂತೆ ಆದ ನಮ್ಮ ಜೀವನವು ವ್ಯರ್ಥವಾಗುವುದು. ಪಾರ್ಥನು ಸುಂದರವಾದ ಸ್ಥಳವನ್ನು ಕಂಡರೆ ಎಂದಿಗೂ ಬಿಡುವುದಿಲ್ಲ. ವಿಷರಹಿತಗಳಾಗಿಯೂ ಸ್ಥಾನಭ್ರಷ್ಟಗಳಾಗಿಯೂ ಐಶ್ವರ್ಯಹೀನಗಳಾಗಿಯೂ ಆದ ಈ ಸರ್ಪಗಳನ್ನು ಹೊಟ್ಟೆಗಿಲ್ಲದ ಭಿಕ್ಷುಕರು ತಮ್ಮ ಹೊಟ್ಟೆಯ ಪಾಡಿಗಾಗಿ ಮನೆ ಮನೆಗೂ ಸುತ್ತಿಸುತ್ತ ಆಡಿಸುವುದಕ್ಕಾರಂಭಿಸುವರು. ಮಂತ್ರಿಗಳು ಹಿತವಾದ ಆಲೋಚನೆಯನ್ನು ತಮ್ಮ ಬುದ್ಧಿಗೆ ತಿಳಿದ ಮಟ್ಟಿಗೆ ದೊರೆಗಳಿಗೆ ತಿಳಿಸಬೇಕಾದುದು ಯೋಗ್ಯವಾಗಿದೆ. ಅವರು ಅದರಂತೆ ನಡಯಿಸಲಿ, ಬಿಡಲಿ, ಹೇಗಾದರೂ ಆಗಲಿ" ಎಂದು ಹೇಳಿದನು.

ಬಹು ಪರಿತಾಪಕರವಾದ ಆ ಮಾತನ್ನು ಕೇಳಿ ನಸುನಗುತ್ತ, ವಾಗ್ಮಿಯಾದ ಶೇಷನು ಧೃತರಾಷ್ಟ್ರಕನನ್ನು ಕುರಿತು, "ಮಹಾತ್ಮನಾದ ಆ ಪಾಂಡವನಿಗಾಗಿ ಮಣಿಯನ್ನು ಕೊಡದೆ ನಾನು ನಿನ್ನ ಮಾತಿನಂತೆ ಇಟ್ಟುಕೊಳ್ಳುವುದು ಹೇಗೆ? ನಡೆವಳಿಕೆಯನ್ನು ನಡೆಯಿಸದಿದ್ದರೂ ದೇಶದಲ್ಲಾಗಲಿ ಪುರದಲ್ಲಾಗಲಿ ಗ್ರಾಮದಲ್ಲಾಗಲಿ ಮನೆಯಲ್ಲಾಗಲಿ ಮೂರ್ಖನ ಸಹವಾಸ ಮಾಡಿದ ಮಾತ್ರಕ್ಕೆ ಅನರ್ಥಗಳುಂಟಾಗುವುವು. ಸಮುದ್ರ, ಪಾತಾಳ, ಬೆಂಕಿ, ಹಳ್ಳ ಮೊದಲಾದವುಗಳಲ್ಲಿ ಬಿದ್ದರೂ ಬೀಳಬಹುದು; ಮೂರ್ಖನ ಸಹವಾಸವನ್ನು ಮಾಡಬಾರದು. ನಾನು ಸಂಜೀವಕಮಣಿಯನ್ನು ಕೊಡುವುದರಿಂದ ನನಗೆ ಪುಣ್ಯ ಕೀರ್ತಿಯುಂಟಾಗುವುದು. ನಾನು ಮಣಿಯನ್ನು ಕೊಡದೆ ಹೋದರೂ ಅರ್ಜುನನು ಬದುಕುವುದಿಲ್ಲವೇನು? ಕೃಷ್ಣನೆಂಬ ಮಣಿಯಿಂದ ಅವನು ಬದುಕಿಕೊಳ್ಳುವನು. ಎಲೈ ಮೂಢನೇ! ಆ ಕೃಷ್ಣಮಣಿಯಿಂದಲೇ ಚರಾಚರಾತ್ಮಕವಾದ ಪ್ರಪಂಚವೆಲ್ಲವೂ ಜೀವಿಸುತ್ತಿರುವುದು. ನಾವೂ ಸಂಸಾರ ಸಹಿತರಾಗಿ ಜೀವಿಸುತ್ತ ಚಿರಂಜೀವಿಗಳಾಗಿರುವೆವು. ಪೂರ್ವದಲ್ಲಿ ಬ್ರಹ್ಮನು ಕೃಷ್ಣನನ್ನು ಪರೀಕ್ಷಿಸುವುದಕ್ಕಾಗಿ ಕರುಗಳೆಲ್ಲವನ್ನೂ ಗೋಪಾಲಕರ ಸಹಿತವಾಗಿ ಅಪಹರಿಸಿ ತನ್ನ ಸತ್ಯಲೋಕಕ್ಕೆ ತೆಗೆದುಕೊಂಡು ಹೋದನು. ಗೋಪಾಲರು, ಅಲ್ಲಿ ಕೃಷ್ಣನನ್ನು ಕಾಣದೆ, ಬ್ರಹ್ಮನನ್ನು ಅಶಾಶ್ವತನಾದ ಬಾಲನೆಂದು ನಿಂದಿಸಿದರು: 'ಕೃಷ್ಣನಿಲ್ಲದ ಈ ಸತ್ಯಲೋಕವು ವ್ಯರ್ಥವಾದುದು. ಯಶೋದಾಪುತ್ರನು ನಮ್ಮನ್ನು ಏಕೆ ಹೀಗೆ ವಂಚಿಸಿದನೋ? ಬ್ರಹ್ಮನು ಕಮಲದಲ್ಲಿ ಹುಟ್ಟಿದನೆಂಬುದು ಸತ್ಯತಃ ಸುಳ್ಳಾಗಿ ಕಾಣುವುದು. ಆ ಕಮಲವು ವಿಷ್ಣುವಿನ ನಾಭಿಯಲ್ಲಿ ಪಾಪ ಭಸ್ಮದಿಂದ ಹುಟ್ಟಿದುದಾಗಿರಬೇಕು. ಹಾಗಿಲ್ಲದಿದ್ದರೆ ಕೃಷ್ಣ ಪ್ರಿಯರಾದ ನಮ್ಮನ್ನು ಕರ್ಮಜಡರನ್ನಾಗಿ ಮಾಡುವುದು ಹೇಗೆ?' ಎಂದುಕೊಳ್ಳುತ್ತಿದ್ದರು. ಬ್ರಹ್ಮನು ಅವರ ಮಾತನ್ನು ಸತ್ಯವೆಂದು ಭಾವಿಸಿದನು. ಆಗ ಬಾಲಕನಾದ ವಿಷ್ಣುವು ಹೊಸದಾಗಿ ಕರುಗಳನ್ನೂ ಗೋಪಾಲರನ್ನೂ ನಿರ್ಮಾಣ ಮಾಡಿ ಹಸುಗಳನ್ನೂ ಕರುಗಳನ್ನೂ ಸಂತೋಷಗೊಳಿಸಿದನು. ಹೀಗಿರುವಾಗ, ಆ ಕೃಷ್ಣನು, ಮಗನನ್ನು ಕಳೆದುಕೊಂಡಿರುವ ಪೃಥೆಯ ದುಃಖವನ್ನು ಪರಿಹರಿಸಲಾರನೇ! ಕೃಷ್ಣನ ಸಾಮರ್ಥ್ಯದಿಂದ ತೃಣವು ವಜ್ರವಾಗುವುದು. ವಜ್ರವು ತೃಣವಾಗುವುದು. ಆದಕಾರಣ, ಎಲೈ ಸರ್ಪಗಳಿರಾ! ನಾನು ಯಾವ ವಿಚಾರವನ್ನೂ ಮಾಡದೆ ಈ ಮಣಿಯನ್ನು ಕೊಡುವೆನು. ಸಾಧುಗಳ ಜನ್ಮವು ಲೋಕದಲ್ಲಿ ಪರೋಪಕಾರಾರ್ಥವಾಗಿಯೇ ಇರುವುದು. ಇದನ್ನು ದೇವ ಕಾರ್ಯ ಸಂದರ್ಭದಲ್ಲಿ ದಧೀಚಿಯು ತೋರಿಸಿರುವನು" ಎಂದನು. ಅದನ್ನು ಕೇಳಿ ಧೃತರಾಷ್ಟ್ರಕನು, "ಎಲೈ ಶೇಷನೇ! ಪಾರ್ಥನು ಕೃಷ್ಣಮಣಿಯಿಂದ ಜೀವಿಸುವ ಹಾಗಿದ್ದರೆ ನಮ್ಮ ಜೀವಕ್ಕೆ ಕಾರಣವಾದ ಈ ಮಣಿಯನ್ನು ಏಕೆ ಕೊಟ್ಟು ಕಳುಹಿಸುತ್ತೀಯೆ? ಎಲೈ ಸ್ವಾಮಿಯೇ ಗರುಡನ ದೆಸೆಯಿಂದಾಗಬಹುದಾದ ನಮ್ಮ ನಾಶವು ನಿನಗೆ ಇಷ್ಟವಾದ ಪಕ್ಷದಲ್ಲಿ ಈ ಮಣಿಯನ್ನು ನೀನು ಕೊಡಬಹುದು. ನಾವು ಇನ್ನು ಮಾತಾಡುವುದಿಲ್ಲ" ಎಂದನು.

# ಶ್ರೀಕೃಷ್ಣಾಗಮನ

ಜೈಮಿನಿಮಹರ್ಷಿಗಳು ಜನಮೇಜಯರಾಜನನ್ನು ಕುರಿತು ಮತ್ತೆ ಹೀಗೆಂದರು: ರಾಜ-ಜನಮೇಜಯ, ಧೃತರಾಷ್ಟ್ರಕನ ಆ ಮಾತನ್ನು ಕೇಳಿ ಶೇಷನು ಪುಂಡರೀಕನಿಗೆ "ಅಯ್ಯ-ಪುಂಡರೀಕ, ನಮ್ಮ ಕುಲದವರು ಸಂಜೀವಕಮಣಿಯನ್ನು ಕೊಡಲು ಇಚ್ಛಿಸುವುದಿಲ್ಲ. ಆದ್ದರಿಂದ ನೀನು ಬಭ್ರುವಾಹನನ ಬಳಿಗೆ ಹೋಗಿ, ನಾನು ಹೇಳಿದ್ದೇನೆಂದು ಈ ಮಾತನ್ನು ತಿಳಿಸು: 'ಬಭ್ರುವಾಹನ, ನನ್ನ ಕಡೆಯವರು ಆ ಮಣಿಯನ್ನು ಕೊಡಲು ಸಮ್ಮತಿಸುವುದಿಲ್ಲ. ದುಷ್ಟಪ್ರಾಣಿಗಳ ಜನ್ಮದಿಂದ ಯಾರಿಗೂ ಉಪಕಾರವಿಲ್ಲ! ನೀನು ಶ್ರೀಕೃಷ್ಣನನ್ನು ಕಾರ್ಯ ಸಿದ್ಧಿಗಾಗಿ ಆಶ್ರಯಿಸದೆ, ವ್ಯರ್ಥವಾಗಿ ನನ್ನನ್ನು ಬೇಡಲು ಬಂದದ್ದೇಕೆ? ನಾವು ಪಾತಾಳವಾಸಿಗಳಾದ್ದರಿಂದ ಏನೋ ಹೆಚ್ಚುಗಾರಿಕೆ ಇದೆಯೆಂದು ಭಾವಿಸಿ, ಮನುಷ್ಯರು ನಮ್ಮಲ್ಲಿ ಪ್ರಾರ್ಥನೆಯನ್ನು ಸಲ್ಲಿಸುತ್ತಾರೆ. ಆದರೆ ನಮಗೆ ಕೈಕಾಲುಗಳೇ ಇಲ್ಲವಾದ್ದರಿಂದ ಸದಾ ಭಯಗ್ರಸ್ತರಾಗಿರುತ್ತೇವೆ."

ಆಗ ಪುಂಡರೀಕನು ನಿರಾಶನಾಗಿ ಭೂಲೋಕಕ್ಕೆ ಮರಳಿದನು. ಬಭ್ರುವಾಹನನ ಸೈನಿಕರಿಂದ ರಕ್ಷಿತವಾದ ಅರ್ಜುನಶರೀರವಿದ್ದ ಸಮರಾಂಗಣಕ್ಕೆ ಅವನು ಬಂದನು. ಡೇರೆಗಳಿಂದ ಯುಕ್ತವಾದ ಸಮರಾಂಗಣದಲ್ಲಿ ನೂರಾರು ಕರ್ಪೂರದೀಪಗಳು ಉರಿಯುತ್ತಿದ್ದವು. ಶ್ರೀಗಂಧದ ಎಣ್ಣೆಯಿಂದ ಕೆಲವು ದೀಪಗಳು ಬೆಳಗುತ್ತಿದ್ದುವು. ಅರ್ಜುನನ ಪತ್ನಿಯರಾದ ಉಲೂಪಿಯೂ ಚಿತ್ರಾಂಗದೆಯೂ 'ಅರ್ಜುನ, ಅರ್ಜುನ' ಎಂದು ಆತನನ್ನೇ ಧ್ಯಾನಿಸುತ್ತ ಶೋಕಾಕುಲರಾಗಿ ಪುಂಡರೀಕನ ಆಗಮನವನ್ನೇ ನಿರೀಕ್ಷಿಸುತ್ತಿದ್ದರು. ಸಂಜೀವ ಕಮಣಿ ಇಲ್ಲದೆ ವ್ಯರ್ಥವಾಗಿ ಹಿಂದಿರುಗಿ ಬಂದ ಆತನನ್ನು ಉಲೂಪಿಯು ನೋಡಿದಳು. ಪುಂಡರೀಕನು ಉಲೂಪಿಯನ್ನು ಕುರಿತು "ಮಣಿಯ ವಿಷಯವನ್ನೆತ್ತಿದೊಡನೆ ಸರ್ಪಗಳಿಗೆ ಬಹಳ ಕ್ರೋಧ ಉಂಟಾಯಿತು. ಗರ್ವಾಂಧರಾದ ಅವರು ಆ ಮಣಿಯನ್ನು ಕೊಡುವುದಿಲ್ಲ. ಪುತ್ರನಾದ ಬಭ್ರುವಾಹನನು ಪಾರ್ಥನ ಶರೀರಕ್ಕೆ ಅಗ್ನಿಸ್ಪರ್ಶವನ್ನು ಮಾಡಬೇಕು. ನೀನು ಚಿತೆಯನ್ನು ಪ್ರವೇಶಿಸಬೇಕು. ಬೇರೆ ದಾರಿ ಇಲ್ಲ" ಎಂದನು. ಪುಂಡರೀಕನ ನುಡಿಯನ್ನು ಕೇಳಿದೊಡನೆ ಬಭ್ರುವಾಹನನು ರೋಷಾವಿಷ್ಟನಾದನು. ಜನಮೇಜಯ, ಏನು ಹೇಳೋಣ! ಒಡನೆಯೇ ಅವನು ಯುದ್ಧಕ್ಕೆ ಸಜ್ಜಾಗಿ ಹೊರಡುವಂತೆ ತನ್ನ ಸೇನೆಗೆ ಆಜ್ಞಾಪಿಸಿ ತಾನೂ ಹೊರಟನು. ಆತನು ಪಾರ್ಥನ ದೇಹವನ್ನು ಕಾಯುವಂತೆ ರಕ್ಷಣಾವ್ಯವಸ್ಥೆಯನ್ನು ಮಾಡಿ, ಶರರಾಶಿಗಳನ್ನು ತೆಗೆದುಕೊಂಡು, ಕಣ್ಣುಗಳಿಂದ ಕೆಂಗಿಡಿಗಳನ್ನುಗುಳುತ್ತ "ಶೇಷನೆಲ್ಲಿ? ವಾಸುಕಿ ಎಲ್ಲಿ? ತಕ್ಷಕಾದಿ ಸರ್ಪಗಳು ಇರುವ ಸ್ಥಳವೆಲ್ಲಿ? ಕರ್ಕೋಟ, ಶಂಖ, ಕುಲಿಕ, ಧೃತರಾಷ್ಟ್ರ ಎಂಬವರು ಎಲ್ಲಿದ್ದಾರೆ? ಸಂಜೀವಕಮಣಿಯನ್ನು ಅವರಿಂದ ಬಲಾತ್ಕಾರವಾಗಿ ಕಿತ್ತು ತರುವೆನು! ಅಮೃತವನ್ನು ಸಹ ದೇವಲೋಕದಿಂದ ತರುವೆನು! ಅವರ ಐಶ್ವರ್ಯವನ್ನು ಸೂರೆಮಾಡುವೆನು! ಧರ್ಮರಾಜನ ತಮ್ಮನೂ ಶ್ರೀಕೃಷ್ಣನ ಭಕ್ತನೂ ನನ್ನ ತಂದೆಯೂ ಆದ ಪಾರ್ಥನು ನನ್ನೆದುರಿಗೆ ಮೃತನಾಗಿ ಬಿದ್ದಿರುವನೆಂಬುದು ಹೇಗಾದೀತು? ಈ ದಿನ

ಸರ್ಪಗಳೆಲ್ಲವೂ ನಿಶ್ಶೇಷವಾಗಿ ತೊಡೆದು ಹೋಗುವುದನ್ನು ನನ್ನ ಸೈನಿಕರು ನೋಡಲಿ! ಈ ಪಾರ್ಥನಿಗೋಸ್ಕರ ಸಕಲಸರ್ಪಗಳೂ ಪಾತಾಳದಲ್ಲಿ ಸುಟ್ಟು ಉರಿದು ಹೋಗುವುದನ್ನು ಸೈನಿಕರು ಕಾಣಲಿ! ಭೋಗವತೀನಗರದಲ್ಲಿ ಹರಿಯುವ ನೀರು ನನ್ನ ಬಾಣಜಾಲಗಳ ಹೊಡೆತದಿಂದ ಪುಟಿದೆದ್ದು ಈ ಪಾಂಡವನ ದೇಹವನ್ನು ತೊಳೆಯಲಿ! ಸಂಜೀವಕಮಣಿಯನ್ನು ಮಾತ್ರವೇ ಅಲ್ಲ, ಸರ್ಪಗಳ ಸಕಲ ರತ್ನಗಳನ್ನೂ ನಮ್ಮ ಸ್ತ್ರೀಯರು ಲೀಲೆಯಿಂದ ತಂದು ತುಂಬಿಕೊಳ್ಳಲಿ! ಈ ಯುದ್ಧದಲ್ಲಿ ನನ್ನಿಂದ ಹತರಾದ ಸಕಲ ಪಾಂಡವಯೋಧರೂ ಸಂಜೀವಕಮಣಿಯಿಂದ ಬದುಕಲಿ! ಶೇಷನಿಗೋಸ್ಕರ ಸಾಕ್ಷಾತ್ ಶಂಕರನೇ ಬಂದು ಎದುರಿಸಿದರೂ ಆತನನ್ನು ನನ್ನ ಶಿರಸ್ಸಿನಿಂದ* ತಡೆಗಟ್ಟುವೆನು! ಸಂದೇಹವಿಲ್ಲ. ಈ ಚರಾಚರಾತ್ಮಕವಾದ ಜಗತ್ತು ನನ್ನ ಬಾಣಗಳಿಂದ ತುಂಬಿ ಹೋಗುವುದನ್ನು ಜನರು ವೀಕ್ಷಿಸಲಿ!" ಎಂದು ಆರ್ಭಟಿಸಿದನು.

ಅನಂತರ ಪಾಂಡವಸುತನಾದ ಬಭ್ರುವಾಹನನು ವರಬಲದಿಂದ ತಾನೊಬ್ಬನೇ ದುರ್ಜಯನಾದರೂ ಸೇನಾಪರಿವೃತನಾಗಿ ಪಾತಾಳಕ್ಕೆ ಪ್ರಯಾಣಮಾಡಿದನು. ಅಲ್ಲಿಗೆ ಹೋಗಿ ಪಾತಾಳದ್ವಾರದಲ್ಲಿ ಸೇನೆಯನ್ನು ವ್ಯೂಹಾಕಾರವಾಗಿ ನಿಲ್ಲಿಸಿದನು. ಬಲಾಢ್ಯನಾದ ಬಭ್ರುವಾಹನನು ಕ್ರುದ್ಧನಾಗಿ ಆಗಮಿಸಿದನೆಂಬುದು ಶೇಷನಿಗೆ ತಿಳಿಯಿತು. ಆತನು ತನ್ನ ಅಧೀನರಾದ ಸರ್ಪನಾಯಕರನ್ನು ಕರೆಸಿ "ಎಲೈ ಸರ್ಪಗಳಿರಾ, ತಿಳಿಗೇಡಿಯಾದ ಈ ಧೃತರಾಷ್ಟ್ರಕನ ದೆಸೆಯಿಂದ ಬಭ್ರುವಾಹನನಿಗೆ ಬಹಳ ರೋಷ ಉಂಟಾಗಿದೆ. ಅವಿವೇಕಿಯಾದ ಧೃತರಾಷ್ಟ್ರನೆಂಬ ಮನುಷ್ಯನು ತನ್ನ ಮಕ್ಕಳೆಲ್ಲರೂ ಯುದ್ಧದಲ್ಲಿ ಸಾಯುವುದಕ್ಕೆ ನಿಮಿತ್ತನಾದನು. ಹಾಗೆಯೇ ಧೃತರಾಷ್ಟ್ರಕನೆಂಬ ಅವಿವೇಕಿಯಾದ ಪನ್ನಗನು ನಮ್ಮೆಲ್ಲರ ಸಾವಿಗೆ ನಿಮಿತ್ತನಾದನು! ಈ ದಿನ ಶ್ರೀಕೃಷ್ಣಭೃತ್ಯನಾದ ಬಭ್ರುವಾಹನನು ಕಾಲಾನಲಜ್ವಾಲೆಯಂತೆ ಜ್ವಲಿಸುವ ಘೋರಶರಜಾಲಗಳಿಂದ ಈ ರಸಾತಳವನ್ನು ಸುಟ್ಟು ಬೂದಿಮಾಡುವನೆಂದೇ ತಿಳಿಯುತ್ತೇನೆ. ಅವನನ್ನು ಜಯಿಸುವವರು ಯಾರಿದ್ದಾರೆ, ಮುಂದೆ ಬರಲಿ! ವೀರಾಗ್ರಣಿಯಾದ ಈ ಧೃತರಾಷ್ಟ್ರಕನು ಆತನನ್ನು ಜಯಿಸುವನೇನೊ! ಬೀಜಕ್ಕೆ ತಕ್ಕ ಫಲ! ಎಂತಹ ಬೀಜವನ್ನು ಬಿತ್ತುವನೋ ಅಂತಹ ಫಲವನ್ನು ತಿನ್ನಬೇಕು! ಇರಲಿ; ಈಗ ಕರ್ಕೋಟಕ ತಕ್ಷಕಾದಿಗಳು ಯುದ್ಧಕ್ಕೆ ಹೊರಡಲಿ" ಎಂದು ಆಜ್ಞಾಪಿಸಿದನು.

ಒಡನೆಯೇ ರಾಜಾಜ್ಞೆಯಂತೆ ಸರ್ಪಸೇನೆಯು ರಣಾಂಗಣಕ್ಕೆ ಧಾವಿಸಿತು. ಇನ್ನೂರು ಮುನ್ನೂರು ನಾನೂರು ಹೆಡೆಗಳಿದ್ದ ವಿವಿಧಸರ್ಪನಾಯಕರು ದಿವ್ಯರೂಪವನ್ನು ಧರಿಸಿ ಚತುರಂಗಬಲಯುಕ್ತರಾಗಿ ಹೊರಟರು. ಅವರು ಘೋರವಿಷವನ್ನುಗುಳುತ್ತ ಭೋರ್ಗರೆಯುತ್ತ ಹೋದರು. ದಿವ್ಯಕವಚಗಳನ್ನು ಧರಿಸಿ ಧನುರ್ಧಾರಿಗಳಾಗಿ ಮತ್ತಮಾತಂಗಗಳನ್ನೇರಿ ಕೆಲವರು ಹೊರಟರು. ಕೆಲವರು ಕುದುರೆಗಳನ್ನೇರಿದರು. ಕೆಲವರು

* ಶಿರಸಾ ಸ್ವೇನ ತಂ ದೇವಂ ವಾರಯಿಷ್ಯೇ ನ ಸಂಶಯಃ - ಎಂದು ಮೂಲದಲ್ಲಿದೆ. 'ತಲೆಯಿಂದ ಹಣಾಹಣಿಯಾಗಿ ಯುದ್ಧಮಾಡಿ' ಎಂದು ಅರ್ಥವಾಗುತ್ತದೆ. ಅಥವಾ 'ತಲೆಬಾಗಿ ವಂದಿಸಿ ಭಕ್ತಿಬಲದಿಂದ ಶಂಕರನನ್ನು ಯುದ್ಧಕ್ಕೆ ಬಾರದಂತೆ ಒಲಿಸಿಕೊಳ್ಳುವೆನು' ಎಂದೂ ಅಭಿಪ್ರಾಯವಾಗಬಹುದು.

ರಥಗಳನ್ನಡರಿದರು. ಕೆಲವರು ಪದಾತಿಗಳಾಗಿಯೇ ಸಾಗಿದರು. ರತ್ನಭೂಷಿತಗಳಾದ ಶಿರಸ್ಸುಗಳಲ್ಲಿ ಆ ಸರ್ಪಯೋಧರು ಕಿರೀಟಗಳನ್ನು ಧರಿಸಿದ್ದರು. ಕೇಯೂರ ಕುಂಡಲ ಮೌಕ್ತಿಕಾದಿಗಳಿಂದ ಭೂಷಿತರಾಗಿದ್ದರು. ಐದು ಯೋಜನಗಳವರೆಗೆ ಹಬ್ಬಿದ ಆ ಸರ್ಪಸೇನೆಯು ಬಭ್ರುವಾಹನನನ್ನು ಎದುರಿಸಿತು. ಸರ್ಪಸೈನಿಕರ ಮುಖಗಳಿಂದ ಘೋರವಾದ ವಿಷವೃಷ್ಟಿಗಳು ಹೊರಸೂಸಿದವು. ವಿಷಜ್ವಾಲೆಯ ಕಿಡಿಗಳಿಂದ ತನ್ನ ಸೇನೆಯು ಭಸ್ಮವಾಗುತ್ತಿರುವುದನ್ನು ನೋಡಿ, ಬಭ್ರುವಾಹನನು ತನ್ನ ಪೌರುಷದಿಂದ ಸರ್ಪಗಳನ್ನು ಅಡ್ಡಗಟ್ಟಿ ತನ್ನ ಸೇನೆಯನ್ನು ರಕ್ಷಿಸತೊಡಗಿದನು. ಭೀಕರವಾಗಿ ಹೋರಾಡ ತೊಡಗಿದ ಮನುಷ್ಯಸೇನೆ ಮತ್ತು ಸರ್ಪಸೇನೆಗಳು ಪ್ರಳಯಕಾಲದಲ್ಲಿ ಹೋರಾಡುವ ಎರಡು ಧ್ರುವತಾರೆಗಳಂತೆ ಕಾಣಿಸಿದವು. ಬಾಣ, ಖಡ್ಗ, ಗದೆ, ಪ್ರಾಸ, ಕುಂತ-ಮುಂತಾದ ಆಯುಧಗಳ ಪ್ರಹಾರಗಳಿಂದ ರಣರಂಗವು ಭೀಷಣವಾಯಿತು. ಬ್ರಹ್ಮ ಇಂದ್ರ, ಚಂದ್ರ ಮೊದಲಾದ ದೇವತೆಗಳು ಆಕಾಶದಲ್ಲಿ ಬಂದು ನೆರೆದರು. ನಾಗರಾಜನಾದ ಶೇಷನಿಗೆ ಜಯುವಾಗುವುದೆಂದು ಕೆಲವರೂ ಅರ್ಜುನಪುತ್ರನಾದ ಬಭ್ರುವಾಹನನಿಗೆ ಜಯವಾಗುವುದೆಂದು ಕೆಲವರೂ ಹೇಳಿಕೊಳ್ಳುತ್ತಿದ್ದರು. ಆ ಯುದ್ಧದಲ್ಲಿ ಮಾನವಸೈನಿಕರು ಸರ್ಪಗಳಿಂದ ದಷ್ಟರಾಗಿ ವಿಷವೇಗವನ್ನು ತಾಳಲಾರದೆ ಸಾವಿರಗಟ್ಟಲೆ ನಾಶಹೊಂದಿದರು. ಧೃತರಾಷ್ಟ್ರಕನು ಶಸ್ತ್ರಾಸ್ತ್ರಗಳಿಂದ ಹೋರಾಡಿ ಪಾರ್ಥತನಯನ ಇಪ್ಪತ್ತೊಂದು ಸಾವಿರ ಯೋಧರನ್ನು ಕೊಂದು ಹಾಕಿದನು. ಆಗ ಮಹಾಬಾಹುವಾದ ಬಭ್ರುವಾಹನನು ರೋಷಾವಿಷ್ಟನಾಗಿ ಭೀಕರಯುದ್ಧವನ್ನಾರಂಭಿಸಿ ಧೃತರಾಷ್ಟ್ರಕನ ರಥವನ್ನೂ ಅಶ್ವಗಳನ್ನೂ ಧ್ವಂಸಗೊಳಿಸಿದನು. ಮಹಾಮಹಿಮನಾದ ಶ್ರೀಕೃಷ್ಣನನ್ನು ಧ್ಯಾನಿಸುತ್ತ ಆ ವೀರನು ಬಾಣಜಾಲಗಳಿಂದ ಸರ್ಪನಾಯಕರನ್ನು ಘಾತಿಸಿದನು. ಜನಮೇಜಯ, ಆ ರಣಾಂಗಣದಲ್ಲಿ ಬಭ್ರುವಾಹನನ ಶರಗಳಿಂದ ವಿಭಿನ್ನವಾದ ಸರ್ಪಶಿರಸ್ಸುಗಳಿಂದ ಮಣಿಗಳು ಸಿಡಿದು, ತಾರೆಗಳಂತೆ ಗಗನದಿಂದ ಉದುರುತ್ತಿದ್ದವು! ಮಹಾವಿಷಧಾರಿಗಳಾದ ಘೋರಸರ್ಪಗಳು ಸುತ್ತಲೂ ಕವಿದಿರಲಾಗಿ, ರುದ್ರಾಕಾರನಾದ ಬಭ್ರುವಾಹನನು ರುಷ್ಟನಾದ ಪರಮೇಶ್ವರ ನಂತೆಯೂ ಯಮುನಾಜಲದಲ್ಲಿ ಕಾಳಿಯಮರ್ದನವನ್ನಾರಂಭಿಸಿದ ಶ್ರೀಕೃಷ್ಣನಂತೆಯೂ ಮೆರೆದನು. ಆ ಸರ್ಪಗಳ ಹೆಡೆಗಳ ಫೂತ್ಕಾರದಿಂದ ಭುಗಿಲೆದ್ದ ವಿಷಜ್ವಾಲೆಯು ಸೈನಿಕರನ್ನು ಸುಟ್ಟು ಬೂದಿಮಾಡುತ್ತಿರಲಾಗಿ, ಬಭ್ರುವಾಹನನು ಸರ್ವನಾಗವಿಧ್ವಂಸಕವಾದ ಭೀಮಾಕೃತಿಯ ಮಯೂರಾಸ್ತ್ರವನ್ನು ಪ್ರಯೋಗಿಸಿದನು. ಆಮೇಲೆ ಮಧ್ವಸ್ತ್ರವನ್ನು ಪ್ರಯೋಗಿಸಿ ಸರ್ಪಗಳ ಮೇಲೆ ಜೇನು ಸುರಿಯುವಂತೆ ಮಾಡಿದನು. ಜೇನಿನಲ್ಲಿ ಸಿಕ್ಕಿ ಹೊರಳಾಡುತ್ತಿದ್ದ ಸರ್ಪಗಳನ್ನು ಬಾಣರಾಶಿಗಳಿಂದ ತರಿದನು. ಅನಂತರ ಬಭ್ರುವಾಹನನು ಪಿಪೀಲಿಕಾಸ್ತ್ರವನ್ನು ಪ್ರಯೋಗಿಸಲು, ಇರುವೆಗಳ ಹಿಂಡು ಉದ್ಭವಿಸಿ ಸರ್ಪಗಳನ್ನು ಕಚ್ಚತೊಡಗಿದವು! ಆ ಇರುವೆಗಳು ಧೃತರಾಷ್ಟ್ರಕನನ್ನು ಕಚ್ಚಿ, ಮಾಂಸವನ್ನು ಮುಕ್ಕಿ, ಮೂಳೆಗಳನ್ನು ಕೊರೆದು, ಮಜ್ಜೆಯನ್ನು ಭೇದಿಸಿ, ಅವನ ದೇಹವನ್ನು ಹುಣಿಸೆಹಣ್ಣಿನಂತೆ ಭಗ್ನಗೊಳಿಸಿ ಪೊಟರೆಗಳನ್ನು ಮಾಡಿಕೊಂಡವು! ಈ ಪ್ರಕಾರವಾಗಿ ಧೃತರಾಷ್ಟ್ರಕನು

ಪಿಪೀಲಿಕಾಸ್ತ್ರದ ಪ್ರಭಾವದಿಂದ ಮುಂದೆ ಹೆಜ್ಜೆ ಇಡಲೂ ಸಮರ್ಥನಾಗಲಿಲ್ಲ. ಇತರ ಸರ್ಪಗಳೂ ಸಹ ಮಯೂರಾಸ್ತ್ರ, ನಕುಲಾಸ್ತ್ರ, ಪಿಪೀಲಿಕಾಸ್ತ್ರ, ಮದ್ಗಸ್ತ್ರಗಳ ಪೀಡೆಯಿಂದ ಕಂಗೆಟ್ಟು ಹೆದರಿ ಧರಣೀಧಾರಿಯಾದ ಶೇಷನಿದ್ದೆಡೆಗೆ ಓಡಿಹೋದವು.

ಹೀಗೆ ಓಡಿಬಂದ ವಿಚ್ಛಿನ್ನಗಾತ್ರರಾದ ಸರ್ಪನಾಯಕರನ್ನು ನೋಡಿ ಶೇಷನು ನಸುನಗುತ್ತ "ಓಹೊ! ಯುದ್ಧಕೋವಿದರಾದ ನೀವು ಒಬ್ಬ ಮನುಷ್ಯನಿಗೆ ಹೆದರಿ ಓಡಿಬಂದಿರಾ! ಮಂತ್ರಾಲೋಚನಾನಿಪುಣರಾದ ನೀವೆಲ್ಲರೂ ಸೇರಿ, ನಾನು ಕೊಡಬೇಕೆಂದಿದ್ದ ಸಂಜೀವಕಮಣಿಯನ್ನು ಕೊಡಬಾರದೆಂದು ತಡೆದಿರಿ! ನಮ್ಮ ಮಂತ್ರೀಶ್ವರನಾದ ಧೃತರಾಷ್ಟ್ರಕನಿಗೆ ಬಭ್ರುವಾಹನನನ್ನು ಅಡ್ಡಗಟ್ಟಲು ಆಗಲಿಲ್ಲವೆ? ಆ ಮಣಿಯನ್ನೂ ಅಮೃತವನ್ನೂ ಅವನು ಏಕೆ ರಕ್ಷಿಸಿಕೊಳ್ಳುವುದಿಲ್ಲ! ಎಲೈ ಸರ್ಪಗಳಿರಾ, ಸಮರ್ಥನಾದವನಿಗೆ ಧನವನ್ನು ಮಾತ್ರವೇ ಅಲ್ಲ, ಪ್ರಿಯವಾದ ಶರೀರವನ್ನೂ ಸಹ ಅರ್ಪಿಸಬೇಕಾಗುತ್ತದೆ. ಅರ್ಪಿಸದಿದ್ದರೆ ಧನವೂ ಶರೀರವೂ ಶ್ಮಶಾನದಲ್ಲಿರುವ ಹೂಮಾಲೆಯಂತೆ ಶೋಚನೀಯಗಳಾಗುತ್ತವೆ. ಎಲೈ ತಕ್ಷಕಾದಿಗಳಿರಾ, ಆ ಪಾರ್ಥಸೂನುವಿಗೆ ಮಣಿ, ಶತಶಲಾಕವಾದ ಛತ್ರ, ಬೆಲೆಬಾಳುವ ಕುಂಡಲಗಳು, ದಿವ್ಯರತ್ನಮಯವಾದ ಹಾರ-ಇವುಗಳನ್ನು ಕಾಣಿಕೆಯಾಗಿ ಅರ್ಪಿಸಿರಿ. ಕೇಶವನ ಪ್ರಿಯಭಕ್ತನಾದ ಆ ವೀರನು ಇರುವೆಡೆಗೆ ನಾವೆಲ್ಲರೂ ಹೋಗೋಣ. ಆತನು ಶರಾಗ್ನಿಯ ಧೂಮರಾಶಿಗಳಿಂದ ಜಗತ್ತನ್ನು ಮುಚ್ಚಿಬಿಟ್ಟಾನು! ವಸ್ತುತಃ ಶೋಚನೀಯವಾದ ಈ ಮಣಿಯಿಂದ ಪಾಂಡವನಿಗೆ ಆಗಬೇಕಾದ್ದೇನು? ತ್ರಿಲೋಕ ರಕ್ಷಕನಾದ ಕೇಶವನೇ ಅವನ ಬಳಿಯಲ್ಲಿರುವಾಗ ಇದರಿಂದ ಏನಾದೀತು? ಕ್ಷೀರಸಾಗರವಿದ್ದೆಡೆಯಲ್ಲಿ ಮೇಕೆಯ ಹಾಲಿನಿಂದಾಗುವ ಪ್ರಯೋಜನವೇನು? ಶ್ರೀ ಹರಿಯೇ ಸನ್ನಿಹಿತನಾದಾಗ ಕಾಮಧೇನು, ಕಲ್ಪವೃಕ್ಷ, ಕಲ್ಪಲತೆಗಳು ಎಣಿಕೆಗೇ ಬರುವುದಿಲ್ಲ. ಮಣಿದಾನಕ್ಕೆ ಅಡ್ಡಬಂದ ನೀವೆಲ್ಲರೂ ಹೀಗೆ ಕಾಣಿಕೆಗಳನ್ನರ್ಪಿಸಿ ಪ್ರಾಯಶ್ಚಿತ್ತ ಮಾಡಿಕೊಳ್ಳಬೇಕು. ಅರ್ಜುನನಿಗೋಸ್ಕರ ಮಣಿಪುರಕ್ಕೆ ಶ್ರೀಕೃಷ್ಣನು ಆಗಮಿಸುವನು. ಗರುಡಾರೂಢನಾಗಿಯೂ ಮೃತ್ಯುನಾಶಕನಾಗಿಯೂ ಇರುವ ಆತನ ದರ್ಶನವನ್ನು ಪಡೆಯಿರಿ. ಭಕ್ತಿ ನಮ್ರವಾದ ಕಣ್ಣುಗಳಿಂದ ಅವನನ್ನು ಯಾರು ನೋಡುತ್ತಾರೋ ಅಂತಹವರನ್ನು ಗರುಡನೂ ಬಾಧಿಸುವುದಿಲ್ಲ. ಯಮನೂ ಬಾಧಿಸುವುದಿಲ್ಲ" ಎಂದು ನುಡಿದನು. ಹೀಗೆ ಹೇಳಿ ಪನ್ನಗೇಶ್ವರನಾದ ಆದಿಶೇಷನು ಸಂಜೀವಕಮಣಿ, ವಿವಿಧರತ್ನಗಳು, ವಸ್ತ್ರಭೂಷಣಗಳು-ಮುಂತಾದ ವಸ್ತುಗಳನ್ನು ತೆಗೆದುಕೊಂಡು ಬಭ್ರುವಾಹನನಿಗೆ ಕೊಡುವುದಕ್ಕಾಗಿ ತಾನೇ ಹೊರಟನು. ಈ ಪ್ರಕಾರವಾಗಿ ಅವನು ತಂದಿತ್ತ ಮಣ್ಯಾದಿಗಳನ್ನು ಬಭ್ರುವಾಹನನು ಸ್ವೀಕರಿಸಿ ಸಂಪ್ರೀತನಾಗಿ ಮಣಿಪುರಕ್ಕೆ ಹಿಂದಿರುಗಿದನು.

ಎಲೈ ಜನಮೇಜಯ ಭೂಪಾಲ, ಇತ್ತಲಾಗಿ ಧೃತರಾಷ್ಟ್ರಕನಿಗೆ ಮನಸ್ಸಿನಲ್ಲಿ ಬಹಳ ಖೇದವಾಯಿತು. ಅವನು ಏನು ಮಾಡಿದನೆಂಬುದನ್ನು ಹೇಳುತ್ತೇನೆ, ಗಮನವಿಟ್ಟು ಕೇಳು.

ಅವನು ತನ್ನ ಇಬ್ಬರು ಮಕ್ಕಳನ್ನು ಕರೆದು ತನ್ನ ಮನೆಯಲ್ಲಿ ಮಂತ್ರಾಲೋಚನೆ ಮಾಡಿದನು. ಅವರಲ್ಲಿ ಒಬ್ಬನ ಹೆಸರು ದುಃಸ್ವಭಾವ, ಇನ್ನೊಬ್ಬನದು ದುರ್ಬುದ್ಧಿ! ಧೃತರಾಷ್ಟ್ರಕನು ಅವರನ್ನು ಕುರಿತು "ಮಕ್ಕಳಿರಾ, ಬುದ್ಧಿಪೂರ್ವಕವಾಗಿಯೇ ದೊಡ್ಡ ಅನರ್ಥವು ನಡೆದುಹೋಯಿತು. ಈಗ ಅರ್ಜುನನು ಬದುಕುತ್ತಾನೆಂದರೆ ನನಗೆ ಸ್ವಲ್ಪವೂ ಸಂತೋಷವಾಗದು. ಬಭ್ರುವಾಹನನು ಜಯಶಾಲಿಯಾಗುವುದೂ ಧರ್ಮರಾಜನ ಅಶ್ವಮೇಧವು ನಡೆಯುವುದೂ ನನಗೆ ಇಷ್ಟವಲ್ಲ. ನಮಗೂ ಪಾಂಡವರಿಗೂ ಇರುವ ವೈರವು ಧೀರ್ಘಕಾಲದಿಂದ ಬಂದದ್ದು. ಈಗ ಇನ್ನೇನು ಮಾಡಬೇಕೆಂಬುದನ್ನು ನೀವು ಆಲೋಚಿಸಿ ಹೇಳಿರಿ. ದೂರದರ್ಶಿಯಾದ ನಾನು ಮಣಿಯನ್ನು ಕೊಡಬೇಡವೆಂದು ನಮ್ಮ ರಾಜನಿಗೆ ಹೇಳಿ ತಡೆದೆನು. ಆದರೆ ನನ್ನ ಯತ್ನವು ಫಲಿಸಲಿಲ್ಲ" ಎಂದನು. ಆಗ ದುರ್ಬುದ್ಧಿಯು "ಓ ಮಹಾಬಾಹು, ನೀನು ಚಿಂತಿಸಬೇಡ. ದುರ್ಬುದ್ಧಿಯೆನಿಸಿದ ನಾನು ಇರುವಾಗ ಧರ್ಮರಾಜನ ಅಶ್ವಮೇಧವು ಎಂದಿಗಾದರೂ ನಡೆದೀತೆ? ನಾನಿರುವ ಕಡೆ ಪುಣ್ಯಕಾರ್ಯದ ಮಾತು ಕೂಡ ನಡೆಯಲಾರದು! ನಾನು ನಿನ್ನಿಂದ ಜನಿಸಿದವನಲ್ಲವೆ! ನನ್ನ ತಮ್ಮನಾದ ದುಃಸ್ವಭಾವನೂ ನನ್ನಂತಹವನೇ! ನಾವಿಬ್ಬರು ಪುತ್ರರಿರುವಾಗ, ತಂದೆ, ನೀನು ಶೋಕಿಸುವುದುಂಟೆ? ನನ್ನ ತಮ್ಮನೊಡನೆ ನಾನು ಯಾರ ಮನೆಯಲ್ಲಿ ಉಪಸ್ಥಿತನಾಗುವೆನೋ ಅಲ್ಲಿ ಜಯವೆಂಬುದೇ ಇರುವುದಿಲ್ಲ. ಇನ್ನು ಯಜ್ಞಕಾರ್ಯವು ನಡೆಯುವುದೆಂದರೇನು? ಆ ಶತ್ರುಗಳು ನರಕದಲ್ಲಿ ಬೀಳಬೇಕಾಗುವುದೇ ಹೊರತು ಅವರಿಗೆ ಧರ್ಮದಲ್ಲಿ ಬುದ್ಧಿಯು ಎಂದಿಗೂ ಜನಿಸದು. ನಮ್ಮ ರಾಜನು ಪಾರ್ಥನನ್ನು ಬದುಕಿಸುವುದಕ್ಕೆ ತೊಡಗಿರುವನಷ್ಟೆ. ನೀನು ರಾಜನ ಬಳಿಗೆ ಹೋಗು. ನಾನು ಮೊದಲೇ ಹೋಗಿ ಅರ್ಜುನನ ಶಿರಸ್ಸನ್ನು ತಂದು ಘೋರಾರಣ್ಯದಲ್ಲಿ ಎಸೆದು ಬಿಡುವೆನು. ಅವರು ಆತನನ್ನು ಹೇಗೆ ಬದುಕಿಸುವರೋ ನೋಡೋಣ!" ಎಂದು ಹೇಳಿ ತಂದೆಯನ್ನು ಸಂತೈಸಿ ತನ್ನ ತಮ್ಮನೊಡನೆ ಅರ್ಜುನನ ಕುಂಡಲೋಪೇತವಾದ ಶಿರಸ್ಸನ್ನು ಅಪಹರಿಸುವುದಕ್ಕಾಗಿ ತೆರಳಿದನು. ಆ ದುರ್ಬುದ್ಧಿಯು ದುಃಸ್ವಭಾವನೊಡನೆ ಭೂಲೋಕಕ್ಕೆ ಬಂದು ಯಾರಿಗೂ ಕಾಣದಂತೆ ಅರ್ಜುನನ ಶಿರಸ್ಸನ್ನು ಅಪಹರಿಸಿಕೊಂಡು ಹೋಗಿ ಬಕದಾಲ್ಭ್ಯನ ಶೂನ್ಯಾರಣ್ಯದಲ್ಲಿ ಇದ್ದು ಬಿಟ್ಟನು. ಇತ್ತ ಚಿತ್ರಾಂಗದೆ ಮತ್ತು ಉಲೂಪಿಯರು ತಮ್ಮ ಪತಿಯ ಶಿರಸ್ಸನ್ನು ಕಾಣದೆ ಶೋಕಾವಿಷ್ಟರಾಗಿ "ಅಯ್ಯೋ! ಇದೇನಾಗಿಹೋಯಿತು! ಪಾಂಡವನು ಸತ್ಯವಾಗಿಯೂ ಮೃತನಾದನೆ! ಶ್ರೀಕೃಷ್ಣನು ಪದೆ ಪದೇ ಕೊಂಡಾಡುತ್ತಿದ್ದ ರಮಣೀಯವಾದ ಶಿರಸ್ಸು ಕಾಣದಾಯಿತಲ್ಲ! ಇದನ್ನು ಯಾರು ಅಪಹರಿಸಿರಬಹುದು?" ಎಂದು ಗೋಳಾಡತೊಡಗಿದರು.

ಜನಮೇಜಯ, ಈ ರೀತಿಯಲ್ಲಿ ಅರ್ಜುನನ ಧರ್ಮಪತ್ನಿಯರು ಶೋಕಿಸುತ್ತ ಅರ್ಜುನನ ಪಾದಮೂಲದಲ್ಲಿ ಬಿದ್ದು ಆಕ್ರಂದಿಸಿದರು. ಯುದ್ಧರಂಗದ ಮಧ್ಯದಲ್ಲಿ ಕೋಲಾಹಲ ಉಂಟಾಯಿತು. ಅಷ್ಟರಲ್ಲಿ ಶೇಷಾದಿಸರ್ಪಗಳಿಂದ ಸಂತೈಸಲ್ಪಟ್ಟ ಬಭ್ರುವಾಹನನು ಅವರೆಲ್ಲರಿಂದ ಪರಿವೃತನಾಗಿ ಸಂತೋಷಿಸುತ್ತ ಆ ರಣಭೂಮಿಗೆ

ಬಂದನು. ಸಂಜೀವಕಮಣಿಯನ್ನು ತಂದೆನೆಂದು ಅವನಿಗೆ ಆನಂದವಾಗಿತ್ತು. ಆ ಸಮಯದಲ್ಲಿ "ಶಿರಸ್ಸನ್ನು ಯಾರೋ ಒಯ್ದರು! ಯಾರೋ ಒಯ್ದರು! ಮೋಸವಾಯಿತು!" ಎಂಬ ಶಬ್ದಗಳು ಅವನಿಗೆ ಕೇಳಿಸಿದವು. ಅವನು ಧಾವಿಸುತ್ತ ಮುಂದೆ ಬರಲಾಗಿ ತನ್ನ ಈರ್ವರು ತಾಯಂದಿರೂ ನೆಲದ ಮೇಲೆ ಬಿದ್ದಿರುವುದನ್ನೂ ಶಿರೋರಹಿತವಾದ ಅರ್ಜುನನ ಕಳೇಬರವನ್ನೂ ಕಂಡನು. ರಾಜ, ಏನು ಹೇಳಲಿ! ಬಭ್ರುವಾಹನನು ದುಃಖಾಕ್ರಾಂತನಾಗಿ ನೆಲದಲ್ಲೊರಗಿದನು.

ಯಾವ ದಿನ ಅರ್ಜುನನು ರಣಾಂಗಣದಲ್ಲಿ ಹತನಾಗಿ ಬಿದ್ದನೋ ಅದೇ ದಿನದ ರಾತ್ರಿಯಲ್ಲಿ ಕುಂತಿಗೆ ಒಂದು ದುಃಸ್ವಪ್ನವಾಯಿತು. ಎಚ್ಚರವಾದೊಡನೆಯೇ ಅವಳು ಸಂಭ್ರಾಂತಳಾಗಿ ಧರ್ಮರಾಯನಿಗೂ ಶ್ರೀಕೃಷ್ಣನಿಗೂ ಕನಸಿನ ವಿಚಾರವನ್ನು ತಿಳಿಸಿದಳು. "ನನಗೆ ರಾತ್ರಿ ಒಂದು ಕೆಟ್ಟ ಕನಸು ಬಿದ್ದಿತು. ನಮ್ಮ ಅರ್ಜುನನು ಒಂದು ಎಣ್ಣೆಯ ಭಾವಿಯಲ್ಲಿ ಬಿದ್ದಂತೆಯೂ ಆಮೇಲೆ ಒಂದು ಕತ್ತೆಯ ಮೇಲೆ ಕುಳಿತು ದಕ್ಷಿಣದಿಕ್ಕಿಗೆ ಹೋದಂತೆಯೂ ಕಂಡೆನು. ಅವನು ಗೋಮಯವನ್ನು ಮೈಗೆ ಬಳಿದುಕೊಂಡು ದಾಸವಾಳ ಹೂವಿನ ಮಾಲೆಯನ್ನು ಕೊರಳಿಗೆ ಹಾಕಿಕೊಂಡಿದ್ದನು. ಓ ಕೃಷ್ಣ, ನಿನ್ನ ಗೆಳೆಯನಾದ ಅರ್ಜುನನು ಬದುಕಿರುವಂತೆ ತೋರುವುದಿಲ್ಲ. ಅಯ್ಯೋ! ನನ್ನ ಎದೆ ಸೀಳಿಹೋಗುತ್ತಿದೆ. ಸುಭದ್ರೆಯ ಬಳೆಯು ಕಳಚಿತು!" ಎಂದು ಗೋಳಾಡಿದಳು. ಆಗ ಶ್ರೀಕೃಷ್ಣನು ಗರುಡನನ್ನು ಸ್ಮರಿಸಿಕೊಳ್ಳಲು ಗರುಡನು ಶೀಘ್ರವಾಗಿ ಬಂದನು. ಜಗದೀಶ್ವರನಾದ ಶ್ರೀಕೃಷ್ಣನು ಗರುಡನನ್ನೇರಿ ತನ್ನೊಡನೆ ಭೀಮಸೇನ, ಕುಂತಿ, ದೇವಕಿ ಮತ್ತು ಯಶೋದೆಯರನ್ನು ಕುಳ್ಳಿರಿಸಿಕೊಂಡು, ಅರ್ಜುನನು ಹತನಾಗಿ ಬಿದ್ದ ರಣರಂಗಕ್ಕೆ ಬಂದನು. ಅಲ್ಲಿ ಬಭ್ರುವಾಹನನು ನಡೆಸಿದ ಹತ್ಯಾಕಾಂಡವನ್ನು ವೀಕ್ಷಿಸಿದನು. ರಾತ್ರಿಯಾಗಿದ್ದರೂ ರತ್ನದೀಪಗಳಿಂದಲೂ ಸುವರ್ಣಕುಂಡಲಗಳಿಂದಲೂ ಚಿನ್ನದ ಕಿರೀಟ ಕೈಬಳೆಗಳಿಂದಲೂ ಚಂದನಲಿಪ್ತವಾದ ತೋಳುಗಳಿಂದಲೂ ರಣರಂಗದಲ್ಲಿ ಬೆಳಕು ಹರಡಿತ್ತು! ಸಾವಿರಾರು ಮಂದಿ ಸ್ತ್ರೀಯರು ಅಲ್ಲಿ ನೆರೆದಿದ್ದರು. ಶ್ರೀಕೃಷ್ಣನು "ಭೀಮಸೇನ, ಈ ಸ್ತ್ರೀಯರ ಮುಖಚಂದ್ರಗಳ ಎದುರಿನಲ್ಲಿ ಅರ್ಜುನನ ಮುಖಕಮಲವು ಎಲ್ಲಿಯೋ ಬಾಡಿಹೋಗಿರ ಬೇಕು!" ಎಂದನು. ಅದಕ್ಕೆ ಭೀಮಸೇನನು "ಶ್ರೀಕೃಷ್ಣನೆಂಬ ಸೂರ್ಯನು ಉದಯಿಸಿದ್ದರಿಂದ ನನ್ನ ತಮ್ಮನ ಮುಖಕಮಲವು ಮತ್ತೆ ಅರಳುವುದು!" ಎಂದು ಹೇಳಿದನು.

ಅಷ್ಟರಲ್ಲಿ ಅವರೆಲ್ಲರೂ ಅರ್ಜುನನ ಕಳೇಬರವಿದ್ದಲ್ಲಿಗೆ ಬಂದರು. ಶ್ರೀಕೃಷ್ಣನು ಎಲ್ಲರೊಡನೆ ಗರುಡನಿಂದಿಳಿದು ಅರ್ಜುನನನ್ನು ನೋಡುತ್ತ "ಹಾ! ಅರ್ಜುನ, ಏನು ನಡೆಯಿತು? ಯಾವ ವೀರನು ನಿನ್ನನು ಘಾತಿಸಿದನು? ಇತ್ತ ನೋಡು, ನನ್ನ ತಾಯಂದಿರಾದ ದೇವಕೀ ಯಶೋದಾದೇವಿಯರೂ ನಿನ್ನ ತಾಯಿಯಾದ ಕುಂತಿಯೂ ಭೀಮಸೇನನೂ ನಿನ್ನನ್ನು ನೋಡುತ್ತ ನಿಂತಿದ್ದಾರೆ" ಎಂದು ವಿಲಪಿಸಿದನು. ಆಗ ಭೀಮನು "ಗೋವಿಂದ, ನೀನೂ ಸಹ ಈ ರೀತಿಯಲ್ಲಿ ವಿಲಪಿಸುವೆಯಲ್ಲ. ಕತ್ತಲೆಯ ಭಯ ಸೂರ್ಯನಿಗೂ ಆಗುವುದುಂಟೆ? ಯುದ್ಧದಲ್ಲಿ ನಮ್ಮ ಕುದುರೆಯನ್ನು ಅಪಹರಿಸಿ

ಅರ್ಜುನನನ್ನು ಘಾತಿಸಿಹೋದ ಆ ವೀರನಾದರೂ ಯಾವನು? ನಾನು ಇಲ್ಲಿಗೆ ಬಂದಿರುವೆನೆಂಬುದು ಅವನಿಗೆ ಮೊದಲು ತಿಳಿಯಲಿ? ಆಹಾ! ಅರ್ಜುನನ ಬಳಿಯಲ್ಲಿ ಇನ್ನೊಬ್ಬ ವೀರನು ಹತನಾಗಿ ಬಿದ್ದಿದ್ದಾನೆ. ಅಯ್ಯೋ! ಇವನು ಕರ್ಣಪುತ್ರನಾದ ವೃಷಕೇತು!" ಎಂದು ಹೇಳಿ ಸಮೀಪಕ್ಕೆ ಹೋಗಿ ವಿಹ್ವಲನಾಗಿ 'ಅರ್ಜುನ, ಅರ್ಜುನ!' ಎನ್ನುತ್ತ ಅಳತೊಡಗಿದನು.

ಆಗ ಬಲಾಢ್ಯನಾದ ಬಭ್ರುವಾಹನನೂ ಅವನ ತಾಯಂದಿರಾದ ಚಿತ್ರಾಂಗದೆ ಮತ್ತು ಉಲೂಪಿಯರೂ ಮೂರ್ಛೆಯಿಂದ ಎಚ್ಚತ್ತು, ಶ್ರೀಕೃಷ್ಣನೇ ಮೊದಲಾದವರನ್ನು ಕಂಡರು. ಅವರಲ್ಲಿ ಭೀಮನು ಯಾರೆಂಬುದನ್ನು ತಿಳಿದಮೇಲೆ ಬಭ್ರುವಾಹನನು ಅತ್ಯಂತ ದುಃಖದಿಂದ ಗೋಳಿಡುತ್ತ ಅವನ ಬಳಿಗೆ ಹೋಗಿ "ಭೀಮಸೇನ, ಪುತ್ರನೆನಿಸಿಕೊಂಡ ನಾನು ಪಾಪಿಯಾಗಿದ್ದೇನೆ. ತಂದೆಯನ್ನು ಕೊಂದಿದ್ದೇನೆ. ಈ ಸೈನ್ಯವನ್ನೂ ನಾಶಮಾಡಿ ಕರ್ಣಸುತನಾದ ವೃಷಕೇತುವನ್ನು ಯುದ್ಧದಲ್ಲಿ ಸಂಹರಿಸಿದ್ದೇನೆ. ಈ ರೀತಿಯಲ್ಲಿ ಅಪರಾಧಿಯಾದ ನನ್ನನ್ನು ಗದೆಯಿಂದ ಬಡಿದು ಸಾಯಿಸಿಬಿಡು! ನನ್ನ ಜೀವಿತವನ್ನು ಮುಗಿಸಿಕೊಳ್ಳುವುದಕ್ಕಾಗಿಯೇ ನಾನು ಈ ಯುದ್ಧಕ್ಕೆ ಕೈಹಾಕಿದೆನೆಂದು ಕಾಣುತ್ತದೆ! ನಾಗಲೋಕದಿಂದ ಶೇಷನೇ ಮೊದಲಾದವರು ಸಂಜೀವಕಮಣಿಯನ್ನು ತಂದಿದ್ದಾರೆ. ಆದರೆ ಅಷ್ಟರಲ್ಲಿ ಯಾವನೋ ದುಷ್ಟನು ನನ್ನ ತಂದೆಯ ಶಿರಸ್ಸನ್ನು ಅಪಹರಿಸಿಬಿಟ್ಟನು" ಎಂದು ಹಲುಬಿದನು. ಅನಂತರ ಶ್ರೀಕೃಷ್ಣನನ್ನು ನೋಡಿ "ಸ್ವಾಮಿ-ಗೋವಿಂದ, ನಿನ್ನ ಪಾದಗಳಿಗೆ ವಂದಿಸುತ್ತಿದ್ದೇನೆ, ಕೃಪೆದೋರು. ಸುದರ್ಶನಚಕ್ರದಿಂದ ತಡಮಾಡದೆ ನನ್ನ ತಲೆಯನ್ನು ಕತ್ತರಿಸಿಬಿಡು! ಮಧುಸೂದನ, ಹಿಂದೆ ರಾಹುವಿನ ಶಿರಸ್ಸನ್ನು ಕಡಿದು ಕೆಡಹಿದೆಯಲ್ಲವೆ? ಹಾಗೆಯೇ ನನ್ನ ಶಿರಸ್ಸನ್ನೂ ಕಡಿದುರುಳಿಸು! ತಾಯಿ ತಂದೆಗಳಾಗಲಿ ಬಾಂಧವರಾಗಲಿ ಯಾವಾಗ ಬಂದು ಸಲಹಲಾರರೋ ಆಗ ನೀನು ಬಂದು ಸಲಹುತ್ತೀಯೆ. ಹೇ ಸ್ವಾಮಿ, ಪಿತೃಘಾತುಕನಾದ ನಾನು ನಾನಾನರಕಸಾಗರಗಳಲ್ಲಿ ಉರುಳುವೆನು. ಆದರೆ ನಿನ್ನ ದರ್ಶನವಾದ್ದರಿಂದ ಯಮನೂ ನನ್ನ ಬಳಿಗೆ ಬರಲು ಅಂಜುವನೆಂದು ತೋರುತ್ತದೆ! ನೀನು ಆಗಮಿಸಿದ್ದರಿಂದ ನನಗೆ ಸಾವು ಬರಲಾರದು. ಅವಶ್ಯವಾಗಿ ಒದಗಬೇಕಾದ ನರಕವೂ ತಪ್ಪಿತೆಂದು ಕಾಣುತ್ತದೆ! ಈ ಸಮಯದಲ್ಲಿ ನನಗೆ ಮರಣವೇ ಅತ್ಯಂತಪ್ರಿಯವಾಗಿದೆ. ಬದುಕಿರುವುದೇ ಮಹತ್ತರವಾದ ಸಂಕಟವನ್ನು ಕೊಡುತ್ತಿದೆ. ವಿಷ್ಣುಭಕ್ತರ ಸರ್ವಸ್ವವನ್ನೂ ದೋಚಿದ ಪಾಪಿ ನಾನು. ಈಶ್ವರಾಜ್ಞೆಯನ್ನು ಉಲ್ಲಂಘಿಸಿದೆನು. ಹೇ ಜಗನ್ನಾಥ, ರುದ್ರನ ತ್ರಿಶೂಲಕ್ಕಾದರೂ ನನ್ನನ್ನು ಬಲಿಯಾಗಿ ಮಾಡು. ಇಲ್ಲವೇ, ನಿನ್ನ ಚಕ್ರದಿಂದಾದರೂ ನನ್ನ ತಲೆಯನ್ನು ತರಿದು ಹಾಕು. ಅಜ್ಜಿಯಾದ ಕುಂತೀದೇವಿಯ ಬಳಿಗೆ ಹೋಗಿ ಅವಳನ್ನು ನೋಡಲಾರೆ. ಏಕೆಂದರೆ, ನನ್ನ ತಾಯಿಯ ನಮಸ್ಕಾರವನ್ನು ಅವಳು ಸ್ವೀಕರಿಸಲಿಲ್ಲ. ಯಾವ ಮಾತನ್ನೂ ಆಡಲಿಲ್ಲ. ನನ್ನ ತಾಯಿಯನ್ನು ಆಶೀರ್ವದಿಸಲಿಲ್ಲ" ಎಂದು ವಿಲಪಿಸಿದನು.

# ಪಾರ್ಥ ಸಂಜೀವನ

ಆಗ ಜನಮೇಜಯನು ಜೈಮಿನಿ ಮುನಿಗಳನ್ನು ಕುರಿತು "ಮುನಿಗಳೆ, ವೀರನಾದ ಧನಂಜಯನನ್ನು ಶ್ರೀಕೃಷ್ಣನು ಮಣಿಸ್ಪರ್ಶನದ ಮೂಲಕ ಬದುಕಿಸಿದ ಬಗೆ ಹೇಗೆ? ಅದನ್ನು ದಯವಿಟ್ಟು ತಿಳಿಸಿರಿ" ಎಂದು ಕೇಳಿದನು. ಜೈಮಿನಿ ಮುನಿಗಳು ಹೀಗೆಂದರು:

ಅನಂತರ ನಾಗರಾಜಸುತೆಯಾದ ಚಿತ್ರಾಂಗದೆಯು ಕುಂತಿಯನ್ನು ನೋಡಿ "ದೇವಿ, ಪಾರ್ಥನ ಕೈಯನ್ನು ಹಿಡಿದ ವಿಷದಂಷ್ಟ್ರೆಯಾದ ಈ ಸರ್ಪಿಣಿಯು ನಿನಗೆ ನಮಸ್ಕರಿಸುತ್ತಿದ್ದಾಳೆ! ನೀನು ಗೋಮತಿಯೋ ಹೇಗೆ? ಹಿಂದೆ ಗೋಮತಿ ಎಂಬುವಳು ಪುತ್ರಘಾತುಕನಾದ ಪನ್ನಗನನ್ನು ತ್ಯಜಿಸಿದಳಂತೆ. ಹಾಗೆಯೇ ರಾಜಕನ್ಯೆಯಾದ ನೀನು ನನ್ನನ್ನು ತ್ಯಜಿಸಿದೆ. ಶಾಪದಂಡದಿಂದ ನನ್ನ ಮುಖವನ್ನು ಭಗ್ನಗೊಳಿಸು" ಎಂದು ನುಡಿದಳು.

ಆಗ ಕುಂತಿಯೇ ಮೊದಲಾದ ಸಕಲಸ್ತ್ರೀಯರೂ ಗಟ್ಟಿಯಾಗಿ ಅಳತೊಡಗಿದರು. "ಹಾ! ಅರ್ಜುನ!" ಎಂದು ಒರಲುತ್ತ ಎಲ್ಲರೆದುರಿಗೆ ನೆಲದಲ್ಲಿ ಕುಸಿದರು. ಆಗ ಶೇಷನು ಶ್ರೀಕೃಷ್ಣನಿಗೆ ನಮಸ್ಕರಿಸಿ "ಹೇ ಜಗನ್ನಾಥ, ಹೃಷೀಕೇಶ, ಇದೆಲ್ಲವನ್ನೂ ನೋಡುತ್ತ ನೀನು ನಿಂತಿರುವ ಪರಿ ಏನು? ಧರ್ಮರಾಜನ ವಂಶವೆಲ್ಲವೂ ರಸಾತಳದಲ್ಲಿ ಮುಳುಗಿ ಹೋಯಿತು. ಹೇ ಕೃಪಾಸಾಗರ, ಈ ಮಣಿಯಿಂದ ಧರ್ಮರಾಜನ ವಂಶವನ್ನು ಮೇಲೆತ್ತು. ತಡವೇಕೆ? ಕಲ್ಲಿನಂತಹ ಕಠಿಣ ಹೃದಯರು ಪರರನ್ನು ಮುಳುಗಿಸಿಯಾರು. ಮೇಲೆತ್ತಲಾರರು. ಜನಾರ್ದನ, ನಿನ್ನ ಇಚ್ಛಾಮಾತ್ರದಿಂದ ಅಮೃತವಾದರೂ ದೊರೆಯುತ್ತದೆ. ಮಹಾತ್ಮನಾದ ಪಾಂಡವನ ವಂಶವು ಈಗಲೇ ಮುಳುಗಿದೆ. ನೀನು ಸುಮ್ಮನಿದ್ದು ಅದನ್ನು ಇನ್ನೂ ಕೆಳಗೆ ತಳ್ಳುವೆಯಲ್ಲ? ಸಕಲರೂ ಹೀಗೆ ಅಳುತ್ತಿದ್ದರೆ ಗತಿ ಏನು? ಪಾರ್ಥನ ಶಿರಸ್ಸು ಏನಾಯಿತೆಂಬುದು ನನಗೆ ತಿಳಿಯದು. ಭೂಲೋಕದಿಂದ ಅದನ್ನು ಯಾರು ಎಲ್ಲಿಗೆ ಒಯ್ದರೋ ಗೊತ್ತಾಗುವುದಿಲ್ಲ. ಈ ಸಂದರ್ಭದಲ್ಲಿ ಮಹಾವಿಷ್ಣುಸ್ವರೂಪನಾದ ನೀನು ಏನು ಮಾಡಬೇಕೆಂಬುದನ್ನು ಮಾಡು" ಎಂದು ಬೇಡಿಕೊಂಡನು. ಶೇಷನ ಪ್ರಾರ್ಥನೆಯನ್ನು ಮನ್ನಿಸಿ ವಾಸುದೇವನು "ಮಂತ್ರಸಂಯುತವಾದ ನನ್ನ ನುಡಿಯನ್ನು ಸಕಲರೂ ಆಲಿಸಿರಿ. ಈ ಭೂತಳಲ್ಲಿ ನನ್ನ ಬ್ರಹ್ಮಚರ್ಯವ್ರತಕ್ಕೆ ಯಾವ ಸಂದರ್ಭದಲ್ಲಿಯೂ ಭಂಗವಾಗಿಲ್ಲ ವೆಂಬುದು ದಿಟವಾದರೆ, ಅದರ ಪುಣ್ಯಬಲದಿಂದ ಪಾರ್ಥನ ಶಿರಸ್ಸು ಒಡನೆಯೇ ಇಲ್ಲಿಗೆ ಬರಲಿ! ಆ ಶಿರಸ್ಸನ್ನು ಅಪಹರಿಸಿದವರು ಭಗ್ನಶಿರಸ್ಕರಾಗಿ ಸತ್ತು ಬೀಳಲಿ! ಇದು ನನ್ನ ಆಜ್ಞೆ! ಎಂದು ಹೇಳಿದನು.

ಜನಮೇಜಯ, ಏನು ಹೇಳಲಿ! ದೇವೇಶ್ವರನು ಹೀಗೆ ನುಡಿದೊಡನೆ ಧೃತರಾಷ್ಟ್ರಕನ ಪುತ್ರರಾದ ಈರ್ವರು ಪನ್ನಗರೂ ಸತ್ತು ಹೋದರು! ಪಾರ್ಥನ ಶಿರಸ್ಸು ಒಡನೆಯೇ ಅಲ್ಲಿಗೆ ಬಂದಿಳಿಯಿತು! ಶ್ರೀಕೃಷ್ಣನು ಸಂಜೀವಕಮಣಿಯನ್ನು ಶೇಷನ ಕೈಯಿಂದ ತೆಗೆದುಕೊಂಡು "ಶಿವನ ಆಜ್ಞೆಯನ್ನು ನನ್ನಂಥವರು ಭಗ್ನಗೊಳಿಸಬಾರದು. ಶಿವನ ಅನುಗ್ರಹದಿಂದಲೇ ಪಾರ್ಥನು ಉಜ್ಜೀವಿತನಾಗಲಿ. ನೀವೆಲ್ಲರೂ ಸಾವಧಾನದಿಂದಿರಿ.

ನಾನು ಈ ಮಣಿಯನ್ನು ಪಾರ್ಥನ ಹೃದಯದ ಮೇಲೆ ಇಡುತ್ತೇನೆ. ಮೊದಲು ಕರ್ಣಪುತ್ರನು ಜೀವಂತನಾಗಲಿ" ಎಂದು ಹೇಳಿ ಮಣಿಯನ್ನು ವೃಷಕೇತುವಿನ ಎದೆಯ ಮೇಲೆ ಇಟ್ಟು "ಕರ್ಣಪುತ್ರ, ಎದ್ದೇಳು" ಎಂದನು. ಮಣಿಯನ್ನು ವೃಷಕೇತುವಿನ ದೇಹದ ಮೇಲೆ ಇಡುವುದೇ ತಡ, ಒಡನೆಯೇ ಕಬ್ಬಿಣದ ತುಂಡು ಸೂಜಿಗಲ್ಲಿಗೆ ಸೇರಿಕೊಳ್ಳುವಂತೆ, ಬಭ್ರುವಾಹನನ ಬಾಣಗಳ ಹೊಡೆತಗಳಿಂದ ಕತ್ತರಿಸಲ್ಪಟ್ಟ ಶಿರಸ್ಸು ದೇಹಕ್ಕೆ ಬಂದು ಅಂಟಿಕೊಂಡಿತು! ಧೀರನಾದ ಕರ್ಣಪುತ್ರನು ಮೇಲೆದ್ದು ಬಿಲ್ಲಿಗೆ ಬಾಣಗಳನ್ನು ಹೂಡುತ್ತ 'ನಿಲ್ಲು, ನಿಲ್ಲು!' ಎಂದು ಅಬ್ಬರಿಸಿದನು. ಬಳಿಯಲ್ಲಿಯೇ ವಾಸುದೇವನನ್ನು ಕಂಡು ಚಕಿತನಾಗಿ 'ಕೃಷ್ಣ, ಕೃಷ್ಣ, ಕೇಶವ!' ಎಂದು ಉದ್ಗರಿಸಿದನು! ಅನಂತರ ವೃಷಕೇತುವು ಶ್ರೀಕೃಷ್ಣನಿಗೆ ನಮಸ್ಕರಿಸಲು, ಶ್ರೀಕೃಷ್ಣನು ಅತ್ಯಾನಂದದಿಂದ ಆ ವೀರನನ್ನು ಮುದ್ದಿಸಿದನು. ಆಮೇಲೆ ವಾಸುದೇವನು ಮಣಿಯನ್ನು ಅರ್ಜುನನ ಹೃದಯದ ಮೇಲಿರಿಸಲು, ಪೂರ್ವೋಕ್ತರೀತಿಯಲ್ಲಿ ಅರ್ಜುನನೂ ಜೀವಂತನಾದನು. ಮಾಯಾಧೀನನಾದ ಮಾನವನು ವಿವಿಧ ಭ್ರಾಂತಿಗಳಿಗೆ ಒಳಗಾಗಿ, ಕಡೆಗೆ ಪುಣ್ಯಯೋಗದಿಂದ ನಿರ್ವಿಕಾರನಾದ ಭಗವಂತನನ್ನು ಸಾಕ್ಷಾತ್ಕರಿಸಿದಾಗ ಹೇಗೆ ಎಚ್ಚರಗೊಳ್ಳುವನೋ ಹಾಗೆ ಅರ್ಜುನನು ಎಚ್ಚರಗೊಂಡು ಎದ್ದನು. ಶ್ರೀಕೃಷ್ಣನ ಬಾಹುಗಳಿಂದ ಸುರಕ್ಷಿತನಾದ ಸವ್ಯಸಾಚಿಯನ್ನು ಆ ಪನ್ನಗರೂ ಮೂವರು ವೀರರೂ (ಭೀಮಸೇನ, ವೃಷಕೇತು, ಬಭ್ರುವಾಹನ) ದೃಷ್ಟಿಸಿ ನೋಡಿದರು. ದೇವತೆಗಳು ಅರ್ಜುನನ ಶಿರಸ್ಸಿನ ಮೇಲೆ ಪುಷ್ಪವೃಷ್ಟಿಯನ್ನು ಸುರಿಸಿ ವಿವಿಧ ಶಂಖಗಳನ್ನು ಊದಿದರು. ಸಮಸ್ತ ಸೈನಿಕರೂ ಆನಂದಿತರಾಗಿ ಅರ್ಜುನನಿಗೂ ಶ್ರೀಕೃಷ್ಣನೇ ಮೊದಲಾದ ಪ್ರಮುಖರಿಗೂ ವಂದಿಸಿದರು. ವೀರನಾದ ವೃಷಕೇತುವು ಸಕಲರಿಗೂ ನಮಸ್ಕರಿಸಿ ಭೀಮಸೇನನನ್ನೂ ಪುತ್ರಸಂಜೀವನದಿಂದ ಸಂಹೃಷ್ಟಳಾದ ಕುಂತಿಯನ್ನೂ ಸಂದರ್ಶಿಸಿದನು.

ಅನಂತರ ಶ್ರೀಕೃಷ್ಣನನ್ನು ಹಿಂಬಾಲಿಸಿ ಪ್ರದ್ಯುಮ್ನನೇ ಮೊದಲಾದ ಎಲ್ಲ ಪ್ರಮುಖರೂ ಬಭ್ರುವಾಹನನ ರಾಜಧಾನಿಯನ್ನು ಪ್ರವೇಶಿಸಿದರು. ನಗರದಲ್ಲಿದ್ದ ಸಜ್ಜನರಾದ ಸಮಸ್ತ ಪ್ರಜೆಗಳೂ ಅವರಿಗೆ ಕಾಣಿಕೆಗಳನ್ನಿತ್ತು ಗೌರವಿಸಿದರು. ಆ ಸಮಯದಲ್ಲಿ ಆರುವತ್ತೇಳು ಮಂದಿ ಸುಂದರಿಯರು ಹರ್ಷದಿಂದ ಮೆರವಣಿಗೆಯ ಮುಂದೆ ನರ್ತಿಸುತ್ತ ಹೋದರು. ಆ ನಗರದಲ್ಲಿ ಕುಬೇರನಂತೆ ಧನಾಢ್ಯರಾದ ಬಹುಮಂದಿ ಪ್ರಜೆಗಳನ್ನು ಶ್ರೀಕೃಷ್ಣಾದಿಗಳು ಕಂಡರು. ಆ ಮಣಿಪುರವನ್ನು ಪತಾಕೆಗಳಿಂದ ಅಲಂಕರಿಸಿದ್ದರು. ವಾದ್ಯಗಳು ಧ್ವನಿಗೈಯುತ್ತಿದ್ದವು. ಗಜಾಶ್ವರಥಗಳಿಂದ ಮಣಿಪುರವು ರಂಜಿಸುತ್ತಿತ್ತು. ಕುಬೇರನ ಅಲಕಾವತಿಯಂತೆ ವೈಭವಪೂರ್ಣವಾದ ಆ ನಗರವನ್ನು ವೀಕ್ಷಿಸಿ ಎಲ್ಲರೂ ವಿಸ್ಮಿತರಾದರು. ಆಮೇಲೆ ಬಭ್ರುವಾಹನನ ರಾಜಸಭೆಯನ್ನು ಪ್ರವೇಶಿಸಿ ಮುತ್ತುಗಳಿಂದ ಮಂಡಿತವಾದ ಮಂಟಪದಲ್ಲಿ ಶ್ರೀಕೃಷ್ಣನನ್ನೂ ಅರ್ಜುನನನ್ನೂ ಕುಳ್ಳಿರಿಸಿ ಪ್ರದ್ಯುಮ್ನ ಪ್ರಮುಖರಾದ ವೀರನಾಯಕರೂ ಪನ್ನಗರೂ ಹೀಗೆ ಹೇಳಿದರು: "ಅರ್ಜುನ, ಮಗನಿಂದ ಸೈನ್ಯವು ಹತವಾಯಿತೆಂದೂ ಮಗನೇ ನಿನ್ನನ್ನು ಕೊಂದು ಬದುಕಿಸಿದನೆಂದೂ ಲಜ್ಜಿತನಾಗಬೇಡ. ಮನುಷ್ಯನು ಎಲ್ಲೆಡೆಯೂ ಜಯವನ್ನು ಕೋರಬೇಕು. ಆದರೆ ಪುತ್ರನೊಬ್ಬನಿಂದ ಮಾತ್ರ

ಪರಾಜಯುವನ್ನು ಬಯಸಬೇಕು! ಧನಂಜಯ, ಗಂಗಾಶಾಪದಿಂದ ನಿನಗೆ ಈ ದುರವಸ್ಥೆಯುಂಟಾಯಿತು. ಶ್ರೀಕೃಷ್ಣನ ಅನುಗ್ರಹದಿಂದ ಮತ್ತೆ ಜೀವಂತನಾದೆ. ಭೀಮಸೇನಸಹಿತನಾಗಿ ನಿನ್ನ ಪುತ್ರನ ವೈಭವವನ್ನು ನೋಡಿ ಆನಂದಿಸು. ಕಾಂತೆಯರಾದ ಚಿತ್ರಾಂಗದೆ ಉಲೂಪಿಯರನ್ನೂ ಕಂಡು ಸಂತೋಷಿಸು. ಬಭ್ರುವಾಹನನು ತನ್ನ ಕೃತ್ಯಕ್ಕಾಗಿ ಲಜ್ಜಿತನಾಗಿದ್ದಾನೆ. ಈ ವೀರಪುತ್ರನನ್ನು ಸಂತೈಸು. ಮಗನು ಸಂಪಾದಿಸಿದ ಸಕಲ ರಾಜ್ಯವನ್ನೂ ಸ್ವೀಕರಿಸು" ಎಂದು ಹೇಳಿ ಶ್ರೀಕೃಷ್ಣನನ್ನು ಕುರಿತು ಹೀಗೆಂದರು: "ವಾಸುದೇವ, ನೀನು ಮಹಾಬುದ್ಧಿಶಾಲಿ. ಅರ್ಜುನಿಗೆ ಬುದ್ಧಿಯನ್ನು ಹೇಳು. ತಂದೆಮಕ್ಕಳನ್ನು ಜೊತೆಗೂಡಿಸಿ ಇಬ್ಬರನ್ನೂ ಸಂತೈಸು. ಇವರಿಬ್ಬರನ್ನೂ ಕುಂತಿ, ದೇವಕಿ, ಭೀಮಸೇನ, ಯಶೋದೆ-ಇವರೊಡನೆ ಸೇರಿಸಿ ಮಾತನಾಡಿಸಿ ಸಾಂತ್ವನಗೊಳ್ಳುವಂತೆ ಮಾಡುವುದು ಯೋಗ್ಯವಾಗಿದೆ. ಇತ್ತ ನೋಡು, ವೀರನಾದ ಬಭ್ರುವಾಹನನು ತಲೆಯನ್ನು ತಗ್ಗಿಸಿ ಕುಳಿತಿದ್ದಾನೆ. ತಲೆಯೆತ್ತಿ ಅರ್ಜುನನನ್ನು ನೋಡಲಾರದೆ ಇದ್ದಾನೆ. ತನ್ನ ತಂದೆಯುನ್ನು ವಧಿಸಿದ್ದರಿಂದ ಪಾಪಿಯಾದೆನೆಂದು ದೇಹವನ್ನು ಬಿಡಲು ಉದ್ದೇಶಿಸಿದ್ದಾನೆ" ಎಂದರು.

ಆಗ ಕೀರ್ತಿಶಾಲಿಯಾದ ಬಭ್ರುವಾಹನನು ಶ್ರೀಕೃಷ್ಣನನ್ನೂ ತನ್ನ ತಂದೆಯಾದ ಅರ್ಜುನನ್ನೂ ತನ್ನ ಸಿಂಹಾಸನದಲ್ಲಿ ಕುಳ್ಳಿರಿಸಿ "ನಾನು ಹಿಮಾಲಯಕ್ಕೆ ಹೋಗಿ ಈ ದೇಹವನ್ನು ತ್ಯಜಿಸುತ್ತೇನೆ. ಇನ್ನು ಯಾವ ವಿಧದಲ್ಲಿಯೂ ನಾನು ಮಾಡಿದ ಪಾತಕವು ಈ ದೇಹವನ್ನು ಬಿಡದು. ಶ್ರೀಕೃಷ್ಣಭಕ್ತನೂ ಧರ್ಮಕಾರ್ಯದಲ್ಲಿ ಉದ್ಯುಕ್ತನೂ ಆದ ತಂದೆಯನ್ನು ವಧಿಸಿದ ಪಾಪಿ ನಾನು. ಯಾವ ಬಗೆಯಲ್ಲಿಯೂ ನನಗೆ ಸಮಾಧಾನವಿಲ್ಲ. ಆದ್ದರಿಂದ ಈ ಶರೀರವನ್ನು ತ್ಯಜಿಸವೆನು" ಎಂದನು. ಅದನ್ನು ಕೇಳಿ ಭೀಮಸೇನನು "ಎಲೈ ವೀರಾಗ್ರಣಿ, ನಿನ್ನ ಶರೀರದಲ್ಲಿ ಪಾತಕವಿರುವುದಾದರೆ ದೇವಕೀನಂದನನಾದ ಶ್ರೀಕೃಷ್ಣನು ನಿನ್ನ ಸಮೀಪದಲ್ಲಿಯೇ ಇರುತ್ತಿರಲಿಲ್ಲ! ನಿನ್ನ ತಂದೆಗಳಾದ ನಾವು ಪಿತಾಮಹನಾದ ಭೀಷ್ಮನನ್ನೂ ಗುರುವಾದ ದ್ರೋಣನನ್ನೂ ಅಣ್ಣನಾದ ಕರ್ಣನನ್ನೂ ಸಂಹರಿಸಿದೆವು. ಆದರೆ ಶ್ರೀಕೃಷ್ಣನಿಂದ ವೀಕ್ಷಿತರಾದ ಪ್ರಯುಕ್ತ ದೋಷವು ತಗುಲದೆ ಪಾವನರಾದೆವು. ನಿನ್ನ ತಂದೆಯಾದರೋ ಮತ್ತೆ ಬದುಕಿರುವನು. ಶ್ರೀ ಕೃಷ್ಣನಿಂದ ವೀಕ್ಷಿತನಾದ ನಿನ್ನಲ್ಲಿ ಯಾವ ದೋಷವೂ ಉಳಿದಿಲ್ಲ. ನೀನು ಪಾವನನಾದೆ. ಆದ್ದರಿಂದ ವತ್ಸ, ಈ ಶೋಕವನ್ನು ತ್ಯಜಿಸಿ ಧರ್ಮರಾಜನ ಅಶ್ವವನ್ನು ಬಿಟ್ಟುಕೊಡು. ಶ್ರೀಕೃಷ್ಣನ ಎದುರಿಗೆ ನಿನ್ನ ಪಾತಕವು ಉಳಿದೀತೆ? ಅದಕ್ಕೆ ಯಾವ ಗಣನೆಯುಂಟು? ಪಂಚಪಾತಕಗಳನ್ನು ಆಚರಿಸಿದವನೂ ಸಹ ಈತನ ನಾಮಸ್ಮರಣೆಯಿಂದ ಉದ್ಧಾರ ವಾಗಿದ್ದಾರೆ. ಮುಂದೆ ನಾಲ್ಕನೆಯ ಕಲಿಯುಗದಲ್ಲಿಯೂ ಮಹಾತೇಜಸ್ವಿಯಾದ ಈ ವಿಷ್ಣುವಿನ ನಾಮವೇ ಪಾಪಿಗಳಾದ ಜನರನ್ನು ಪಾವನಗೊಳಿಸುವುದು. ಯಾರ ನಾಲಿಗೆಯು ಸದ್ಭಾವನೆಯಿಂದ ಕೃಷ್ಣನಾಮವನ್ನು ನುಡಿಯುವುದೋ ಅವರಿಗೆ ದುಃಖವೆಲ್ಲಿ? ದೈನ್ಯವೆಲ್ಲಿ? ಪಾಪಭಯವೆಲ್ಲಿ?" ಎಂದು ಸಂತೈಸಿದನು. ಅನಂತರ ಶ್ರೀಕೃಷ್ಣನು ಎಲ್ಲರಿಗೂ ಬುದ್ಧಿವಾದವನ್ನು ಹೇಳಿ ಅವರ ಶೋಕವೈರಾದಿಭಾವಗಳನ್ನು ಹೋಗಲಾಡಿಸಿದನು. ಎಲ್ಲರೂ

ಸಂತೃಪ್ತರಾಗಿ ಆನಂದದಿಂದ ನಲಿದರು. ಮಂಗಳವಾದ್ಯಗಳು ಭೋರ್ಗರೆದವು. ಬೇಕಾದಷ್ಟು ದಾನಧರ್ಮಗಳನ್ನು ನಡೆಸಿದರು. ನಡೆದು ಹೋದ ಯುದ್ಧದ ಬಗೆಯನ್ನು ಮಾತಾಡಿಕೊಳ್ಳುತ್ತ ವಿಸ್ಮಿತರಾದರು. ಶೇಷಾದಿ ಪನ್ನಗರು ಶ್ರೀಕೃಷ್ಣನನ್ನೂ ವೃಷಕೇತುವನ್ನೂ ಕೊಂಡಾಡಿದರು. ಐದನೆಯ ದಿವಸ ಶ್ರೀಕೃಷ್ಣನು ಯಜ್ಞಾಶ್ವವನ್ನು ಸೆರೆಯಿಂದ ಬಿಡಿಸಿದನು. ಕುಂತಿಯು ಸೊಸೆಯರೊಂದಿಗೆ ಮೊಮ್ಮಗನ ಮನೆಯಲ್ಲಿ ಆನಂದದಿಂದ ಇದ್ದಳು. ಗಾಯಕರು ಹಾಡುತ್ತಲೇ ಇದ್ದರು. ನಟರು ನರ್ತಿಸುತ್ತಲೇ ಇದ್ದರು.

ಅರ್ಜುನನು ಸಂತೋಷದಿಂದ ತನ್ನ ಮಗನಾದ ಬಭ್ರುವಾಹನನೊಡನೆ ಸಿಂಹಾಸನದಲ್ಲಿ ಕುಳಿತಿದ್ದನು. ಆಗ ಕೃಷ್ಣನು “ಅರ್ಜುನ, ಬಭ್ರುವಾಹನನ ಅರಮನೆಯಲ್ಲಿ ನಾವೆಲ್ಲರೂ ಸುಖದಿಂದ ಇದ್ದೇವೆ. ಆದರೆ ಐದು ರಾತ್ರಿಗಳು ಕಳೆದು ಹೋದವು, ನೋಡು. ಈಗ ಭೀಮಸೇನನು ಕುಂತಿ, ಯಶೋದೆ, ಉಲೂಪಿ ಮೊದಲಾದವರೊಡನೆ ಧರ್ಮರಾಜನ ಬಳಿಗೆ ಹೋಗಲಿ. ಚಿತ್ರಾಂಗದೆಯೂ ವಿವಿಧಧನರಾಶಿಯನ್ನು ತೆಗೆಸಿಕೊಂಡು ಹಸ್ತಿನಾವತಿಗೆ ಹೋಗಲಿ. ಇವರೆಲ್ಲರೂ ಹೋಗಿ ಯಜ್ಞದ ಕಾರ್ಯವನ್ನು ಆರಂಭಿಸಬಹುದೆಂದು ನನಗೆ ತೋರುತ್ತದೆ. ಏಕೆಂದರೆ, ನಾನು ಇತ್ತ ಬಂದುದರಿಂದ ಧರ್ಮರಾಜನಿಗೆ ಬಹಳ ಚಿಂತೆಯಾಗಿರುತ್ತದೆ. ನೀನು, ಬಭ್ರುವಾಹನ, ನಾನು, ವೃಷಕೇತು, ಹಂಸಧ್ವಜನೇ ಮೊದಲಾದ ಇತರ ವೀರರೂ ಅಶ್ವದ ರಕ್ಷಣೆಗಾಗಿ ನಿಲ್ಲೋಣ. ಪಾರ್ಥ, ಇನ್ನೂ ಮುಂದೆ ವಿಷ್ಣುಭಕ್ತರಾದ ಬಹುಮಂದಿ ರಾಜರಿದ್ದಾರೆ. ಅವರನ್ನು ನಾವು ಎದುರಿಸಬೇಕಾಗುತ್ತದೆ. ನನಗೂ ಸಹ ಅವರನ್ನು ಸುಲಭವಾಗಿ ಗೆಲ್ಲುವುದು ಶಕ್ಯವಲ್ಲ! ಹೀಗಿರುವಾಗ ನಿನ್ನನ್ನು ಬಿಟ್ಟು ನಾನು ಹೋಗುವುದು ಹೇಗೆ?” ಎಂದು ಹೇಳಿದನು.

ಈ ಪರಿಯಲ್ಲಿ ಮಹಾಭಾಗನಾದ ವಾಸುದೇವನು ಮಂತ್ರಾಲೋಚನೆಯನ್ನು ಹೇಳಿ ಭೀಮಸೇನನನ್ನೂ ಕುಂತೀ ಮೊದಲಾದ ಸ್ತ್ರೀಯರನ್ನೂ ಧನರಾಶಿಯೊಡನೆ ಹಸ್ತಿನಾವತಿಗೆ ಕಳಿಸಿಕೊಟ್ಟನು. ತಾನು ಯಜ್ಞಾಶ್ವದ ರಕ್ಷಣೆಗಾಗಿ ಕುತೂಹಲದಿಂದ ಉಳಿದನು. ಆಮೇಲೆ ಶೇಷಾದಿ ಪನ್ನಗ ಪ್ರಮುಖರು ಸಂತೋಷದಿಂದ ಶ್ರೀಕೃಷ್ಣನಿಗೆ ನಮಿಸಿ ಅವನ ಅನುಜ್ಞೆಯನ್ನು ಪಡೆದು ಪಾತಾಳಕ್ಕೆ ಹೊರಟು ಹೋದರು. ಬಭ್ರುವಾಹನನು ಅವರನ್ನು ಸತ್ಕರಿಸಿ ಬೀಳ್ಕೊಟ್ಟನು.

ಈ ಪ್ರಕಾರವಾದ ವಾಸುದೇವಾರ್ಜುನರ ಚರಿತ್ರೆಯನ್ನೂ ಕರ್ಣಪುತ್ರನೊಡನೆ ಅರ್ಜುನನು ಜೀವಂತನಾದ ಬಗೆಯನ್ನೂ ಶ್ರದ್ಧೆಯಿಂದ ಯಾರು ಕೇಳುವರೋ ಅವರು ಸರ್ವಪಾಪಗಳಿಂದಲೂ ವಿಮುಕ್ತರಾಗುತ್ತಾರೆ. ಇದರಲ್ಲಿ ಸಂದೇಹವಿಲ್ಲ. ಶ್ರೀಕೃಷ್ಣನ ಪುಣ್ಯಕರವಾದ ಈ ಕಥಾನಕವನ್ನು ಕೇಳತಕ್ಕವನಿಗೆ ಎಂದಿಗೂ ಅಪಮೃತ್ಯುವಿನ ಭಯವಿಲ್ಲ.

# ತಾಮ್ರಧ್ವಜನ ಸಂಭಾಷಣೆ

ಆಮೇಲೆ ಜನಮೇಜಯರಾಯನು "ಜೈಮಿನಿ ಮಹರ್ಷಿಗಳೆ, ಅನಂತರ ಏನಾಯಿತು? ಶ್ರೀಕೃಷ್ಣನಿಂದಲೂ ಇತರ ವೀರರಿಂದಲೂ ಸಮೇತನಾದ ಪಾರ್ಥನು ಯಜ್ಞಾಶ್ವವನ್ನು ಹೇಗೆ ರಕ್ಷಿಸಿದನು? ನಿಮ್ಮ ಬಾಯಿಯಿಂದ ಬರುವ ಕಥಾನಕವನ್ನು ಕೇಳುತ್ತಿದ್ದರೆ ನನಗೆ ಪರಮ ಸೌಖ್ಯವೆನಿಸುವುದು. ವಾಸುದೇವನ ಚರಿತಾಮೃತವನ್ನು ಕುಡಿದರೆ ಹೃದಯಕ್ಕೆ ಆನಂದವಾಗುವುದು. ಕ್ಷೀರಸಮುದ್ರವು ಸ್ವತಃ ಸಂತಾಪಹಾರಿಯೆಂದು ಹೇಳುತ್ತಾರೆ. ಅದು ಮಲಯಾನಿಲಯುಕ್ತವಾದ ಚಂದ್ರಕಿರಣಗಳಿಂದ ಶೀತಳವಾಗಿ ಹೂಗಳಿಂದ ಅಲಂಕೃತವಾದರೆ, ಇನ್ನೆಷ್ಟು ಸಂತಾಪಹಾರಿಯಾಗಬಹುದು! ಅದರಂತೆಯೇ ನಿಮ್ಮ ಮುಖದಿಂದ ಹೊರಬರುವ ರಸವತ್ತಾದ ಈ ಕಥಾಮೃತವು ಪರಮಾಹ್ಲಾದವನ್ನು ಉಂಟುಮಾಡುತ್ತಿದೆ. ಭೀಮನು ಹಸ್ತಿನಾವತಿಗೆ ಹೋದ ಮೇಲೆ ಜನಾರ್ದನನು ಏನು ಮಾಡಿದನು? ಅದೆಲ್ಲವನ್ನೂ ಕೃಪೆಯಿಂದ ನನಗೆ ಹೇಳಬೇಕು. ಜಗದೀಶ್ವರನಾದ ಶ್ರೀಕೃಷ್ಣನ ಮಾಹಾತ್ಮ್ಯವನ್ನು ಕೊಂಡಾಡದಿರುವ ಜನರ ಬಾಯಿಗಳು ಹುಳುಗಳಿಂದ ತುಂಬಿದ ಬಿಲಗಳೆಂದು ನಾನು ತಿಳಿಯುತ್ತೇನೆ! ಬಭ್ರುವಾಹನನ ನಗರದಿಂದ ಹೊರಟ ರಾಜಾಶ್ವವು ಯಾವ ಯಾವ ರಾಷ್ಟ್ರಗಳಲ್ಲಿ ಸಂಚರಿಸಿತು-ಎಂಬುದನ್ನು ಹೇಳಿರಿ" ಎಂದನು. ಆಗ ಜೈಮಿನಿ ಮುನಿಗಳು ಹೀಗೆಂದರು:

ಮಹಾರಾಜ, ಬಲಾಢ್ಯರಾದ ಶ್ರೀಕೃಷ್ಣಾದಿಗಳು ಯಜ್ಞಾಶ್ವವನ್ನು ಮಣಿಪುರದಿಂದ ಹೊರಗೆ ಬಿಡಲು ಅದು ಮುಂದಕ್ಕೆ ಪ್ರಯಾಣ ಮಾಡಿತು. ಆ ಅಶ್ವವನ್ನು ತಾಮ್ರಧ್ವಜನೆಂಬವನು ಕಂಡನು. ಆತನು ತನ್ನ ತಂದೆಯಾದ ಮಯೂರಧ್ವಜನು ಯಜ್ಞಾರ್ಥವಾಗಿಯೇ ಬಿಟ್ಟಿದ್ದ ಅಶ್ವವನ್ನು ರಕ್ಷಿಸುತ್ತ ಬರುತ್ತಿದ್ದನು. ಮಯೂರಧ್ವಜನು ರತ್ನಪುರದ ದೊರೆ. ಧರ್ಮರಾಯನ ಕುದುರೆಯು ಮಯೂರಧ್ವಜನ ಕುದುರೆಯ ಬಳಿಗೆ ಹೋಗಿ ಅದನ್ನು ಒದೆಯಿತು! ಮತ್ತೆ ಮುಕ್ತಾಲಂಕೃತವಾದ ಅದರ ಮುಸಡನ್ನು ಕೋಪದಿಂದ ಕಚ್ಚಿತು. ಆಗ ಮಯೂರಧ್ವಜನ ಕುದುರೆಯೂ ಸಹ ಎರಡು ಕಾಲುಗಳಿಂದ ಇದರ ಎದೆಯನ್ನು ಒದೆಯಿತು! ಆಮೇಲೆ ಅವೆರಡು ಅಶ್ವಗಳೂ ತಮ್ಮ ಹೆಗಲನ್ನು ತುರಿಸಿಕೊಳ್ಳತೊಡಗಿದವು. ಆಗ ತಾಮ್ರಧ್ವಜನು ಮಂತ್ರಿಯಾದ ಬಹುಲಧ್ವಜನನ್ನು ಕರೆದು "ಅದು ಯಾರ ಯಜ್ಞಾಶ್ವವಿರಬಹುದು? ಪತ್ರವನ್ನು ತೆರೆದು ಓದಿನೋಡು" ಎಂದನು. ಬಹುಲಧ್ವಜನು ಆ ಕುದುರೆಯನ್ನು ಹಿಡಿದು ನಿಲ್ಲಿಸಿ ಪತ್ರವನ್ನು ಓದಿಕೊಂಡು ಅದರ ಸಾರಾಂಶವನ್ನು ತಾಮ್ರಧ್ವಜನಿಗೆ ತಿಳಿಸಿದನು. ಮಂತ್ರಿಯ ನುಡಿಯನ್ನು ಕೇಳಿ ಆ ಯುವರಾಜನು ಕುಪಿತನಾಗಿ ಧರ್ಮರಾಜನ ಕುದುರೆಯನ್ನು ಕಟ್ಟಿಹಾಕಿದನು. ಕೃಷ್ಣಾರ್ಜುನರಿಂದಲೂ ಪ್ರದ್ಯುಮ್ನ ಅನಿರುದ್ಧ ಹಂಸಧ್ವಜ ಅನುಸಾಲ್ವ ವೃಷಕೇತು ಮುಂತಾದ ವೀರರಿಂದಲೂ ರಕ್ಷಿತವಾದ ಅಶ್ವವನ್ನು ತಾಮ್ರಧ್ವಜನು ನಿರ್ಭಯವಾಗಿ ಬಂಧಿಸಿದನು. ಅನಂತರ ಸರ್ವಶಸ್ತ್ರಸಂನದ್ಧವಾದ ತನ್ನ ಸೇನೆಯನ್ನು ವ್ಯೂಹಾಕಾರವಾಗಿ ನಿಲ್ಲಿಸುತ್ತ "ಬಹುಲಧ್ವಜ, ಯಜ್ಞದೀಕ್ಷಿತನಾದ ನನ್ನ ತಂದೆಯು ಇದುವರೆಗೆ ಏಳು ಯಾಗಗಳನ್ನು

ನಡೆಸಿ, ಈಗ ಎಂಟನೆಯ ಯಾಗದಲ್ಲಿ ತೊಡಗಿದ್ದಾನೆ. ಈಗ ನಾವು ರಕ್ಷಿಸುತ್ತಿರುವುದು ಎಂಟನೆಯ ಅಶ್ವ. ಏಳು ಅಶ್ವಮೇಧಗಳೂ ಶ್ರೀಕೃಷ್ಣನಿಲ್ಲದೆ ನಡೆದುಹೋದವು. ನಮ್ಮ ಎಂಟನೆಯ ಅಶ್ವಮೇಧವು ಶ್ರೀಕೃಷ್ಣನೆದುರಿಗೆ ನಡೆಯುವುದು! ನೀವೆಲ್ಲರೂ ಈಗ ಶ್ರೀಕೃಷ್ಣನನ್ನೆದುರಿಸಬೇಕಾಗುವುದು. ಎಲೈ ಬುದ್ಧಿಶಾಲಿಯಾದ ಮಂತ್ರಿಯೆ, ಈಗ ಘೋರ ಯುದ್ಧವು ನಡೆಯುವುದು!" ಎಂದನು. ಅದನ್ನು ಕೇಳಿ ಬಹುಲಧ್ವಜನು, "ಯುವರಾಜ, ಅರ್ಜುನನ ಸೇನಾಬಲ ಅತ್ಯಲ್ಪ. ನಿನ್ನ ವಿಶಾಲವಾದ ಸೇನೆಯೊಳಗೆ ಅದು ಕಾಣದಂತೆ ಅಡಗಿಹೋಗುವುದು! ನಿನ್ನ ರಾಷ್ಟ್ರದ ಬಲವನ್ನು ತಿಳಿದವನು ಬಭ್ರುವಾಹನನೊಬ್ಬನೇ. ಅಥವಾ ಅವನಿಗೂ ಪೂರ್ಣವಾಗಿ ತಿಳಿದಿಲ್ಲವೋ ಏನೋ! ಬಭ್ರುವಾಹನನು ನಿನ್ನ ತಂದೆಗೆ ಒಂದು ಭಾರ ಮುತ್ತುಗಳನ್ನು ಕಪ್ಪವಾಗಿ ಕೊಡುತ್ತಿದ್ದಾನೆ! ಮಯೂರಧ್ವಜನ ಅರಮನೆಯಲ್ಲಿ ಪ್ರತಿದಿನವೂ ನರ್ತಕಿಯರು ಪುಷ್ಪಾಂಜಲಿಗಳಲ್ಲಿ ಆ ಮುತ್ತುಗಳನ್ನು ಹಿಡಿದು ಧೂಳಿನಂತೆ ತೂರಿಬಿಡುತ್ತಾರೆ! ಈ ಗ್ರಾಮದ ಬಳಿಯಲ್ಲಿ ಮಹಾವೀರರಾದ ನಮ್ಮ ಸೈನಿಕರಿಗೆ ಘೋರಯುದ್ಧವನ್ನು ನೋಡುವ ಪ್ರಸಂಗ ಬಂದೀತೆ? ಶತ್ರುಗಳಲ್ಲಿ ಕೆಲವರು ಅಶಕ್ತರು. ಕೆಲವರು ಯುದ್ಧದಲ್ಲಿ ಹತರಾಗಿದ್ದಾರೆ. ನಿರ್ಧನರೂ ಅಪುಷ್ಟರೂ ಅಲ್ಪಪೌರುಷರೂ ಆದ ಇವರ ಅಶ್ವವನ್ನು ಬಂಧಿಸಿದರೆ ಎಂತಹ ಯುದ್ಧ ನಡೆದೀತು!" ಎಂದನು. ತಾಮ್ರಧ್ವಜನು "ಅವರಲ್ಲಿ ಇತರ ವೀರರು ನನ್ನೆದುರಿಗೆ ಯಾವ ಲೆಕ್ಕಕ್ಕೆ ಬಂದಾರು? ವೀರರೂ ಧೀರರೂ ಎಂದರೆ ಬಭ್ರುವಾಹನ ಮತ್ತು ಕರ್ಣಪುತ್ರನಾದ ವೃಷಕೇತು. ಇವರಿಬ್ಬರ ಪೌರುಷವೆಷ್ಟೆಂಬುದನ್ನು ಒಂದು ರಾತ್ರಿ ನಾರದರಿಂದ ನಾನು ಕೇಳಿದ್ದೇನೆ. ಅಲ್ಲದೆ ಪಾರ್ಥನೂ ಕೃಷ್ಣನೂ ನರನಾರಾಯಣರ ಅವತಾರವೆಂದು ಅವರು ಹೇಳಿದರು. ಇನ್ನು ಪ್ರದ್ಯುಮ್ನ, ಅನಿರುದ್ಧ ಮತ್ತು ಸಾತ್ಯಕಿ ಈ ಮೂವರು ಕೃಷ್ಣನಿಗೆ ಸಮಾನರಾದ ವೀರರಂತೆ. ಆದ್ದರಿಂದ ಯುದ್ಧವು ನಡೆಯುವುದು! ನಮ್ಮ ಸೇನೆಯನ್ನು ಅರ್ಧಚಂದ್ರಾಕೃತಿಯ ವ್ಯೂಹದಿಂದ ನಿಲ್ಲಿಸು. ಓಹೋ! ಶ್ರೀಕೃಷ್ಣನ ಘೋರವಾದ ಪಾಂಚಜನ್ಯ ಧ್ವನಿಯು ಕೇಳಿಸುತ್ತಿದೆ! ಪಾಂಡವನು ದೇವದತ್ತವನ್ನು ಮೊಳಗಿಸುತ್ತಿದ್ದಾನೆ! ರಥಿಕರು ಶಸ್ತ್ರಪಾಣಿಗಳಾಗಿ ಅವರ ಯಜ್ಞಾಶ್ವಕ್ಕಾಗಿ ಧಾವಿಸಿ ಬರುತ್ತಿದ್ದಾರೆ" ಎಂದು ಹೇಳಿದನು. ಒಡನೆಯೇ ಸೇನೆಯನ್ನು ವ್ಯೂಹಾಕಾರವಾಗಿ ನಿಲ್ಲಿಸಿ ಧೈರ್ಯದಿಂದ ಯುದ್ಧಕ್ಕೆ ಸಜ್ಜಾದನು.

ವಾಸುದೇವನು ಯುದ್ಧಕ್ಕೋಸ್ಕರ ಸಿದ್ಧರಾಗಿದ್ದ ತಾಮ್ರಧ್ವಜನನ್ನೂ ಅವನ ಯೋಧರನ್ನೂ ನೋಡಿದನು. ಅವನು ಮುಗುಳ್ನಗೆಯನ್ನು ಬೀರುತ್ತ ಅರ್ಜುನನನ್ನು ಕೈಯಿಂದ ಮುಟ್ಟಿ "ಪಾರ್ಥ, ಅಗೋ, ಅಲ್ಲಿರುವ ತಾಮ್ರಧ್ವಜನನ್ನು ನೋಡು. ಅವನು ಮಯೂರಧ್ವಜನ ಮಗ. ಅವನು ತನ್ನ ಯಜ್ಞಾಶ್ವವನ್ನು ರಕ್ಷಿಸುತ್ತಿರುವಾಗಲೇ ನಿನ್ನ ಅಶ್ವವನ್ನು ಬಂಧಿಸಿದನು. ಇಲ್ಲಿ ಘೋರವಾದ ಯುದ್ಧವು ನಡೆಯಲಿದೆ. ಬಹುಮಂದಿ ವೀರರು ಮಡಿಯಬಹುದು. ಹರಿಯು ವೇದವನ್ನು ಶಂಖಾಸುರನಿಂದ ಬಿಡಿಸಿ ತಂದಂತೆ ನಿನ್ನ ಅಶ್ವವನ್ನು ಈ ಮಹಾವೀರನಿಂದ ಬಿಡಿಸಿಕೊ! ಪ್ರದ್ಯುಮ್ನನೇ ಮೊದಲಾದ ವೀರರು ಬಭ್ರುವಾಹನನಿಂದ ರಕ್ಷಿತರಾಗಿ ಯುದ್ಧವನ್ನು ನಡೆಸುವರು. ನೀನು ನನ್ನ ಬಳಿಯಲ್ಲಿಯೇ

ಇದ್ದು ಸಂಗ್ರಾಮವನ್ನು ನಡೆಸು. ನಾನು ಈ ರಣಭೂಮಿಯನ್ನು ತ್ಯಜಿಸಿಹೋದಲ್ಲಿ ಆಗ ನನ್ನೊಡನೆಯೇ ಬಂದು ಬಿಡು. ಈ ತಾಮ್ರಧ್ವಜನ ತಂದೆಯು ನರ್ಮದಾತೀರದಲ್ಲಿ ಯಜ್ಞದೀಕ್ಷಿತನಾಗಿದ್ದಾನೆ. ಈ ತಾಮ್ರಧ್ವಜನು ಶೂರನೂ ಜಿತೇಂದ್ರಿಯನೂ ಸತ್ಯವಂತನೂ ಅಸೂಯಾರಹಿತನೂ ಆದವನು. ಪಾರ್ಥ, ಈತನೊಡನೆ ನೀನು ಯುದ್ಧಮಾಡುವುದು ಅಶಕ್ಯವೇ ಸರಿ. ಇದು ಸತ್ಯವೆಂದು ತಿಳಿ. ಇರಲಿ; ಧನಂಜಯ, ನೀನು ಗೃಧ್ರವ್ಯೂಹವನ್ನು ರಚಿಸು. ತಾಮ್ರಧ್ವಜನ ಪಕ್ಕದಲ್ಲಿರುವ ವೀರಯೋಧರು ಯಮನಿಗೆ ಸದೃಶರೆಂದು ನನ್ನ ಭಾವನೆ. ಅವರನ್ನು ನನ್ನ ಕಡೆಯವರು ಎದುರಿಸಲಿ. ದಾರುಕನು ನಡೆಸುವ ನನ್ನ ರಥವನ್ನೇರಿ, ನಾನು ನನ್ನ ಪುತ್ರರಿಂದಲೂ ಪೌತ್ರರಿಂದಲೂ ಸಮೇತನಾಗಿ ಹೋರಾಡುವೆನು. ಅರ್ಜುನ, ನೀನು ಬಳಲಿದ್ದೀಯೆ. ಈಗ ಸಕಲವೀರರಿಗೂ ವಿನಾಶಕಾಲವು ಪ್ರಾಪ್ತವಾಯಿತೆಂದು ನನಗೆ ತೋರುತ್ತದೆ" ಎಂದು ಹೇಳಿದನು.

ಶ್ರೀಕೃಷ್ಣನು ಈ ರೀತಿಯಲ್ಲಿ ನುಡಿದು ತನ್ನ ರಥವನ್ನು ಹತ್ತಿದನು. ಪಾಂಡವಸೇನೆಯು ಗೃಧ್ರವ್ಯೂಹದಿಂದ ಸಿದ್ಧವಾಯಿತು. ಯದುರಾಜನಾದ ಶ್ರೀಕೃಷ್ಣನು ಗೃಧ್ರವ್ಯೂಹದ ಮುಖಸ್ಥಾನದಲ್ಲಿ ಬಂದು ನಿಂತುದನ್ನು ಸಕಲರೂ ನೋಡಿದರು. ಅನುಸಾಲ್ವನು ಗೃಧ್ರದ ಕುತ್ತಿಗೆಯ ಸ್ಥಾನದಲ್ಲಿ ನಿಂತನು. ಹಂಸಧ್ವಜನು ಕಣ್ಣಿನಲ್ಲಿಯೂ ಯದುನಂದನರಾದ ಪ್ರದ್ಯುಮ್ನನೂ ಮತ್ತು ಅನಿರುದ್ಧನೂ ರೆಕ್ಕೆಗಳಲ್ಲಿಯೂ ಸಾತ್ಯಕಿ ಮತ್ತು ಭೋಜವರ್ಧನ ಇವರಿಬ್ಬರು ಪಾದಗಳಲ್ಲಿಯೂ ನಿಂತರು. ಯೌವನಾಶ್ವ ಮತ್ತು ಮೇಘವರ್ಣರೆಂಬಿಬ್ಬರು ಗೃಧ್ರವ್ಯೂಹದ ರಕ್ಷಣಾಕಾರ್ಯದಲ್ಲಿ ನಿರತರಾದರು. ಅರ್ಜುನನು ಸೇನಾಪರಿವೃತನಾಗಿ ಹೃದಯಸ್ಥಾನದಲ್ಲಿ ನಿಂತನು. ವೀರರಾದ ಬಭ್ರುವಾಹನ ಮತ್ತು ವೃಷಕೇತು ಇವರಿಬ್ಬರು ಕೊಕ್ಕಿನ ಸ್ಥಾನದಲ್ಲಿ ಸಜ್ಜಾದರು. ಹೀಗೆ ಬಹುಮಂದಿ ವೀರರು ಯುದ್ಧಸಂನದ್ಧರಾದುದನ್ನು ಕಂಡು ತಾಮ್ರಧ್ವಜನು ಸಂತುಷ್ಟನಾಗಿ ಮುಂದೆ ಬಂದು ಶ್ರೀಕೃಷ್ಣನನ್ನು ಸಂಬೋಧಿಸಿ ಹೀಗೆಂದನು: "ಕೃಷ್ಣ, ನಾನು ಕಟ್ಟಿಹಾಕಿದ ಅರ್ಜುನನ ಕುದುರೆಯನ್ನು ಬಿಡಿಸಲು ರಣರಂಗದಲ್ಲಿ ಹೋರಾಡುವುದಕ್ಕಾಗಿ ಸ್ವಯಂ ನೀನೇ ಬಂದು ನಿಂತೆಯೊ? ಒಳ್ಳೆಯದು. ರಣದಲ್ಲಿ ಧೈರ್ಯವನ್ನು ಪ್ರದರ್ಶಿಸು. ಅರ್ಜುನನನ್ನು ರಕ್ಷಿಸಿಕೊ. ಹೇ ಸ್ವಾಮಿ, ನನ್ನ ಕುದುರೆಯು ಸ್ವೇಚ್ಛೆಯಿಂದ ಸಂಚರಿಸುತ್ತಿದೆಯಲ್ಲ, ಅದನ್ನೇಕೆ ಬಂಧಿಸಲಿಲ್ಲ? ಸಂಗ್ರಾಮಭೂಮಿಯಲ್ಲಿ ನನ್ನೊಡನೆ ಖಾಡಾಖಾಡಿಯಾಗಿ ಹೋರಾಡಲು ನಿನ್ನೊಬ್ಬನನ್ನು ಬಿಟ್ಟರೆ ಯಾರಿಗೂ ಸಾಮರ್ಥ್ಯವಿಲ್ಲ! ಸುದರ್ಶನಚಕ್ರ, ಶಾರ್ಙ್ಗಧನಸ್ಸು-ಇನ್ನು ಯಾವ ಆಯುಧಗಳಿವೆಯೋ ಅವೆಲ್ಲವನ್ನೂ ಹಿಡಿದು ನಿಲ್ಲು! ನೀನು ರಣಭೂಮಿಯಲ್ಲಿ ಕಾಣಿಸಿಕೊಂಡ ಮಾತ್ರಕ್ಕೆ ನನಗೆ ಯಾವ ಅಂಜಿಕೆಯೂ ಇಲ್ಲ!" ಎಂದನು.

# ತಾಮ್ರಧ್ವಜನ ಯುದ್ಧ

ಈ ಪ್ರಕಾರದಲ್ಲಿ ನುಡಿದು ಬಲಿಷ್ಠನಾದ ತಾಮ್ರಧ್ವಜನು ಅರ್ಧಚಂದ್ರಾದಿ ವಿವಿಧಶರಗಳಿಂದ ಪಾರ್ಥಸೇನೆಯನ್ನು ಆಕ್ರಮಿಸಿದನು. ಎಪ್ಪತ್ತು ಬಾಣಗಳನ್ನು ಅರ್ಜುನನ ಮೇಲೆ ಪ್ರಯೋಗಿಸಿ, ಮೂರುಬಾಣಗಳಿಂದ ಕೇಶವನನ್ನು ನೋಯಿಸಿ ಸಿಂಹನಾದ ಮಾಡಿದನು. ಕ್ರುದ್ಧನಾದ ಆ ವೀರನು ಐದು ಬಾಣಗಳಿಂದ ದಾರುಕನನ್ನು ಹೊಡೆದು, ನಾಲ್ಕು ಬಾಣಗಳಿಂದ ಅವನ ನಾಲ್ಕು ರಥಾಶ್ವಗಳನ್ನು ಗಾಯಗೊಳಿಸಿ ಅಚ್ಚರಿಯನ್ನುಂಟು ಮಾಡಿದನು. ಒಂಭತ್ತು ಕೂರ್ಗಣೆಗಳಿಂದ ಸಾತ್ಯಕಿಯನ್ನು ಹೊಡೆದು, ಎಂಟರಿಂದ ಕೃತವರ್ಮನನ್ನು ಬಿಗಿದು, ಸಾವಿರಶರಗಳನ್ನು ಪ್ರದ್ಯುಮ್ನನ ಮೇಲೆ ಪ್ರಯೋಗಿಸಿ, ಹತ್ತು ಸಾವಿರ ಶರಗಳಿಂದ ಅನಿರುದ್ಧನನ್ನು ಆಕ್ರಮಿಸಿದನು. ಅನಿರುದ್ಧನು ತಾಮ್ರಧ್ವಜನನ್ನು ಅಡ್ಡಗಟ್ಟಿ "ಎಲೈ, ನಿಲ್ಲು ನಿಲ್ಲು. ನನ್ನ ಹೊಡೆತವನ್ನು ಸಹಿಸಿಕೊ. ನಮ್ಮ ಕುದುರೆಯನ್ನು ಮೊದಲು ಬಿಟ್ಟುಬಿಡು. ಮೂರ್ಖ, ನನ್ನೊಡನೆ ಯುದ್ಧಕ್ಕೆ ಬಂದರೆ ನಿನ್ನನ್ನು ಉಳಿಸಿಕೊಳ್ಳುವವನಾರು, ಹೇಳಬಲ್ಲೆಯಾ?" ಎಂದನು. ಅದಕ್ಕೆ ತಾಮ್ರಧ್ವಜನು "ಓಹೊ! ನೀನು ಮನ್ಮಥನ ಮಗ. ನಿನ್ನ ತಂದೆ ಪುಷ್ಪಬಾಣ! ನೀನೆಂದರೆ ಬಾಣಾಸುರನ ಮಗಳ ಗಂಡ! ನೀನೂ ಯುದ್ಧವನ್ನು ಮಾಡಬಲ್ಲೆಯಾ? ಹಿಂದೆ ಬಾಣನು ತನ್ನ ಮಗಳಾದ ಉಷೆಯ ಮೇಲಿನ ವಾತ್ಸಲ್ಯದಿಂದ ನಿನ್ನನ್ನು ಸಾಯಿಸದೆ ಉಳಿಸಿದನು. ನಾನು ಅಂಥ ಕೆಲಸವನ್ನು ಮಾಡತಕ್ಕವನಲ್ಲ! ಈಗ ಕೃಷ್ಣನೆದುರಿಗೇ ನಿನ್ನನ್ನು ಶರಘಾತಗಳಿಂದ ಹೊಡೆದುರುಳಿಸುವೆನು. ನಿನ್ನನ್ನು ರಕ್ಷಿಸಿಕೊ. ನಿನ್ನ ಜೀವ ಉಳಿಯಲಾರದು" ಎಂದು ಉತ್ತರಿಸಿದನು. ಅನಿರುದ್ಧನು "ನನ್ನ ಬಾಣವನ್ನೆದುರಿಸಿ ನಿಲ್ಲು. ಬಹಳ ಮಾತಾಡುವುದೇಕೆ? ಪಂಡಿತರು ತಮ್ಮನ್ನು ತಾವೇ ಹೊಗಳಿಕೊಳ್ಳುವುದಿಲ್ಲ" ಎಂದು ನುಡಿದು ಪ್ರಳಯಾಗ್ನಿಸದೃಶವಾದ ಶರವನ್ನೆಸೆದು ತಾಮ್ರಧ್ವಜನ ಎದೆಯನ್ನು ಗಾಯಗೊಳಿಸಿದನು. ಆಗ ಸುಚಿತ್ರ[1]ನು ತೊಂಭತ್ತು ಬಾಣಗಳನ್ನು ಹೊಡೆಯಲು, ಅನಿರುದ್ಧನು ಅವುಗಳನ್ನು ಐದೈದು ತುಂಡುಗಳನ್ನಾಗಿ ಕತ್ತರಿಸಿದನು. ಅಲ್ಲದೆ ಆ ವೀರನ ಮೈಯಿಂದ ರಕ್ತವು ಸುರಿಯುವಂತೆ ಮಾಡಲು, ಸುಚಿತ್ರನು ಅಗ್ನಿಯೋ ಎಂಬಂತೆ ಗೋಚರಿಸಿದನು. ಅನಿರುದ್ಧನು ನಾಲ್ಕು ಬಾಣಗಳಿಂದ ಆತನ ಅಶ್ವಗಳನ್ನು ಕೊಂದು, ಒಂದು ಬಾಣದಿಂದ ಸಾರಥಿಯನ್ನು ಘಾತಿಸಿ, ಶೂರರಾದ ಶತ್ರುಸೈನಿಕರನ್ನು ಸಂಹರಿಸತೊಡಗಿದನು. ಆತನ ಬಾಣಗಳಿಂದ ಗಾಯಗೊಂಡ ಯೋಧರು ವನದಲ್ಲಿರುವ ಚಿತ್ರವರ್ಣದ ಚಿರತೆಗಳಂತೆ ಕಾಣಿಸಿದರು! ಅನಿರುದ್ಧನು ಕೆಲವರ ತೋಳುಗಳನ್ನು ಕತ್ತರಿಸಿದನು. ಕೆಲವರ ಬೆರಳುಗಳೂ ಉಗುರುಗಳೂ ತುಂಡರಸಿಹೋದವು. ಇನ್ನು ಕೆಲವರ ಹಸ್ತಗಳೂ ಮೊಳಕೈಗಳೂ ವಿಚ್ಛಿನ್ನವಾದವು. ಕೆಲವರ ಎದೆಗಳು ಸೀಳಿದವು. ಪುಷ್ಟವಾದ ಸೊಂಟಗಳು ಕತ್ತರಿಸಲ್ಪಟ್ಟವು. ಅನಿರುದ್ಧನು ಲೀಲೆಯಿಂದಲೇ ಹಲವರ ಶಿರಸ್ಸುಗಳನ್ನು ಕಡಿದು ಕೆಲವರ ಕಣ್ಣುಗಳನ್ನು ಕೆತ್ತಿದನು. ಕೆಲವರ ಹಲ್ಲುಗಳು ಬಿದ್ದವು. ಹುಬ್ಬುಗಳು

---

೧. ಸುಚಿತ್ರನೆಂದು ತಾಮ್ರಧ್ವಜನ ಇನ್ನೊಂದು ಹೆಸರು.

ಹಾರಿಹೋದವು. ಗಡ್ಡಮೀಸೆಗಳು ಉದುರಿಹೋದವು! ಶತ್ರುಸೈನಿಕರು ಪರಮಾಣುಗಳಂತೆ ಪುಡಿಪುಡಿಯಾದರು. ಧೂಳಿಯು ಗಾಳಿಗೆ ಹಾರಿ ಸಮುದ್ರವನ್ನು ಸೇರಿತು! ಬಲಶಾಲಿಯಾದ ಅನಿರುದ್ಧನು ಹೊಗೆಯಿಲ್ಲದ ಬೆಂಕಿಯಂತೆ ಪ್ರಜ್ವಲಿಸುತ್ತ ತಾಮ್ರಧ್ವಜನ ಚತುರಂಗಬಲವನ್ನು ಸಂಹರಿಸಿದನು. ಒಟ್ಟು ಮೂರು ಅಕ್ಷೋಹಿಣೀ ಬಲವು ಅವನಿಂದ ಹತವಾಯಿತು. ಶ್ರೀಕೃಷ್ಣನ ಮೊಮ್ಮಗನಾದ ಆ ವೀರನು ಮತ್ತೆ ಸಾಯಕಗಳನ್ನು ಹೂಡಿ ಶತ್ರುಸೈನ್ಯವನ್ನು ವಿಧ್ವಂಸಗೊಳಿಸಿದನು. ಧನುರ್ಧಾರಿಗಳು ದೀಪದ ಹುಳುಗಳಂತೆ ದಗ್ಧರಾದರು. ರಥಗಳು ಚೂರು ಚೂರಾದವು. ಆನೆಗಳು ಹೆದರಿ ಕಾಡಿನ ದಿಕ್ಕಿಗೆ ಓಡಿಹೋದವು. ಕುದುರೆಗಳು ಸತ್ತು ಬಿದ್ದವು. ಸವಾರರು ಸೀಳಿಹೋದರು. ಅಷ್ಟರಲ್ಲಿ ಸುಚಿತ್ರನು ನಿಶಿತಾಸ್ತ್ರಗಳಿಂದ ಅನಿರುದ್ಧನ ರಥವನ್ನು ಮುರಿದನು. ಕ್ರುದ್ಧನಾದ ಅನಿರುದ್ಧನು ಆ ರಥವನ್ನು ತ್ಯಜಿಸಿ ಬಿಲ್ಲಿನಿಂದ ಶರಪರಂಪರೆಗಳನ್ನು ತೂರಿ ತಾಮ್ರಧ್ವಜನ ರಥವನ್ನು ಭಗ್ನಗೊಳಿಸಿದನು. ಆಮೇಲೆ ಇಬ್ಬರು ವೀರರೂ ನೆಲದಮೇಲೆ ನಿಂತು ಹೋರಾಡುತ್ತಿರಲು, ತಾಮ್ರಧ್ವಜನು ಅನಿರುದ್ಧನನ್ನು ಮೂರ್ಛೆಗೊಳಿಸಿ ಮತ್ತೊಂದು ರಥವನ್ನೇರಿ ರಕ್ಷಣೆಗಾಗಿ ಬಂದ ಪಾಂಡವ ಸೈನಿಕರನ್ನು ಹೊಡೆದುರುಳಿಸಿದನು. ಅನಂತರ ಪ್ರದ್ಯುಮ್ನನನ್ನು ಐದುಬಾಣಗಳಿಂದ ಪರಾಜಯಗೊಳಿಸಿ "ಎಲಾ! ಮನ್ಮಥನು ಸೋತುಹೋದರೂ ದೇವಕೀತನಯನಾದ ಕೃಷ್ಣನು ನನ್ನೊಡನೆ ಯುದ್ಧಕ್ಕೆ ಬರುವುದೇ ಇಲ್ಲವಲ್ಲ! ಅವನು ಬರಲಿ, ಬರದಿರಲಿ-ನನ್ನ ಕಾರ್ಯವೇನೋ ಆಯಿತು" ಎಂದು ಹೇಳಿಕೊಳ್ಳುತ್ತಿದ್ದನು.

ಅಷ್ಟರಲ್ಲಿ ಕರ್ಣಪುತ್ರನೂ ವಿಖ್ಯಾತ ಪರಾಕ್ರಮಿಯೂ ಆದ ವೃಷಕೇತುವು ತಾಮ್ರಧ್ವಜನನ್ನು ಯುದ್ಧಕ್ಕೆ ಆಹ್ವಾನಿಸಿ ಶತಶರಗಳಿಂದ ಅವನ ರಥವನ್ನು ಕತ್ತರಿಸಿದನು. ತಾಮ್ರಧ್ವಜನು ಮತ್ತೊಂದು ರಥವನ್ನೇರಿ ಆ ಬಾಲಕನನ್ನು ಹೊಡೆದುರುಳಿಸ ಬೇಕೆನ್ನುವಷ್ಟರಲ್ಲಿ, ಆ ರಥವನ್ನು ವೃಷಕೇತುವು ಪುಡಿಗೈದನು. ಹೀಗೆ ಮತ್ತೆ ಮತ್ತೆ ತಾಮ್ರಧ್ವಜನು ಸಿಂಹಗತಿಯಿಂದ ಹೊಸ ರಥವನ್ನು ಹತ್ತುವುದು, ವೃಷಕೇತುವು ಅದನ್ನು ಕತ್ತರಿಸುವುದು - ಈ ರೀತಿ ನಡೆಯಿತು. ಈ ಬಗೆಯಲ್ಲಿ ಮುನ್ನೂರು ರಥಗಳನ್ನು ವೃಷಕೇತುವು ತುಂಡರಿಸಿದನು! ಆಮೇಲೆ ತಾಮ್ರಧ್ವಜನು ಮತ್ತೊಂದು ರಥವನ್ನೇರಿ, ರೋಗಸಮುದಾಯುವು ಹಗರಣವನ್ನಿತ್ತು ಶರೀರವನ್ನು ಬೀಳಿಸುವಂತೆ ಬಾಣ ಪರಂಪರೆಯಿಂದ ವೃಷಕೇತುವನ್ನು ಮೂರ್ಛಿತನನ್ನಾಗಿ ಮಾಡಿ ಉರುಳಿಸಿದನು. ಅನಂತರ ಅನುಸಾಲ್ವನನ್ನು ಹೊಡೆದು ಸ್ತಬ್ಧನನ್ನಾಗಿ ಮಾಡಿ ಒಂದೇ ಬಾಣದಿಂದ ಯೌವನಾಶ್ವನನ್ನು ರಥದಿಂದ ಕೆಳಕ್ಕೆ ಬೀಳಿಸಿದನು. ಸಾತ್ಯಕಿಯು ಏಳು ಬಾಣಗಳಿಂದ ತಾಮ್ರಧ್ವಜನ ಕುದುರೆಗಳನ್ನು ಕೊಂದು ಶಂಖವನ್ನು ಊದುತ್ತಿರಲು ತಾಮ್ರಧ್ವಜನು ಶರಗಳಿಂದ ಅವನನ್ನು ಹೊಡೆದುರಳಿಸಿ, ಎರಡು ಬಾಣಗಳಿಂದ ಕೃತವರ್ಮನನ್ನು ಬೀಳಿಸಿದನು. ಅವನ ಶರಗಳ ಪ್ರಹಾರಕ್ಕೆ ಸಿಕ್ಕಿ ಕೆಳಗೆ ಬಿದ್ದ ವೀರಯೋಧರು, ಪುಣ್ಯವು ತೀರಿದ ಮೇಲೆ ಸ್ವರ್ಗದಿಂದ ಕೆಳಗೆ ಬಿದ್ದವರಂತೆ ಕಂಗೊಳಿಸುತ್ತಿದ್ದರು.

ಆ ಸಮಯದಲ್ಲಿ ಯುದ್ಧಕ್ಕಾಗಿ ನುಗ್ಗಿ ಬರುತ್ತಿದ್ದ ಬಭ್ರುವಾಹನನನ್ನು ನೋಡಿ ತಾಮ್ರಧ್ವಜನು ನಗುತ್ತ, "ಎಲೈ ಬಭ್ರುವಾಹನ, ನೀನು ಯುದ್ಧ ಮಾಡುವೆಯಾದರೆ ಒಂದು ಕ್ಷಣಕಾಲ ನನ್ನೆದುರಿಗೆ ನಿಂತು ಧೈರ್ಯದಿಂದ ಐದು ಬಾಣಗಳನ್ನು ಪ್ರಯೋಗಿಸಿದಲ್ಲಿ, ನೀನು ಕೊಡಬೇಕಾದ ಮುತ್ತಿನ ಕಪ್ಪವನ್ನು ಬಿಟ್ಟುಬಿಡುತ್ತೇನೆ!" ಎಂದು ಹೇಳಿದನು. ಬಭ್ರುವಾಹನನು ಐದು ಬಾಣಗಳನ್ನು ಪ್ರಯೋಗಿಸಲು, ತಾಮ್ರಧ್ವಜನು ಅವುಗಳನ್ನು ಏಳು ಚೂರುಗಳಾಗಿ ಕೊಚ್ಚಿದನು. ಒಡನೆಯೇ ಬಭ್ರುವಾಹನನ ರಥವನ್ನು ಪುಡಿಗೈದು ಆತನನ್ನು ಪ್ರಹರಿಸಿ ನೆಲಕ್ಕೆ ಉರುಳಿಸಿದನು. ಉರುಳುವಾಗ ಅವನು ಧರಿಸಿದ್ದ ಒಡವೆಗಳು ಪ್ರಳಯ ಕಾಲದಲ್ಲಿ ನಕ್ಷತ್ರಗಳು ಬೀಳುವಂತೆ ಬಿದ್ದು ಚಲ್ಲಾಪಿಲ್ಲಿಯಾದವು. ಪಾತಾಳ ಲೋಕವನ್ನೂ ಜಯಿಸಿದ ಪಾರ್ಥತನಯನನ್ನು ಈ ರೀತಿಯಲ್ಲಿ ಭಗ್ನಗೊಳಿಸಿ ರೋಷಾವಿಷ್ಟನಾದ ತಾಮ್ರಧ್ವಜನು 'ಕೃಷ್ಣ, ನಿಲ್ಲು ನಿಲ್ಲು' ಎನ್ನುತ್ತ ರಣರಂಗದಲ್ಲಿ ಧಾವಿಸಿದನು. ಕಾಲರುದ್ರನೋ ಎಂಬಂತೆ ಕಾಣುತ್ತಿದ್ದ ಆತನನ್ನು ನೋಡಿ ಜನರು ಭಯದಿಂದ ಕಂಗೆಟ್ಟು ಕಣ್ಣು ಮುಚ್ಚಿ ಮೃತಪ್ರಾಯರಾದರು. ಸೈನಿಕರು ತಮ್ಮ ವಾಹನಗಳನ್ನು ಪರಿತ್ಯಜಿಸಿ ಓಡಿಹೋದರು. ಆ ಮಹಾವೀರನು ಶರಗಳನ್ನು ತೂರುತ್ತ ಹಂಸಧ್ವಜನನ್ನು ಮುತ್ತಿದನು. ಹಂಸಧ್ವಜನ ದುರವಸ್ಥೆಯನ್ನು ನೋಡಿಯೂ ಸೈನಿಕರು ಶಸ್ತ್ರಾಸ್ತ್ರಗಳನ್ನು ಎಸೆದು ಪಲಾಯನ ಮಾಡಿದರು. ರಕ್ತದ ಮಡುವಿನಲ್ಲಿ ಮೀನುಗಳಂತೆ ಮುಳುಗಿ ತೇಲಾಡಿದರು. ಶರಜಾಲಗಳ ಹೊಡೆತಕ್ಕೆ ಒಳಗಾಗಿ ತಮ್ಮನ್ನೇ ತಾವು ತಿಳಿಯದಾದರು. ಅಷ್ಟರಲ್ಲಿ ಅರ್ಜುನನು "ಎಲೈ ವೀರರೆ, ಹೆದರಬೇಡಿರಿ ಹೆದರಬೇಡಿರಿ" ಎಂದು ಕೂಗುತ್ತ ತನ್ನ ಧನುಸ್ಸನ್ನು ಮಿಡಿಯುತ್ತ ಮುಂದೆ ಬಂದನು. ಸೈನಿಕರು "ಅರ್ಜುನ-ಅರ್ಜುನ, ಆ ಯಜ್ಞಾಶ್ವವನ್ನು ಬಿಡಿಸಿಕೊಂಡು ಏನು ಮಾಡಬೇಕಾಗಿದೆ? ಭಾರತಯುದ್ಧದಲ್ಲಿ ಬಾಂಧವರನ್ನು ಕೊಂದ ಪಾಪವನ್ನು ಹೋಗಲಾಡಿಸಿಕೊಳ್ಳುವುದಕ್ಕಾಗಿ ಧರ್ಮರಾಜನು ಯಜ್ಞ ಮಾಡಬೇಕೆಂದಿದ್ದಾನೆ. ಈಗ ನೀನು ತಾಮ್ರಧ್ವಜನ ಕೈಯಿಂದ ನಮ್ಮೆಲ್ಲರನ್ನೂ ಕೊಲ್ಲಿಸಿ, ಆಮೇಲೆ ಶುದ್ಧನಾಗುವುದಕ್ಕಾಗಿ ಯಾವ ಪುಣ್ಯಕಾರ್ಯವನ್ನು ಕೈಗೊಳ್ಳುವೆ?" ಎಂದು ಹೇಳತೊಡಗಿದರು. ಹೀಗೆ ಹಾಹಾಕಾರ ಮಾಡುತ್ತಿದ್ದ ಸೈನಿಕರಿಗೆ ವೀರನಾದ ಪಾರ್ಥನು ಸಮಾಧಾನವನ್ನು ಹೇಳಿ ಓಡಿಹೋಗದಂತೆ ಅವರನ್ನು ತಡೆದು ನಿಲ್ಲಿಸಿದನು.

# ಶ್ರೀಕೃಷ್ಣನ ಕ್ರೋಧ

ಜೈಮಿನಿಮುನಿಗಳು ಹೇಳಿದರು. ಜನಮೇಜಯ, ಪಾರ್ಥನು ತಾಮ್ರಧ್ವಜನನ್ನೆದುರಿಸಿ ಒಂಬತ್ತು ಬಾಣಗಳಿಂದ ಅವನ ಎದೆಗೆ ಹೊಡೆದು ರಥದಿಂದ ಅವನನ್ನು ಬೀಳಿಸಿದನು. ಮಹಾರಥನಾದ ತಾಮ್ರಧ್ವಜನು ಮತ್ತೊಂದು ರಥವನ್ನೇರಿ ತನ್ನ ಬಾಣಗಳಿಂದ, ಮೇಘವು ಪರ್ವತವನ್ನು ಆಚ್ಛಾದಿಸುವಂತೆ, ಅರ್ಜುನನನ್ನು ಆಚ್ಛಾದಿಸಿದನು. ಅರ್ಜುನನೂ ತನ್ನ ಸರಳುಗಳಿಂದ ಆತನು ಕಾಣದಂತೆ ಮುಚ್ಚಿ ದೇವದತ್ತ ಶಂಖವನ್ನು ಊದಿದನು. ತಾಮ್ರಧ್ವಜನ ರಥವನ್ನು ಪುಡಿಗೈದು ಕುದುರೆಗಳನ್ನೂ ಸಾರಥಿಯನ್ನೂ ಕೊಂದನು. ರೋಷಾವಿಷ್ಟನಾದ ತಾಮ್ರಧ್ವಜನು ಮತ್ತೊಂದು ರಥವನ್ನೇರಿ ಪಾರ್ಥನ ಕುದುರೆಗಳನ್ನೂ ಸಾರಥಿಯನ್ನೂ ಹೊಡೆದುರುಳಿಸಿ "ಅರ್ಜುನ, ನಿನ್ನ ಕುದುರೆಗಳನ್ನು ಕೊಂದಿದ್ದೇನೆ. ಸಾರಥಿಯೂ ಹತನಾದನು. ಇನ್ನು ಎಲ್ಲಿಗೆ ಹೋಗಬಲ್ಲೆ? ನಿನ್ನನ್ನು ಯಜ್ಞಾಶ್ವದೊಂದಿಗೆ ನನ್ನ ನಗರಕ್ಕೆ ಕರೆದೊಯ್ಯುವೆನು!" ಎಂದು ಹಂಗಿಸಿದನು. ಆ ನುಡಿಯಿಂದ ರೇಗಿದ ಅರ್ಜುನನು ತಾಮ್ರಧ್ವಜನ ದೇಹವನ್ನು ಅಸ್ತ್ರಗಳಿಂದ ಕೆತ್ತಿ, ಒಂದಾದಮೇಲೊಂದರಂತೆ ಅವನ ಒಂದು ಸಾವಿರ ರಥಗಳನ್ನು ತುಂಡರಿಸಿದನು. ಆದರೂ ತಾಮ್ರಧ್ವಜನು ಯುದ್ಧದಿಂದ ವಿಮುಖನಾಗದೆ ಇನ್ನೊಂದು ರಥವನ್ನೇರಿ ಶ್ರೀಕೃಷ್ಣನೆದುರಿಗೇ ಪಾರ್ಥನನ್ನು ಮೂರ್ಛೆಗೊಳಿಸಿದನು. ಸ್ವಲ್ಪ ಹೊತ್ತಿನಲ್ಲಿ ಪಾರ್ಥನು ಮೂರ್ಛೆಯಿಂದ ತಿಳಿದೆದ್ದು ಮತ್ತೊಂದು ರಥವನ್ನಾರೋಹಿಸಿ ತಾಮ್ರಧ್ವಜನನ್ನು ಶರಗಳಿಂದ ಪ್ರಹರಿಸತೊಡಗಿದನು. ತಾಮ್ರಧ್ವಜನಾದರೋ ನಿಶಿತಾಸ್ತ್ರಗಳಿಂದ ಹೊಡೆದು ಅರ್ಜುನಸಹಿತನಾಗಿ ಅವನ ರಥವನ್ನು ಒಂದು ಯೋಜನ ದೂರದವರೆಗೆ ಹಿಮ್ಮೆಟ್ಟಿಸಿದನು. ಮತ್ತೆ ಅರ್ಜುನನು ಧಾವಿಸುತ್ತ ಮುಂದೆ ಬರಲು, ಮಹಾಪರಾಕ್ರಮವನ್ನು ಮೆರೆಸುತ್ತ ತಾಮ್ರಧ್ವಜನು ಕೂರ್ಗಣೆಗಳಿಂದ ಪ್ರಹರಿಸಿದನು. ಪಾರ್ಥನು ಮೂರು ಬಾಣಗಳಿಂದ ಆತನ ರಥವನ್ನು ಗಗನಕ್ಕೆ ಹಾರಿಸಿ ಸಿಂಹನಾದ ಮಾಡಿದನು. ಅನಂತರ ನಿಶಿತಶರಗಳಿಂದ ವೈರಿಸೇನೆಯನ್ನು ಯಮನಗರಕ್ಕೆ ಕಳಿಸಲಾರಂಭಿಸಿದನು. ತಾಮ್ರಧ್ವಜನು ಸುವರ್ಣಪುಂಖಿತ ಶರಗಳಿಂದ ಅರ್ಜುನನನ್ನು ಘಾತಿಸತೊಡಗಿದನು. ವೀರಲಕ್ಷ್ಮೀಸಂಯುತರಾದ ಆ ಧೀರರು ಮಂಡಲಗತಿಯಿಂದ ಸುತ್ತುತ್ತ ಒಬ್ಬರೂ ಜಗ್ಗದೆ ಯುದ್ಧದಿಂದ ಹಿಮ್ಮೆಟ್ಟದೆ ಆಶ್ಚರ್ಯಕರವಾಗಿ ಕಾದಾಡಿದರು. ತಾಮ್ರಧ್ವಜನ ಎರಡು ಅಕ್ಷೋಹಿಣೀ ಬಲವನ್ನು ಅರ್ಜುನನು ಕೊಂದನು. ತಾಮ್ರಧ್ವಜನು ಅರ್ಜುನನ ಹತ್ತು ಲಕ್ಷ ಸೈನಿಕರನ್ನು ಸಂಹರಿಸಿದನು. ಅನ್ಯೋನ್ಯ ಜಯಾಪೇಕ್ಷೆಯಿಂದ ಈರ್ವರೂ ದಾರುಣವಾದ ಸಂಗ್ರಾಮವನ್ನು ನಡೆಸುತ್ತಿರುವಾಗ, ತಾಮ್ರಧ್ವಜನು ಪಾರ್ಥನ ಧನುಸ್ಸನ್ನು ಕತ್ತರಿಸಿ ಸುವರ್ಣಭೂಷಿತವಾದ ಧ್ವಜವನ್ನು ಉರುಳಿಸಿದನು. ಹಾಗೆಯೇ ಬಾವುಟ, ಚಕ್ರದ ಕೀಲುಗಳು, ಸಕಲ ಯುದ್ಧಸಾಮಗ್ರಿಗಳು, ಛತ್ರ, ರಥಗಳು -ಇವೆಲ್ಲವನ್ನೂ ತಾಮ್ರಧ್ವಜನು ನಾಶಮಾಡಿ ರೋಷಾವೇಶದಿಂದ ರಥಾಶ್ವಗಳನ್ನೂ ಸಾರಥಿಯನ್ನೂ ಕೊಂದನು. ಅರ್ಜುನನೂ ಸಹ

ತಾಮ್ರಧ್ವಜನು ಏರಿದ ಒಂದೊಂದು ರಥವನ್ನೂ ಕತ್ತರಿಸುತ್ತ ಮತ್ತೆ ಒಂದು ಸಾವಿರ ರಥಗಳನ್ನು ನಾಶ ಮಾಡಿದನು. ಅವನ ಬಾಣಗಳು ದೇಹವನ್ನು ಕೆತ್ತುತ್ತಿದ್ದರೂ ತಾಮ್ರಧ್ವಜನು ತನ್ನ ಪೌರುಷವನ್ನು ಮೆರೆಸುತ್ತಲೇ ಇದ್ದನು. ತುಂಡರಿಸಲ್ಪಟ್ಟ ಅವನ ಮಾಂಸಕಣಗಳು ಗಾಳಿಗೆ ಹಾರಿಹೋಗಿ ಕೃಷ್ಣನ ಶಿರಸ್ಸಿನಲ್ಲಿಯೂ ನೆಲದಲ್ಲಿಯೂ ಗಗನದಲ್ಲಿಯೂ ತೂರಾಡಿದವು! ಮೂರು ಲೋಕಗಳಿಗೂ ದಿಗ್ಭ್ರಮೆಯನ್ನುಂಟು ಮಾಡುವ ಆ ಘೋರ ಸಂಗ್ರಾಮವು ಏಳು ದಿನಗಳವರೆಗೆ ನಡೆಯಿತು! ಹಗಲೆನ್ನದೆ ಇರುಳೆನ್ನದೆ ಎಡಬಿಡದೆ ನಡೆಯುತ್ತಿದ್ದ ಕಾಳಗವನ್ನು ಕಂಡು ಸಕಲರೂ ವಿಸ್ಮಿತರಾದರು.

ಹೀಗಿರುವಾಗ ಕ್ರೋಧೋದ್ರಿಕ್ತನಾದ ತಾಮ್ರಧ್ವಜನು ಪಾರ್ಥನ ರಥವನ್ನು ಹಿಡಿದೆತ್ತಿ ಗಗನಕ್ಕೆ ನೆಗೆದು, ಮಾಂಸದ ತುಂಡನ್ನು ಹಿಡಿದಿರುವ ಗಿಡಗದಂತೆ ಆಕಾಶದಲ್ಲಿ ಸುತ್ತಾಡಿ, ಅಶ್ವಧ್ವಜಪತಾಕಾಸಹಿತವಾದ ಆ ರಥವನ್ನು ಬಹು ಎತ್ತರದಿಂದ ಭೂಮಿಯ ಮೇಲೆ ಬೀಸಿ ಎಸೆದನು. ಶ್ರೀಕೃಷ್ಣನು ಅದನ್ನು ನೋಡಿ ತನ್ನ ಕೈಯಿಂದ ರಥವನ್ನು ಹಿಡಿದುಕೊಂಡನು! ತಾಮ್ರಧ್ವಜನು ಶ್ರೀಕೃಷ್ಣನನ್ನು ಕುರಿತು "ರಥಸಹಿತನಾದ ಪಾರ್ಥನನ್ನು ನಾನು ಗಗನತಳದಿಂದ ನೆಲಕ್ಕೆ ಕುಕ್ಕಿದ್ದಾಗ, ನೀನು ಅವನನ್ನು ಕೈಯಿಂದ ಹಿಡಿದು ರಕ್ಷಿಸಬೇಕಾಯಿತೆಂದರೆ ನನ್ನ ಪೌರುಷ ಉತ್ತಮವೆಂದು ಸಿದ್ಧವಾಯಿತು!" ಎಂದನು. ಶ್ರೀಕೃಷ್ಣನು ಗದೆಯಿಂದ ಅವನ ತಲೆಯನ್ನಪ್ಪಳಿಸಿ ಕಾಲಿನಿಂದ ಎದೆಯ ಮೇಲೆ ಒದೆದನು. ತಾಮ್ರಧ್ವಜನು ಮುಗ್ಗರಿಸಿ ಶ್ರೀಕೃಷ್ಣನೆದುರಿಗೆ ಬಿದ್ದನು. ಮತ್ತೆ ಚೇತರಿಸಿಕೊಂಡು ಇನ್ನೊಂದು ರಥವನ್ನೇರಿ ಶ್ರೀಕೃಷ್ಣನ ಮೇಲೆ ಸರಳುಗಳನ್ನು ಸುರಿಸಿದನು.

ಆಗ ಶ್ರೀಕೃಷ್ಣನು ಅರ್ಜುನನನ್ನು ನೋಡಿ "ಅರ್ಜುನ, ನೀನು ಯುದ್ಧವನ್ನು ಮುಂದುವರಿಸು. ನಾನೂ ಸಹ ಇವರೊಡನೆ ಯುದ್ಧ ಮಾಡುವೆನು. ನಾವಿಬ್ಬರೂ ಈತನನ್ನು ಜಯಿಸಬೇಕೆಂದು ನನ್ನ ಆಶಯವಿದೆ. ತಾಮ್ರಧ್ವಜನು ಮಹಾವೀರನು. ಇವನು ಸಾಮಾನ್ಯನೆಂದು ಶಂಕಿಸಬೇಡ. ಈತನ ಬಾಣಗಳ ಪೆಟ್ಟನ್ನು ತಾಳಲಾರದೆ ನಮ್ಮ ಸೇನೆಯು ಓಡುತ್ತಿರುವುದನ್ನು ನೋಡು! ಬಭ್ರುವಾಹನನೇ ಮೊದಲಾದ ವೀರರನ್ನು ಈತನು ಬಹುಸುಲಭವಾಗಿ ಗೆದ್ದುಬಿಟ್ಟನು. ನೀನು ಗಾಂಡೀವವನ್ನು ಹಿಡಿದು ಕೂಡಲೆ ತಾಮ್ರಧ್ವಜನನ್ನು ಬಾಣಗಳಿಂದ ಉರುಳಿಸುವ ಪ್ರಯತ್ನ ಮಾಡು. ನಾನು ಶಾರ್ಙ್ಗಧನುಸ್ಸನ್ನು ಹಿಡಿದು ಯುದ್ಧ ಮಾಡುವೆನು. ಬೇರೆ ಆಲೋಚನೆ ಬೇಡ" ಎಂದು ಹೇಳಿ ಶಾರ್ಙ್ಗಧನುಸ್ಸಿನಿಂದ ಘೋರಾಸ್ತ್ರಗಳನ್ನು ಪ್ರಯೋಗಿಸಲಾರಂಭಿಸಿದನು. ಶ್ರೀಕೃಷ್ಣನ ಪ್ರೇರಣೆಯಂತೆ ಅರ್ಜುನನೂ ತಾಮ್ರಧ್ವಜನನ್ನು ಎದುರಿಸಿದನು. ರಥದಲ್ಲಿ ಕುಳಿತಿದ್ದ ಆತನ ಮೇಲೆ ಕೇಶವನು ಶರಗಳನ್ನು ಸುರಿದನು. ಬಭ್ರುವಾಹನನು ಒಟ್ಟಿಗೆ ಆ ನರನಾರಾಯಣರನ್ನು ಎದುರಿಸಿ ಹೋರಾಡಿ ತೀಕ್ಷ್ಣಾಸ್ತ್ರಗಳಿಂದ ಅವರೀರ್ವರ ಧನುಸ್ಸುಗಳ ಹೆದೆಗಳನ್ನು ಕಡಿದನು. ತಾಮ್ರಧ್ವಜನು ಉತ್ಸಾಹದಿಂದ ವಿಕಸಿತನೇತ್ರನಾಗಿ "ಶ್ರೀಕೃಷ್ಣ, ಶ್ರೇಯಸ್ಸನ್ನು ಬಯಸತಕ್ಕವನು ಬೇರೆಬೇರೆಯಾದ ಈರ್ವರನ್ನು ಒಟ್ಟಿಗೆ ಸೇರಿಸಬೇಕು. ನೀನು ಅರ್ಜುನನ ರಥದಲ್ಲಿ ಸಾರಥಿಯ ಕೆಲಸವನ್ನು ಬಿಟ್ಟು ಬೇರೊಬ್ಬ ರಥನಾಯಕನಾಗಿ ಯುದ್ಧದಲ್ಲಿ ತೊಡಗಿರುವೆ!

ನೀನು ಸಾರಥಿಯಾಗದಿದ್ದರೆ ಈ ಅರ್ಜುನನು ನಿಶ್ಚಯವಾಗಿಯೂ ಹತನಾಗುವನು. ಆದ್ದರಿಂದ, ಗೋವಿಂದ, ನೀನು ಅರ್ಜುನನ ಸಾರಥಿಯಾಗು. ಅವನನ್ನು ಕೊಲ್ಲಿಸಬೇಡ!" ಎಂದು ಹೇಳಿದನು. ಆಗ ಶ್ರೀಕೃಷ್ಣನು ತನ್ನ ರಥವನ್ನು ತ್ಯಜಿಸಿ ಅರ್ಜುನನ ರಥದಲ್ಲಿ ಸಾರಥಿಯಾಗಿ ಕುಳಿತು, ಕಿರುಗಂಟೆಗಳಿಂದ ಅಲಂಕೃತವಾದ ಅಶ್ವಗಳನ್ನು ವೇಗವಾಗಿ ನಡೆಸತೊಡಗಿದನು. ಕೆಂಪಡರಿದ ಕಣ್ಣುಳ್ಳವನಾಗಿ ಚಾಟಿಯಿಂದ ಅಶ್ವಗಳನ್ನು ಬಾರಿಸಿ ಕೌಶಲದಿಂದ ರಥವನ್ನು ನಡೆಸಿದನು. ತಾಮ್ರಧ್ವಜನು ತೀಕ್ಷ್ಣವಾದ ಹತ್ತು ಬಾಣಗಳನ್ನು ಶ್ರೀಕೃಷ್ಣನ ಮೇಲೆ ಪ್ರಯೋಗಿಸಿ ಅರುವತ್ತು ಬಾಣಗಳಿಂದ ಪಾರ್ಥನನ್ನು ಹೊಡೆದನು. ಅವನ ಶ್ವೇತಛತ್ರವನ್ನು ಕತ್ತರಿಸಿ, ಮತ್ತೆ ನೂರು ಬಾಣಗಳನ್ನು ಕೇಶವನ ಮೇಲೆ ಎಚ್ಚನು. ಪಾರ್ಥನು ಆ ವೀರನ ರಥವನ್ನು ಪುಡಿಗೈದು ಕಂಕಪತಯುಕ್ತವಾದ ನಾರಾಚಗಳಿಂದ ಆತನ ದೇಹವನ್ನು ಕೆತ್ತಿದನು. ಪಾರ್ಥನು ಶರಗಳಿಂದ ಅವನ ದೇಹವನ್ನು ಗಾಯ ಗೊಳಿಸಿದಷ್ಟೂ, ಆತನು ಶಸ್ತ್ರಧಾರಿಯಾಗಿ ಒಂದೊಂದು ಹೆಜ್ಜೆ ಮುಂದೆ ಬರುತ್ತಿದ್ದನು. ಹೀಗೆ ತಾಮ್ರಧ್ವಜನು ರಥದ ಸಮೀಪಕ್ಕೆ ಬಂದಾಗ ಮಾಧವನು ಕಾಲಿನಿಂದ ಅವನನ್ನು ಒದ್ದು ಕೆಡಹಿದನು. ಆ ವೀರನು ಮತ್ತೆ ಮೇಲೆದ್ದು ಒಂದು ಮತ್ತಮಾತಂಗವನ್ನೇರಿ ನಿಶಿತಶರಗಳಿಂದ ಕೃಷ್ಣಾರ್ಜುನರನ್ನು ತರುಬಿದನು. ಶ್ರೀಕೃಷ್ಣನು ಸಾರಥಿಯಾಗಿ ಕುಳಿತಿರುವಾಗಲೇ ಶರಗಳಿಂದ ಬಿಗಿದು ಅಶ್ವಸಹಿತವಾದ ರಥವು ಗಿರ್ರನೆ ತಿರುಗುವಂತೆ ಮಾಡಿದನು! ಅಷ್ಟರಲ್ಲಿ ಮೂರ್ಛೆಯಿಂದ ಎಚ್ಚೆತ್ತ ಬಭ್ರುವಾಹನಾದಿಗಳು ತಾಮ್ರಧ್ವಜನ ಮೇಲೆ ಏರಿಬಂದರು. ಆ ವೀರನು ಅವರೆಲ್ಲರನ್ನೂ ಹೊಡೆದುರುಳಿಸಿದನು. ಈ ರೀತಿಯಲ್ಲಿ ಅಸಮಸಾಹಸದಿಂದ ಹೋರಾಡುತ್ತಿದ್ದ ತಾಮ್ರಧ್ವಜನನ್ನು ನೋಡಿ, ಶ್ರೀಕೃಷ್ಣನು ಕ್ರೋಧದಿಂದ ದಿವ್ಯವೂ ದಾರುಣವೂ ಆದ ಸುದರ್ಶನ ಚಕ್ರವನ್ನು ಕೈಯಲ್ಲಿ ಹಿಡಿದು 'ನಿಲ್ಲು, ನಿಲ್ಲು' ಎನ್ನುತ್ತ ರಥದಿಂದ ಕೆಳಗೆ ಧುಮುಕಿದನು! ಭೂಮಿಯು ಅಲ್ಲಾಡಿತು. ದೇವತೆಗಳು ಹೆದರಿದರು. ಸಮುದ್ರಗಳು ಉಲ್ಲೋಲಕಲ್ಲೋಲವಾದವು. ಸೂರ್ಯನು ನಡುಗಿದನು. ದಿಕ್ಕುಗಳು ಚಲಿಸಿದವು. ಶೇಷಾದಿಪನ್ನಗರು ಭೀತರಾಗಿ ಸುರುಳಿಸುತ್ತಿಕೊಂಡರು! ವಾಸುದೇವನು ಕ್ರುದ್ಧನಾಗಿ ಘೋರ ಸಂಗ್ರಾಮನ್ನಾರಂಭಿಸಿ ಒಂದು ಅಕ್ಷೌಹಿಣೀ ಬಲವನ್ನು ಸುದರ್ಶನ ಚಕ್ರದಿಂದ ಸಂಹರಿಸಿದನು. ತಾಮ್ರಧ್ವಜನು ತಾನು ಏರಿದ್ದ ಆನೆಯಿಂದಿಳಿದು ಶ್ರೀಕೃಷ್ಣನಿಗೆ ಎದುರಾಗಿ ನಡೆದು ಬಂದನು.

# ತಾಮ್ರಧ್ವಜನ ವಿಜಯ

ಜನಮೇಜಯ, ಹತವಾದ ತನ್ನ ಸೇನೆಯನ್ನು ನೋಡಿ ತಾಮ್ರಧ್ವಜನಿಗೆ ಹರ್ಷವೇ ಆಯಿತು! ಅವನು ಚಕ್ರಧಾರಿಯಾದ ಶ್ರೀಕೃಷ್ಣನ ಸಂಮುಖದಲ್ಲಿ ನಿಂತು "ವಾಸುದೇವ, ನಮ್ಮಿರ್ವರ ನಡುವೆ ವಿಘ್ನಕಾರಿಯಾಗಿದ್ದ ಸೇನೆಯನ್ನು ಸಂಹರಿಸಿ ಒಳ್ಳೆಯ ಕಾರ್ಯವನ್ನೇ ಮಾಡಿದೆ! ಈಗ ಸ್ವಸ್ವರೂಪದಿಂದಿರುವ ನಿನ್ನನ್ನು ನೋಡಲು ನನಗೆ ಸಾಧ್ಯವಾಯಿತು. ಸುಂದರವಾದ ನಿನ್ನ ಭವ್ಯರೂಪವನ್ನು ಕಂಡು ಹೇಗೆ ತ್ಯಜಿಸಿ ಹೋಗಲಿ? ಮಧುಸೂದನ, ಯಜ್ಞಾರ್ಥವಾಗಿ ಸಮೀಪದಲ್ಲಿ ಇರಬೇಕೆಂದು ತಂದೆಯು ನನಗೆ ಆಜ್ಞಾಪಿಸಿದ್ದಾನೆ. ನನ್ನ ಅಶ್ವವನ್ನು ನಾನು ರಕ್ಷಿಸಿಕೊಳ್ಳುತ್ತಿರುವಾಗ ನೀನು ಗೋಚರಿಸಿದ್ದಾದರೂ ಹೇಗೆ? ಗಾಜಿನ ಮಣಿಯನ್ನು ಹುಡುಕುತ್ತಿದ್ದವನಿಗೆ ದಿವ್ಯಮಣಿಯು ದೊರಕಿದಂತಾಯಿತು. ಹಿಂದೆ ಅರ್ಜುನನಿಗೋಸ್ಕರ ಯುದ್ಧದಲ್ಲಿ ನಿನ್ನ ಪುಣ್ಯವನ್ನು ಧಾರೆಯೆರೆದಿದ್ದೇಯೆ. ಈಗ ನಿನ್ನ ದೇಹವನ್ನೇ ಅರ್ಪಿಸುತ್ತಿದ್ದೀಯೆ! ಚಕ್ರಧರನಾದ ನಿನ್ನನ್ನೂ ಮಹಾರಥನಾದ ಅರ್ಜುನನನ್ನೂ ಹಿಡಿದು ನನ್ನ ತಂದೆಯ ಬಳಿಗೆ ಕರೆದೊಯ್ಯುವೆನು. ಅದರಿಂದ ನನ್ನ ತಂದೆಯ ಯಜ್ಞಕ್ಕೆ ಪ್ರತ್ಯಕ್ಷದೇವತೆಯೇ ಬಂದಂತಾಗುವುದು!" ಎಂದು ನುಡಿದು ಥಟ್ಟನೆ ಮುಂದೆ ನುಗ್ಗಿ ತನ್ನ ಬಲಗೈಯಿಂದ ಶ್ರೀ ಕೃಷ್ಣನ ಕೈಯನ್ನೂ ಎಡಗೈಯಿಂದ ಅವನ ಪಾದವನ್ನೂ ಹಿಡಿದು ಹೊತ್ತುಬಿಟ್ಟನು! ಶ್ರೀ ಕೃಷ್ಣನ ಪಾದವು ತನ್ನ ಹಣೆಗೆ ತಾಗುವಂತೆ ಒತ್ತಿ ಹಿಡಿದು ಅರ್ಜುನನ ಕಡೆಗೆ ನುಗ್ಗಿದನು! ಆಗ ಏನು ಮಾಡಬೇಕೆಂದು ಪಾರ್ಥನು ಆಲೋಚಿಸುತ್ತಿರುವಾಗ, ಶ್ರೀಕೃಷ್ಣನು ಬಾಣಗಳನ್ನು ಹೂಡುವಂತೆ ಆಜ್ಞೆಮಾಡಿದನು. ಒಡನೆಯೇ ಪಾರ್ಥನು ನೂರು ಬಾಣಗಳನ್ನು ಧನುಸ್ಸಿಗೆ ಅಳವಡಿಸಿ ತಾಮ್ರಧ್ವಜನ ಮೇಲೆ ಪ್ರಯೋಗಿಸಿದನು. ಅತ್ಯಂತ ಬಲಾಢ್ಯನಾದ ತಾಮ್ರಧ್ವಜನು ಅದನ್ನು ಲೆಕ್ಕಿಸದೆ ಮುಂದೆ ನುಗ್ಗಿ ಪಾರ್ಥನನ್ನು ಕಾಲಿಂದ ಒದೆದು ಕೆಡವಿ ಆಕ್ರಮಿಸಿ ಎರಡು ಬಾಹುಗಳಿಂದ ಅವರೀರ್ವರನ್ನು ಅಮುಕಿ ಹಿಡಿದನು. ಆಗ ಶ್ರೀಕೃಷ್ಣನು ಬಲವಾಗಿ ತಳ್ಳಲಾಗಿ ತಾಮ್ರಧ್ವಜನು ಬಿದ್ದನು. ಬೀಳುವಾಗ ರಭಸದಿಂದ ಶ್ರೀಕೃಷ್ಣಾರ್ಜುನರನ್ನು ಜಗ್ಗಲು, ಅವರೀರ್ವರೂ ಬಿದ್ದು ಮೂರ್ಛಿತರಾದರು. ಸ್ವಲ್ಪ ಹೊತ್ತಿನ ಮೇಲೆ ತಾಮ್ರಧ್ವಜನು ಚೇತರಿಸಿಕೊಂಡೆದ್ದು ನೋಡಲು, ಎರಡು ಅಶ್ವಗಳೂ ತನ್ನ ನಗರಕ್ಕೆ ಅಭಿಮುಖವಾಗಿ ಹೋಗುತ್ತಿರುವುದು ಕಾಣಿಸಿತು. ಆಮೇಲೆ ತಾಮ್ರಧ್ವಜನು ಹತಶೇಷರಾದ ವೀರರೊಡನೆ ತನ್ನ ತಂದೆಯಾದ ಮಯೂರಧ್ವಜನಿದ್ದಲ್ಲಿಗೆ ತೆರಳಿದನು. ನಗರದ ಹೊರವಲಯದಲ್ಲಿದ್ದ ರಮ್ಯವಾದ ಯಜ್ಞಮಂಟಪಕ್ಕೆ ಹೋದನು. ಆಗ ಮಯೂರಧ್ವಜನು ತನ್ನ ಮಗನೂ ಎರಡು ಅಶ್ವಗಳೂ ಸೇನೆಯೂ ಅಲ್ಲಿಗೆ ಬಂದುದನ್ನು ನೋಡಿ ಮುಗುಳ್ನಗೆಯಿಂದ ತಾಮ್ರಧ್ವಜನನ್ನು ಕುರಿತು "ವತ್ಸ, ನಮ್ಮ ಅಶ್ವವು ವರ್ಷವಾಗದ ಮುನ್ನ ಈ ಸಲವೂ ತಿರುಗಿ ಬಂದಿದೆ. ಇನ್ನೊಂದು ಅಶ್ವವನ್ನು ಹಿಡಿದಿರುವೆಯಲ್ಲ, ಅದು ಯಾವ

ರಾಜನದು?" ಎಂದು ಕೇಳಿದನು. ಮೃಗಶೃಂಗವನ್ನು ಕೈಯಲ್ಲಿ ಹಿಡಿದು ಕೃಷ್ಣಾಜಿನವನ್ನು ಧರಿಸಿ ದೀಕ್ಷಿತನಾಗಿದ್ದ ತನ್ನ ತಂದೆಗೆ ವಂದಿಸಿ ಎದುರಿಗೆ ನಿಂತು ತಾಮ್ರಧ್ವಜನು ಹೀಗೆಂದನು: "ತಂದೆಯೆ, ಧರ್ಮರಾಜನು ಯಜ್ಞಾರ್ಥವಾಗಿ ಈ ಅಶ್ವವನ್ನು ಬಿಟ್ಟಿದ್ದನು. ಇದರ ರಕ್ಷಣೆಗಾಗಿ ಶ್ರೀಕೃಷ್ಣನೊಡನೆ ಧನುರ್ವಿದ್ಯಾವಿಶಾರದನಾದ ಅರ್ಜುನನು ವೀರರೂ ಧೀರರೂ ಆದ ಯೋಧರೊಡನೆ ಬಂದಿದ್ದನು. ನಾನು ಅಶ್ವರಕ್ಷಣೆಯಲ್ಲಿ ತೊಡಗಿರುವಾಗ ಬಭ್ರುವಾಹನನ ರಾಜಧಾನಿಯ ಸಮೀಪದಲ್ಲಿ ಅರ್ಜುನನನ್ನು ಕಂಡೆನು. ಅನಂತರ ಯುದ್ಧವು ನಡೆಯಿತು. ಅದು ಯಾವ ಬಗೆಯಲ್ಲಿ ನಡೆಯಿತೆಂಬುದರ ವಿಷಯವಾಗಿ ನಮ್ಮ ಮುಖ್ಯಸಚಿವನೂ ಬಲಾಢ್ಯನೂ ಆದ ಬಹುಲಧ್ವಜನನ್ನು ಕೇಳಬಹುದು" ಎಂದನು. ಅದರಂತೆ ಮಯೂರಧ್ವಜನು ಕುತೂಹಲದಿಂದ ಬಹುಲಧ್ವಜನನ್ನೂ ಕೇಳಲಾಗಿ ಅವನು ಈ ರೀತಿಯಲ್ಲಿ ನಿವೇದಿಸಿದನು: "ಮಹಾರಾಜ, ಪಾರ್ಥನ ಸಹಾಯಕ್ಕಾಗಿ ಯುದ್ಧವನ್ನಾರಂಭಿಸಿದ ಪ್ರದ್ಯುಮ್ನನೇ ಮೊದಲಾದ ಮಹಾ ವೀರರನ್ನು ನಿನ್ನ ಮಗನು ಸೋಲಿಸಿದನು. ಅನಂತರ ಕೃಷ್ಣಾರ್ಜುನರೊಡನೆ ಘೋರವಾದ ಯುದ್ಧವನ್ನು ನಡೆಸಿ ಅವರಿಬ್ಬರನ್ನೂ ನೆಲದ ಮೇಲೆ ಉರುಳಿಸಿದನು. ಕೃಷ್ಣಾರ್ಜುನರು ಮೂರ್ಛೆಹೋದರು. ಅಷ್ಟರಲ್ಲಿ ಈ ಎರಡು ಅಶ್ವಗಳೂ ತಾವಾಗಿ ರಣರಂಗದಿಂದ ಹೊರಟು ಇತ್ತಕಡೆ ಬಂದವು. ತಾಮ್ರಧ್ವಜನು ಅಶ್ವಗಳನ್ನು ಹಿಂಬಾಲಿಸಿ ನಗರಕ್ಕೆ ಬಂದಿದ್ದಾನೆ. ಕೃಷ್ಣಾರ್ಜುನರು ಮೂರ್ಛೆಯಿಂದ ಎಚ್ಚೆತ್ತಮೇಲೆ ಏನು ಮಾಡಬೇಕೆಂದಿರುವರೋ ನನಗೆ ತಿಳಿಯದು. ನಾವು ಕುಶಲವಾಗಿ ಹಿಂದಿರುಗಿದೆವು. ಇಷ್ಟು ನಡೆಯಿತು" ಎಂದನು.

ಆಗ ಮಯೂರಧ್ವಜನು "ನನ್ನ ಮಗನು ಮಹತ್ತರವಾದ ತಪ್ಪನ್ನು ಮಾಡಿದನು! ಈ ಮೂರ್ಖನು ಎರಡು ಅಶ್ವಗಳನ್ನೂ ಹಿಡಿದು ನನ್ನ ಬಳಿಗೆ ಬಂದಿದ್ದಾನೆ. ಅಯ್ಯೊ, ನಾನು ವಂಚಿತನಾದೆ! ತಾನಾಗಿ ಬಳಿಗೆ ಬಂದಿದ್ದ ಶ್ರೀಕೃಷ್ಣನನ್ನೂ ಬಿಟ್ಟುಕೊಟ್ಟು ಈ ಅಶ್ವಗಳಿಂದ ನನ್ನ ಯಜ್ಞವು ಪೂರ್ಣವಾಗುವುದೆ? ಎಂದಿಗೂ ಇಲ್ಲ. ಪುತ್ರನು ಶತ್ರುರೂಪನಾಗಿ ನನ್ನನ್ನು ಪೀಡಿಸಲು ಮನೆಗೆ ಬಂದಿದ್ದಾನೆ! ಎಲೈ ತಾಮ್ರಧ್ವಜ ಭಗವಾನ್ ಶ್ರೀಕೃಷ್ಣದೇವನನ್ನೂ ಅರ್ಜುನನನ್ನೂ ಯುದ್ಧಸಮಯದಲ್ಲಿ ನೀನು ಕಂಡೆಯಾದರೆ, ಅವರನ್ನು ಪರಿತ್ಯಜಿಸಿ ನೀನು ಬಂದುದೇಕೆ? ರಾತ್ರಿಯಲ್ಲಿ ದೈವಯೋಗದಿಂದ ಪತಿಯು ಬಳಿಗೆ ಬಂದಾಗ, ದುರ್ಭಾಗ್ಯಳಾದ ಹೆಂಗಸು ನಿದ್ರಿಸಿದಂತಾಯಿತು! ನಿನ್ನ ಬುದ್ಧಿವಂತಿಕೆಗೆ ನೀನೇ ಮೆಚ್ಚಿಕೊಳ್ಳುವೆಯಾ? ತುಳಸೀವನವನ್ನು ಉಪೇಕ್ಷಿಸಿ ಭಂಗೀಸೊಪ್ಪನ್ನು ತಂದಿದ್ದೀಯೆ! ಸೊಗಸಾದ ಸಂಪಿಗೆ ಹೂವಿನ ಮಾಲೆಯನ್ನು ಕೆಳಗೆಸೆದು ಯಾವ ಮೂಢಾತ್ಮನು ದತ್ತೂರಿ ಹೂವಿನ ಮಾಲೆಯನ್ನು ತೆಗೆದುಕೊಂಡಾನು? ನಾನು ಯಜ್ಞವನ್ನು ಮಾಡದೆ ಹೊರಟು ಹೋಗುವೆನು! ಆ ಕುದುರೆಗಳನ್ನು ಹೊಡೆದೋಡಿಸುವೆನು! ಎಲಾ ದುರ್ಬುದ್ಧಿಯೆ,

ಕೃಷ್ಣಾರ್ಜುನರು ಎಲ್ಲಿದ್ದಾರೆ-ಎಂಬುದನ್ನಾದರೂ ಹೇಳು" ಎಂದು ಗದರಿಸಿದರು. ಈ ರೀತಿಯಲ್ಲಿ ಮಯೂರಧ್ವಜನು ಮಗನನ್ನು ಮತ್ತೆ ಮತ್ತೆ ಹಳಿಯುತ್ತ, ಶ್ರೀಕೃಷ್ಣನು ಬರಬಹುದೆಂಬ ನಿರೀಕ್ಷಣೆಯಿಂದ ಪತ್ನೀಸಹಿತನಾಗಿ ಯಾಗಶಾಲೆಯಲ್ಲಿದ್ದನು.

ಇತ್ತಲಾಗಿ ಮಣಿಪುರದ ಬಳಿಯ ರಣಭೂಮಿಯಲ್ಲಿ ಶ್ರೀಕೃಷ್ಣಾರ್ಜುನರೂ ಇತರರೂ ಮೂರ್ಛೆಯಿಂದ ಎಚ್ಚೆತ್ತರು. ಅರ್ಜುನನು ಶ್ರೀಕೃಷ್ಣನನ್ನು ನೋಡಿ "ಸ್ವಾಮಿ, ಅಶ್ವಗಳೆರಡೂ ಏನಾದವು? ತಾಮ್ರಧ್ವಜನು ಎಲ್ಲಿ ಹೋದನು? ಈಗ ಎಲ್ಲಿ ಯುದ್ಧವು ನಡೆಯುತ್ತಿರುವುದೋ ಅಲ್ಲಿಗೆ ನನ್ನನ್ನೂ ಕರೆದುಕೊಂಡು ಹೋಗು" ಎಂದನು. ಶ್ರೀಕೃಷ್ಣನು "ಅರ್ಜುನ, ಅಶ್ವಗಳು ಮಯೂರಧ್ವಜಪಾಲಿತವಾದ ರತ್ನಪುರಿಯ ಕಡೆಗೆ ಈ ರಣಭೂಮಿಯಿಂದ ಹೊರಟು ಹೋಗಿರಬೇಕೆಂದು ತೋರುತ್ತದೆ! ನಾವು ಅಲ್ಲಿಗೆ ಹೋಗೋಣ. ನೀನು ನನ್ನೊಡನೆ ಬಾ. ಉಳಿದ ವೀರರು ಹಿಂದಿನಿಂದ ಬರಲಿ. ನಿನಗೆ ಮಯೂರಧ್ವಜನ ಸಾಹಸವನ್ನು ತೋರಿಸಿಕೊಡುವೆನು!" ಎಂದು ನುಡಿದು ಪಾರ್ಥನ ಕೈಯನ್ನು ಹಿಡಿದುಕೊಂಡು ಹೊರಟನು. ಅವರ ಹಿಂದೆ ಸೈನ್ಯವು ಹೊರಟಿತು. ವಾಸುದೇವನು "ಅರ್ಜುನ, ಮುಂದೆ ಕಾಣುವುದೇ ಯಜ್ಞದೀಕ್ಷಿತನಾದ ಮಯೂರಧ್ವಜನ ರತ್ನಪುರ. ದಿವ್ಯವಾದ ಪ್ರಾಕಾರದಿಂದಲೂ ತೋರಣದಿಂದಲೂ ಅದು ಎಷ್ಟು ರಮ್ಯವಾಗಿದೆ, ನೋಡು! ಮಯೂರಧ್ವಜನ ಆಚಾರವೂ ಮನಸ್ಸೂ ಎಷ್ಟು ಪರಿಶುದ್ಧವೆಂಬುದನ್ನು ಕಾಣುವೆ. ನಾನು ವಂಚಿಸುವುದಕ್ಕಾಗಿ ಬಂದಿದ್ದರೂ ಅವನು ಸತ್ಯವನ್ನೆಂದಿಗೂ ತೊರೆಯುವುದಿಲ್ಲ. ನಾನು ವೃದ್ಧಬ್ರಾಹ್ಮಣನ ವೇಷವನ್ನು ಧರಿಸಿ ಆತನಲ್ಲಿ ಒಂದು ಪ್ರಾರ್ಥನೆಯನ್ನು ಮಂಡಿಸುವೆನು. ನಿನ್ನನ್ನು ಒಬ್ಬ ಬಾಲಕನನ್ನಾಗಿ ಮಾಡುವೆನು! ಅರ್ಜುನ, ಇದೆಲ್ಲವೂ ನಿನ್ನ ಹಿತಕ್ಕಾಗಿಯೇ. ಬಾ ನನ್ನೊಡನೆ. ಈರ್ವರೂ ಈ ಮಹಾನಗರವನ್ನು ಪ್ರವೇಶಿಸೋಣ. ಇದು ಬಹುಮಂದಿ ಕಾವಲುಗಾರರಿಂದ ರಕ್ಷಿತವಾಗಿದೆ. ನಾನು ರಾತ್ರಿಯಲ್ಲಿ ಇದರೊಳಗೆ ಪ್ರವೇಶಿಸುವೆನು" ಎಂದನು. ಅದರಂತೆಯೇ ಅವರಿಬ್ಬರೂ ವೇಷಾಂತರವನ್ನು ಮಾಡಿಕೊಂಡು ಯಾರೂ ಅರಿಯದಂತೆ ರತ್ನಪುರವನ್ನು ಹೊಕ್ಕರು.

ನಗರದ ಪ್ರಜೆಗಳು ನಿದ್ರಿಸುತ್ತಿದ್ದರು. ಕೆಲವರು ಕಾಂತೆಯರೊಂದಿಗೆ ಮಂಚಗಳ ಮೇಲೆ ಮಲಗಿ ಪ್ರಣಯಚೇಷ್ಟೆಯಲ್ಲಿ ತೊಡಗಿದ್ದರು. ಅವರಾಡುವ ಮಾತುಗಳನ್ನು ಕೇಳಿಸಿಕೊಳ್ಳುತ್ತ ಶ್ರೀಕೃಷ್ಣನು ಹೋಗುತ್ತಿದ್ದನು. ಪ್ರಣಯಿಗಳಲ್ಲಿ ಓರ್ವನು ಬೆಳದಿಂಗಳಿಂದ ಕಳೆಯೇರಿದ್ದ ತನ್ನ ಕಾಂತೆಯ ಮುಖವನ್ನು ಕೈಯಿಂದ ಹಿಡಿದು "ಭದ್ರೆ ನೀಲೋತ್ಪಲಾಕ್ಷಿ, ನಿನ್ನ ಸರ್ವಾಂಗಗಳನ್ನು ನೋಡಿದರೂ ನನಗೆ ಕೃಷ್ಣದರ್ಶನದಿಂದಾಗುವಷ್ಟು ಸಂತೃಪ್ತಿ ಯಾಗುವುದಿಲ್ಲ" ಎಂದನು. ಅವನ ಕಾಂತೆಯು "ನಾಥ, ನಾನು ಕೃಷ್ಣಸಂಯುಕ್ತಳೇ ಆಗಿರುವೆನು! ರತಿಕಾಲದಲ್ಲಿ ನನ್ನ ಕಣ್ಣುಗಳಲ್ಲಿರುವ ಕೃಷ್ಣನನ್ನು ನೋಡಿದಾಗ ನಿನಗೆ

ಮೋಕ್ಷಸುಖವೇ ಒದಗಿದೆಯೆಂದು ಅನ್ನಿಸುತ್ತದೆ!" ಎಂದಳು. ಆಗ ಪ್ರಿಯನು "ಪ್ರಿಯೆ, ಎಡಗೈಯಿಂದ ನನ್ನ ತಲೆಕೂದಲನ್ನು ಗಟ್ಟಿಯಾಗಿ ಹಿಡಿದು ಬಿಟ್ಟೆಯಲ್ಲ! ನನ್ನ ಕೂದಲು ಕಿತ್ತುಹೋಗುವುದಿಲ್ಲವೆ?" ಎಂದನು. ಅವಳು "ಎಲೈ ಧೀರನೆ, ನನ್ನ ಅಧರಪುಟವನ್ನು ಬಿಡು; ಕುಚಮಂಡಲವನ್ನು ಹಿಸುಕಿ ಕಿತ್ತುಬಿಡಬೇಡ! ಸುವೃತ್ತರನ್ನು[1] ಪೀಡಿಸುವುದು ಸ್ಖಲನಕ್ಕೆ ಕಾರಣವಾಗುತ್ತದೆ!" ಎಂದಳು. ಅವನು "ಈ ಕುಚಗಳು ಸುವೃತ್ತಗಳಾದ ಮುತ್ತುಗಳ ಸಂಗವನ್ನು ತ್ಯಜಿಸಿವೆ! ಆದ್ದರಿಂದ ಸ್ತನಾಗ್ರಗಳು ಕೃಷ್ಣ[2]ವಾಗಿರುವವರೆಗೂ ಪೀಡಿಸುತ್ತಲೇ ಇರುವೆನು!" ಎಂದನು.

ಈ ಬಗೆಯ ಸಂಭಾಷಣೆಯನ್ನು ಕೇಳುತ್ತ ಶ್ರೀಕೃಷ್ಣನು ರಾತ್ರಿಯಲ್ಲಿ ನಗರವನ್ನು ಸಂಚರಿಸಿ, ಪ್ರಾತಃಕಾಲದಲ್ಲಿ ಅರ್ಜುನಸಮೇತನಾಗಿ ಮಯೂರಧ್ವಜನ ಯಜ್ಞವಾಟಿಕೆಗೆ ಹೋದನು. ಯಜ್ಞಮಂಟಪವು ಸಾಮಂತರಾಜರಿಂದ ರಕ್ಷಿತವಾಗಿತ್ತು. ಮಯೂರಧ್ವಜನು ಬ್ರಾಹ್ಮಣರಿಂದ ಪರಿವೃತನಾಗಿ ಒಂದು ಉತ್ತಮವಾದ ಆಸನದಲ್ಲಿ ಕುಳಿತಿದ್ದನು. ಕಸ್ತೂರಿ ಮತ್ತು ಪಚ್ಚಕರ್ಪೂರಗಳ ಪರಿಮಳದಿಂದ ಯಜ್ಞಮಂಟಪವು ಗಮಗಮಿಸುತ್ತಿತ್ತು. ನಾನಾರತ್ನಗಳಿಂದ ಮಂಟಪವು ಅಲಂಕೃತವಾಗಿತ್ತು. ಅಲ್ಲಿ ಶ್ರೀಕೃಷ್ಣನು ಮಯೂರಧ್ವಜನನ್ನು ಕಂಡನು.

---

೧. ಸುವೃತ್ತ = ವರ್ತುಲಾಕಾರವಾದ ಸ್ತನಗಳು-ಒಳ್ಳೆಯ ನಡತೆಯುಳ್ಳವರು.

೨. ಕೃಷ್ಣ = ಕಪ್ಪು ಬಣ್ಣ ಉಳ್ಳದ್ದು - ಪಾಪಕರ್ಮಿ. ರತ್ನಪುರಿಯ ಪ್ರಜೆಗಳು ಎಲ್ಲ ಸಮಯದಲ್ಲಿಯೂ ಶ್ರೀಕೃಷ್ಣನ ವಿಷಯವಾಗಿಯೇ ಮಾತಾಡುತ್ತಿದ್ದರೆಂದು ಸೂಚಿಸುವುದು ಕವಿಯ ಆಶಯವಾಗಿದೆ.

# ಮಯೂರಧ್ವಜನ ದೇಹಾರ್ಧದಾನ

ಜನಮೇಜಯ, ವೇಷಧಾರಿಯಾಗಿ ಬಂದ ಶ್ರೀಕೃಷ್ಣನು ಯಜ್ಞಮಂಟಪದಲ್ಲಿ ಪತ್ನೀಸಮೇತನಾಗಿಯೂ ಆ ಎರಡು ಅಶ್ವಗಳಿಂದ ಯುಕ್ತನಾಗಿಯೂ ಇದ್ದ ಮಯೂರಧ್ವಜನ ಬಳಿಗೆ ಬಂದು "ನೃಪಶ್ರೇಷ್ಠ, ನಿನಗೆ ಶುಭವಾಗಲಿ! ನಾನು ಶಿಷ್ಯ ಸಮೇತನಾಗಿ ಬಂದಿದ್ದೇನೆ, ನೋಡು" ಎಂದು ಹೇಳಿದನು. ಆಗ ಮಯೂರಧ್ವಜನು "ವಿಪ್ರೋತ್ತಮ, ಶಿಷ್ಯಸಮೇತನಾದ ನಿನಗೆ ನಮಸ್ಕರಿಸುವುದಕ್ಕಾಗಿ ನಾನು ಎದ್ದು ನಿಲ್ಲುವಷ್ಟರಲ್ಲಿಯೇ 'ಶುಭವಾಗಲಿ!' ಎಂದು ಹೇಳುವೆಯಲ್ಲ! ನಮಸ್ಕಾರವನ್ನು ಮಾಡದಿದ್ದವನಿಗೆ ಮೊದಲೇ ಬ್ರಾಹ್ಮಣನು ಆಶೀರ್ವಾದಮಾಡಿದರೆ, ಅದು ಆಶೀರ್ವಾದವಾಗದೆ ಶಾಪವಾಗುವುದು! ಆದ್ದರಿಂದ ನೀನು ಹೇಳಿದ್ದು ಸರಿಯಲ್ಲ" ಎಂದನು. ಬಳಿಕ ಆ ವಿಪ್ರನಿಗೆ ದಂಡವತ್ ಪ್ರಣಾಮವನ್ನು ಅರ್ಪಿಸಿದನು. ಮಹಾಬುದ್ಧಿಶಾಲಿಯಾದ ಶ್ರೀಕೃಷ್ಣನು ಅವನನ್ನು ಹಿಡಿದೆಬ್ಬಿಸಿದನು. ಮಯೂರಧ್ವಜನು ಕಪಟ ಬ್ರಾಹ್ಮಣನಾದ ವಾಸುದೇವನ್ನು ಕುರಿತು "ಪೂಜ್ಯಪಾದರು ಶಿಷ್ಯಸಮೇತರಾಗಿ ನನ್ನ ಯಾಗಮಂಟಪಕ್ಕೆ ದಯಮಾಡಿಸಿದ ಉದ್ದೇಶವೇನು? ನನ್ನಿಂದ ಏನಾಗಬೇಕು, ಅಪ್ಪಣೆಯಾಗಲಿ. ನಾನು ಧನ್ಯನಾದೆನು; ಅನುಗೃಹೀತನಾದೆನು. ತಮಗೆ ಯಾವುದನ್ನಾದರೂ ಅರ್ಪಿಸುವೆನು. ಕೊಡಲಾಗದ ವಸ್ತುವೆಂಬುದೇ ನನ್ನಲ್ಲಿಲ್ಲ" ಎಂದು ಹೇಳಿದನು. ವಿಪ್ರನು "ಮಹಾರಾಜ, ನಮಸ್ಕಾರವನ್ನು ಮಾಡದಿದ್ದರೂ ರಾಜರನ್ನು ಬ್ರಾಹ್ಮಣರು ಆಶೀರ್ವದಿಸಬಹುದು! ಇತರರು ವಿಜ್ಞಾಪಿಸಿಕೊಳ್ಳುವಾಗ ಮೊದಲು ರಾಜರಿಗೆ ನಮಸ್ಕರಿಸಬೇಕು" ಎಂದು ತಿಳಿಸಿದನು. ಮಯೂರಧ್ವಜನು "ತಮಗೆ ಏನಾಗಬೇಕೆಂಬುದನ್ನು ನಿಶ್ಶಂಕೆಯಿಂದ ಪೂಜ್ಯರು ಆಜ್ಞಾಪಿಸಬೇಕು. ನನ್ನ ಹಣವಾಗಲಿ-ಪ್ರಾಣವಾಗಲಿ ಯಾವುದನ್ನಾದರೂ ಒಪ್ಪಿಸಿ ಕಾರ್ಯವನ್ನು ಪೂರ್ಣವಾಗಿ ನೆರವೇರಿಸಿಕೊಡುವೆನು" ಎಂದನು. ಆಗ ಕಪಟ ಬ್ರಾಹ್ಮಣನು ಈ ರೀತಿಯಲ್ಲಿ ನುಡಿದನು: "ರಾಜ, ನಾನು ಬಂದುದೇಕೆಂಬುದನ್ನು ಹೇಳುವೆನು, ಕೇಳು. ನನ್ನ ಮಗನಿಗೆ ಮದುವೆಯನ್ನು ಮಾಡಬೇಕೆಂಬ ಉದ್ದೇಶವನ್ನಿಟ್ಟುಕೊಂಡು ಧರ್ಮಪುರದಿಂದ ಬರುತ್ತಿದ್ದೆನು. ನಾನು ಕೃಷ್ಣಶರ್ಮನೆಂಬ ದ್ವಿಜನು! ಇಲ್ಲಿ ಒಬ್ಬ ಬ್ರಾಹ್ಮಣನು ನಿನ್ನ ಪುರೋಹಿತನಾಗಿದ್ದಾನೆ. ಅವನಿಗೆ ಒಬ್ಬ ಕನ್ಯೆ ಇದ್ದಾಳೆ. ಶೀಲವಂತನಾದ ಆ ವಿಪ್ರನು ತನ್ನ ಮಗಳನ್ನು ಮದುವೆ ಮಾಡಿಕೊಡುವನೆಂದು ತಿಳಿದು ಬರುತ್ತಿದ್ದೆನು. ನಾನು ಪುತ್ರಸಹಿತನಾಗಿ ನಿನ್ನ ನಗರಕ್ಕೆ ಬರುತ್ತಿರುವಾಗ ದಾರಿಯಲ್ಲಿ ಒಂದು ಘೋರಾರಣ್ಯವು ಸಿಕ್ಕಿತು. ಮಹಾರಾಜ, ಏನು ಹೇಳಲಿ! ಕ್ರುದ್ಧವಾದ ಒಂದು ಸಿಂಹವು ತರುಣನಾದ ನನ್ನ ಮಗನನ್ನು ನನ್ನ ಕಣ್ಣೆದುರಿಗೇ ಆಕ್ರಮಿಸಿ ಹಿಡಿದು ಬಿಟ್ಟಿತು! ಮಗನನ್ನು ಬಿಡಿಸಿಕೊಳ್ಳುವುದಕ್ಕಾಗಿ ನಾನು ಪ್ರಯತ್ನಿಸಿದೆನು. ನರಸಿಂಹಮಂತ್ರವನ್ನು ಜಪಿಸಿದರೂ ನರಸಿಂಹನು ಪ್ರತ್ಯಕ್ಷನಾಗಲಿಲ್ಲ! ಸಿಂಹವು ಉಗುರುಗಳಿಂದ ಪುತ್ರನ ದೇಹವನ್ನು ಹಿಡಿದು ಪೀಡಿಸುತ್ತಿತ್ತು. ಬಾಲವನ್ನು ಅಲ್ಲಾಡಿಸುತ್ತ ಭೀಕರವಾದ ಕೋರೆಹಲ್ಲುಗಳನ್ನು ಕಿರಿದು ದುಃಖಸಂತಪ್ತನಾದ ನನ್ನನ್ನು ಹಾಸ್ಯಮಾಡುತ್ತ ಮನುಷ್ಯವಾಕ್ಕಿನಿಂದ ಹೀಗೆಂದಿತು: "ಎಲೈ ಬ್ರಾಹ್ಮಣ, ಮಗನಿಗೋಸ್ಕರ ವ್ಯರ್ಥವಾಗಿ ಶ್ರಮಿಸುತ್ತಿದ್ದೀಯೆ. ಮೃತ್ಯುಸ್ವರೂಪನಾದ

ನನ್ನ ಕೈಗೆ ಸಿಕ್ಕಿದವನನ್ನು ಯಾರೂ ಉಳಿಸಲಾರರು. ನಿನ್ನ ಶಿಷ್ಯನೊಡನೆ ಸುಮ್ಮನೆ ಮನೆಗೆ ಹೋಗು. ಇನ್ನು ವಿಚಾರವೇ ಬೇಡ. ನಮ್ಮಂತಹ ಕ್ರೂರಪ್ರಾಣಿಗಳೆದುರಿಗೆ ನಿಂತಿರುವುದು ಕ್ಷೇಮವಲ್ಲ! ಬೇಕಾದರೆ ಇನ್ನೊಬ್ಬ ಮಗನನ್ನು ಪಡೆದುಕೊ! "ಅಪುತ್ರಸ್ಯ ಗತಿರ್ನಾಸ್ತಿ' ಎಂದು ವೇದವು ಹೇಳುವುದಲ್ಲವೆ!" ಎಂದಿತು. ಆಗ ನಾನು "ಎಲೈ ಸಿಂಹವೆ, ನನ್ನನ್ನು ಭಕ್ಷಿಸು. ಸದ್ಗತಿದಾಯಕನಾದ ನನ್ನ ಮಗನನ್ನು ಬಿಟ್ಟುಬಿಡು. ಇನ್ನು ಸ್ವಲ್ಪ ಕಾಲವೇ ಬದುಕತಕ್ಕವನೂ ವೃದ್ಧನೂ ಆಗಿರುವ ನಾನು ಪುತ್ರಹೀನನಾಗಿ ಬಾಳುವುದು ವ್ಯರ್ಥ" ಎಂದು ತಿಳಿಸಿದೆನು. ಸಿಂಹವು "ಎಲೈ ವಿಪ್ರ, ನಾವು ಮೃತ್ಯುಗ್ರಸ್ತರಾದವರನ್ನು ಕೊಲ್ಲುತ್ತೇವೆ. ಸರ್ಪಗಳು, ಹಿಂಸ್ರ ಪ್ರಾಣಿಗಳು, ನೀರು-ಮೊದಲಾದವು ಮೃತ್ಯುವಿಗೆ ಸಹಾಯ ಮಾಡುತ್ತವೆ! ನಿನಗೆ ಇನ್ನೂ ಬಹಳ ಆಯುಸ್ಸು ಇದೆ. ನಿನ್ನ ಮಗನ ಆಯುಸ್ಸು ಕಳೆದು ಹೋಯಿತು. ಆದ್ದರಿಂದ ನಾನು ಆಜ್ಞೆಮಾಡುತ್ತೇನೆ. ನೀನು ಹೊರಟುಹೋಗು. ಇಲ್ಲಿ ಏನು ಮಾಡುತ್ತೀಯೆ?" ಎಂದಿತು. ನಾನು "ಏನು ಮಾಡಿದರೆ ನನ್ನ ಮಗನನ್ನು ಬಿಡುತ್ತೀಯೆ, ಹೇಳು. ದಾನವೆ? ತಪಸ್ಸೆ? ಅಥವಾ ಇನ್ನು ಯಾವುದಾದರೂ ಉಪಾಯ ಉಂಟೆ?" ಎಂದು ಕೇಳಿದೆನು. ಆಗ ಸಿಂಹವು ಏನು ಹೇಳಿತೋ ಅದನ್ನು ನಾನು ನಿನ್ನಿಂದ ಬೇಡಬಹುದೆ?"

ಆಗ ಮಯೂರಧ್ವಜನು "ವಿಪ್ರೇಂದ್ರ, ನನ್ನ ರಾಜ್ಯದಲ್ಲಿ ಈ ಬಗೆಯ ಕ್ಷುದ್ರವಾದ ಸಿಂಹವು ವಾಸವಾಗಿಲ್ಲ! ನರಸಿಂಹನನ್ನು ಬಿಟ್ಟರೆ ಇನ್ನು ಯಾರು ನಿನ್ನ ಪುತ್ರನನ್ನು ಹಿಡಿದುಕೊಳ್ಳಲು ಶಕ್ತರಾದಾರು?" ಎಂದನು. ಕಪಟ ಬ್ರಾಹ್ಮಣನು "ಮಹಾರಾಜ, ಸಿಂಹವು ಯಾವುದೋ ಒಂದು ವಸ್ತುವನ್ನು ಬೇಡಿತು. ಅದು ಬೇಡಿದುದನ್ನು ನೀನು ಕೊಡಬಲ್ಲೆಯಾ?" ಎಂದು ಕೇಳಿದನು. ಮಯೂರಧ್ವಜನು "ವಿಪ್ರೋತ್ತಮ, ಸಿಂಹವು ಏನನ್ನ ಬೇಡಿತು? ಬೇಗನೆ ಅದನ್ನು ತಿಳಿಸು. ಅದು ಯಾವುದಾದರೂ ಕೊಡುತ್ತೇನೆ. ನನ್ನ ಮಾತು ಎಂದಿಗೂ ಸುಳ್ಳಾಗದು" ಎಂದು ನುಡಿದನು. ಬ್ರಾಹ್ಮಣನು "ರಾಜ, ನಾನು ಕೇಳಿದುದನ್ನು ನೀನು ಕೊಡಬಲ್ಲೆಯಾ? ಪುತ್ರವಿಯೋಗವು ಅತ್ಯಂತ ದುಃಖಕರವಾದ್ದರಿಂದ ನಾನು ಹೀಗೆ ಹೇಳುತ್ತಿದ್ದೇನೆ. ಪ್ರಾಣವೆಂಬುದು ಎಲ್ಲರಿಗೂ ಪ್ರಿಯವಾದದ್ದು. ಸಿಂಹದ ಕೇಳಿಕೆಯನ್ನು ನೀನು ಸಲ್ಲಿಸುವುದಾದರೆ, ಮಹಾರಾಜ, ಕ್ರೂರವಾದ ಅದರ ವಿಷಯವನ್ನು ಕೇಳು! ಸಿಂಹವು ಹೀಗೆಂದಿತು: "ಬ್ರಾಹ್ಮಣ, ಮಯೂರಧ್ವಜನ ದೇಹಾರ್ಧವನ್ನು ನನಗೆ ತಂದು ಕೊಡುವೆಯಾದರೆ, ನಿನ್ನ ಮಗನನ್ನು ಬಿಟ್ಟುಕೊಡುತ್ತೇನೆ! ನಿನ್ನ ದೇಹವು ತಪಸ್ಸಿನಿಂದ ಜೀರ್ಣವಾಗಿ ಮುದಿಯಾಗಿದೆ. ಅದು ನನಗೆ ಹಿಡಿಸುವುದಿಲ್ಲ. ಮಯೂರಧ್ವಜನ ದೇಹವು ನಾನಾ ವಿಧವಾದ ಫಲಗಳಿಂದಲೂ ದಿವ್ಯಾನ್ನಗಳಿಂದಲೂ ಪುಷ್ಟವಾಗಿದೆ. ಅದು ನನಗೆ ರುಚಿಸುತ್ತದೆ. ಅವನ ದೇಹಾರ್ಧವನ್ನು ಕತ್ತರಿಸಿ ತಂದು ಕೊಡುವವರೆಗೂ ನಿನ್ನ ಮಗನನ್ನು ನಾನು ಭಕ್ಷಿಸುವುದಿಲ್ಲ, ಇದು ಸತ್ಯ.' ಆಗ ನಾನು ಎಲೈ ಮೃಗರಾಜ, ಮಯೂರಧ್ವಜನು ಯಾರನ್ನೋ ಉಳಿಸುವುದಕ್ಕಾಗಿ ಸುಂದರವಾದ ತನ್ನ ದೇಹವನ್ನು ಏಕೆ ಸೀಳಿ ಕೊಟ್ಟಾನು? ಇದು ಆಗದ ಮಾತು. ನಾನು ರಾಜನ ಬಳಿಗೆ ಹೋಗುವುದಿಲ್ಲ" ಎಂದೆನು. ಅದಕ್ಕೆ

ಸಿಂಹವು "ಬ್ರಾಹ್ಮಣ, ರಾಜನ ಬಳಿಗೆ ಹೋಗು. ದಧೀಚಿಯು ತನ್ನ ಮೂಳೆಗಳನ್ನೇ ಕೊಡಲಿಲ್ಲವೆ? ಕರ್ಣನು ಕವಚವನ್ನು ಕೊಡಲಿಲ್ಲವೆ? ಹಾಗೆಯೇ ಮಯೂರಧ್ವಜನು ಬ್ರಾಹ್ಮಣನಿಗೋಸ್ಕರ ದೇಹಾರ್ಧವನ್ನು ಕೊಟ್ಟೇಕೊಡುವನು. ಕೀರ್ತಿಶಾಲಿಗಳಿಗೆ ತಮ್ಮ ದೇಹದ ಮೇಲೆ ಎಂದಿಗೂ ಅಭಿಮಾನವಿರುವುದಿಲ್ಲ. ಕ್ಷತ್ರಿಯರು ಬ್ರಾಹ್ಮಣಕಾರ್ಯಕ್ಕಾಗಿ ರಣಮಧ್ಯದಲ್ಲಿ ತಮ್ಮ ದೇಹವನ್ನೇ ಒಪ್ಪಿಸುತ್ತಾರೆ. ವಿಪ್ರ, ನಿನಗೆ ಬೇರೆ ಮಕ್ಕಳಿಲ್ಲ. ಆದ್ದರಿಂದ ಅಲ್ಲಿಗೆ ಹೋಗು. ಹೋಗಿ ನಿನ್ನ ಪುತ್ರಶೋಕವನ್ನು ನಿವೇದಿಸು. ಮಯೂರಧ್ವಜನಿಗೆ ಅನೇಕ ಮಂದಿ ಮಕ್ಕಳಿದ್ದಾರೆ. ಬಹುಕಾಲ ರಾಜ್ಯವನ್ನು ಪಾಲಿಸಿದ್ದೂ, ಆಗಿದೆ. ನಿನ್ನನ್ನು ನೋಡಿ ಅವನಿಗೆ ಮರುಕ ಉಂಟಾಗುತ್ತದೆ. ಜನರು ಕೊಡಲಿ-ಕೊಡದಿರಲಿ, ಅರ್ಥಿಗಳು ತಮಗೆ ಬೇಕಾದ್ದನ್ನು ಬೇಡುತ್ತಾರೆ." ಈ ರೀತಿಯಲ್ಲಿ ಸಿಂಹವು ಪ್ರೇರಿಸಿದ್ದರಿಂದ, ರಾಜ ನಾನು ಶಿಷ್ಯ ಸಮೇತನಾಗಿ ಪುತ್ರಶೋಕದಿಂದ ಬೇರೆ ದಾರಿ ಕಾಣದೆ ನಿನ್ನ ಸಮೀಪಕ್ಕೆ ಬಂದೆನು. ಮಹಾರಾಜ, ಯಾವ ಉಪಾಯದಿಂದಲಾದರೂ ನನ್ನ ಮಗನನ್ನು ಸಿಂಹದಿಂದ ಬಿಡಿಸಿಕೊಡು. ಅಲ್ಲದೆ ಆ ಸಿಂಹವು "ಎಲೈ ವಿಪ್ರ, ರಾಜನ ದೇಹಾರ್ಧವನ್ನು ತರದೆ ಬರಿಗೈಯಿಂದ ನೀನು ಬರಕೂಡದು. ಹಾಗೇನಾದರೂ ಬಂದರೆ ನಿನ್ನ ಮಗನನ್ನು ಎಂದಿಗೂ ಬಿಡುವುದಿಲ್ಲ" ಎಂಬುದಾಗಿ ಕಠೋರವಾದ ಮಾತನ್ನು ಹೇಳಿ ಅದೃಶ್ಯವಾಯಿತು. ಹೀಗೆ ಹೇಳಿದ್ದರಿಂದ ನಾನು ಇಲ್ಲಿಗೆ ಬಂದೆನು. ದುರ್ಬಲರಾದ ಜನರು ತಮ್ಮ ಕಷ್ಟವನ್ನು ದೊರೆಗೆ ನಿವೇದಿಸಿಕೊಳ್ಳುವುದು ಕರ್ತವ್ಯ. ಬ್ರಹ್ಮಚಾರಿಯಾಗಿದ್ದ ಒಬ್ಬ ಬ್ರಾಹ್ಮಣಪುತ್ರನು ಮೃತನಾದಾಗ, ಶ್ರೀರಾಮಚಂದ್ರನು ತನ್ನ ಪೌರುಷದಿಂದ ಅವನನ್ನು ಬದುಕಿಸಿ ಮರಳಿ ತಂದುಕೊಟ್ಟಿದ್ದಾನೆ. ಭೂಪಾಲ, ಪುತ್ರನ ಮೇಲಿನ ಆಸೆಯಿಂದ ನಾನು ಬರಬೇಕಾಯಿತು. ಸತ್ವಗುಣದಲ್ಲಿ ನೀನು ಶ್ರೀರಾಮನಿಗೆ ಸದೃಶನೆಂದು ಭಾವಿಸಿ ಧೈರ್ಯದಿಂದ ಇಲ್ಲಿಗೆ ಬಂದೆನು" ಎಂದು ಕಪಟವಿಪ್ರನು ಹೇಳಿದನು.

ವಿಪ್ರನ ಮಾತನ್ನು ಕೇಳಿ ಮಯೂರಧ್ವಜನು "ಬ್ರಾಹ್ಮಣೋತ್ತಮ, ಇದೋ ಈ ಮಂಟಪದಲ್ಲಿಯೇ ನನ್ನ ದೇಹವನ್ನು ಒಪ್ಪಿಸುತ್ತೇನೆ! ಈ ದ್ವಿಜರೆಲ್ಲರೆದುರಿಗೆ ನಾನು ಹೇಳಿದುದು ಸತ್ಯವೆಂದು ತಿಳಿ" ಎಂದನು. ಅನಂತರ ತನ್ನ ಮಗನಾದ ತಾಮ್ರಧ್ವಜನಿಗೆ ರಾಜ್ಯಭಾರವನ್ನೊಪ್ಪಿಸಿ ಗಂಗಾಜಲದಿಂದಲೂ ಸಾಲಗ್ರಾಮಶಿಲಾಜಲದಿಂದಲೂ ಸ್ನಾನಮಾಡಿದನು. ನಗು ನಗುತ್ತಲೇ ತುಳಸೀಮಾಲೆಯನ್ನು ಕಂಠದಲ್ಲಿ ಧರಿಸಿದನು. ಶಂಖ ಚಕ್ರಗಳ ಚಿಹ್ನೆಯಿಂದ ದೇಹವನ್ನು ಅಲಂಕರಿಸಿಕೊಂಡನು. ಆಮೇಲೆ ಸಂತೋಷದಿಂದ ಸಭಾಮಂಟಪಕ್ಕೆ ಆಗಮಿಸಿ ನೆರೆದಿದ್ದ ಸಭಾಸದರನ್ನು ನೋಡಿ "ಎಲೈ ವಿಪ್ರೋತ್ತಮರೆ, ಶ್ರೀಕೃಷ್ಣನೇ ಈ ಬ್ರಾಹ್ಮಣರೂಪದಿಂದ ಬಂದಿರುವನೆಂದು ತಿಳಿದು ನನ್ನ ದೇಹಾರ್ಧದಿಂದ ಈತನನ್ನು ಪೂಜಿಸುತ್ತೇನೆ! ಈತನು ಪುತ್ರಸಮೇತನಾಗಿ ಬಾಳಲಿ. ಯಜ್ಞಮಂಟಪದಲ್ಲಿ ನಡೆಯುವ ಈ ಕೌತುಕವನ್ನು ನೋಡಿರಿ. ಬಡಗಿಗಳು ಗರಗಸವನ್ನು ತೆಗೆದುಕೊಂಡು ಕೂಡಲೆ ಬರಲಿ. ಎರಡು ಕಂಭಗಳನ್ನು ನಿಲ್ಲಿಸಿ ನನ್ನ ಶಿರಸ್ಸನ್ನು ಸೀಳಲಿ! ಯಾರಿಗೆ ನನ್ನ ಮೇಲೆ ದೃಢವಾದ ಪ್ರೀತಿಯುಂಟೋ ಅವರು ಈ ಕಾರ್ಯಕ್ಕೆ ಅಡ್ಡಿಯನ್ನು ತರಬಾರದು!" ಎಂದು ಹೇಳಿದನು.

# ಮಯೂರಧ್ವಜನ ವಿಜಯ

ಜನಮೇಜಯ, ಈ ಪ್ರಕಾರವಾದ ಮಯೂರಧ್ವಜನ ನುಡಿಯನ್ನು ಕೇಳಿ ರಾಜನ ಸಚಿವರೂ ನೆರೆದಿದ್ದ ಬ್ರಾಹ್ಮಣರೂ ಭಯದಿಂದ ನಡುಗಿದರು. ಅವರು ಶೋಕಸಂತಪ್ತರಾಗಿ ಒಬ್ಬರಿಗೊಬ್ಬರು "ಯಮಸದೃಶನಾದ ಈ ಬ್ರಾಹ್ಮಣನು ಎಲ್ಲಿಂದ ಬಂದನು! ನಮ್ಮ ರಾಜನ ಪ್ರಾಣವನ್ನು ನಿರ್ದಯೆಯಿಂದ ಹೀರಲು ಬಂದನಲ್ಲ! ನಾವು ಎಷ್ಟೋ ಬಗೆಯ ಯಾಚಕರನ್ನು ಕಂಡಿದ್ದೇವೆ. ಆದರೆ ಇಂಥ ಯಾಚಕನನ್ನು ಎಲ್ಲಿಯೂ ಕಂಡಿಲ್ಲ! ನಿಷ್ಕರುಣೆಯಿಂದ ಯಾವ ನಾಚಿಕೆಗೇಡಿಯು ಮಹಾರಾಜನ ದೇಹವನ್ನೇ ಬೇಡಿಯಾನು? ಸಿಂಹವೇನೋ ಮಾಂಸಾಹಾರಿಯಾದ ಘಾತುಕಪ್ರಾಣಿಯೆಂಬುದು ಲೋಕಪ್ರಸಿದ್ಧ. ಇವನಾದರೋ ಮನುಷ್ಯ, ಬ್ರಾಹ್ಮಣ, ಜ್ಞಾನವಂತ! ಬ್ರಾಹ್ಮಣಜಾತಿಯಲ್ಲಿ ಹುಟ್ಟಿ ಇಂಥ ಸ್ವಾರ್ಥಿ ಹೇಗಾಗಿರಬಹುದು? ಈಗ ನಮಗೆ ಯಾವ ಉಪಾಯ ಉಳಿದಿದೆ? ಏನಾಗಬೇಕೋ ಅದು ಆಗುವುದು. ನಡೆಯಲೇ ಬೇಕಾದ ದುರ್ವಿಧಿಗೆ ಪ್ರತೀಕಾರವಿಲ್ಲ. ಸತ್ಯವಾದಿಯೂ ಅತಿಥಿ ಸತ್ಕಾರನಿಷ್ಠನೂ ಆದ ಮಹಾರಾಜನನ್ನು ತಡೆಯುವುದಾದರೂ ಹೇಗೆ? ಹಿಂದೆ ಬಲಿಚಕ್ರವರ್ತಿಯ ಯಜ್ಞಮಂಟಪಕ್ಕೆ ಶ್ರೀಹರಿಯು ವಾಮನವೇಷದಲ್ಲಿ ಬಂದಂತೆ ಈಗ ಬ್ರಾಹ್ಮಣವೇಷದಲ್ಲಿ ಬಂದನೆಂದು ತಿಳಿಯೋಣವೆ?" ಎಂದು ಮಾತಾಡಿಕೊಳ್ಳುತ್ತಿದ್ದರು. ಮಯೂರಧ್ವಜನು ಆ ಬ್ರಾಹ್ಮಣನನ್ನು ನಿಂದಿಸಬಾರದೆಂದು ಹೇಳಿ ಅವರನ್ನು ತಡೆದನು. ಸಂತೋಷದಿಂದ ವಿವಿಧ ದಾನಧರ್ಮಗಳನ್ನು ಮಾಡಿದನು.

ಅಷ್ಟರಲ್ಲಿ ರಾಜಾಜ್ಞೆಯಂತೆ ಬಡಗಿಗಳು ಬಂದು ಎರಡು ಕಂಭಗಳನ್ನು ನೆಟ್ಟರು. ಅವುಗಳ ಮೇಲೆ ಅಡ್ಡಲಾಗಿ ಇನ್ನೊಂದು ಮರದ ತುಂಡನ್ನಿಟ್ಟು ಹಗ್ಗಗಳಿಂದ ಬಿಗಿಯಾಗಿ ಕಟ್ಟಿದರು. ಬಳಿಕ ಮಯೂರಧ್ವಜನು ತನ್ನ ತಲೆಯ ಮೇಲೆ ಗರಗಸವನ್ನಿಡಬೇಕೆಂದು ಎಲ್ಲರೆದುರಿಗೂ ಹರ್ಷದಿಂದ ಆದೇಶವನ್ನಿತ್ತನು. ಆತನು ವಿಪ್ರನ ಪಾದಗಳನ್ನು ತೊಳೆದು "ನನ್ನ ಶರೀರಾರ್ಧದಿಂದ ಯಜ್ಞನಾಯಕನಾದ ಶ್ರೀಹರಿಯು ಸಂಪ್ರೀತನಾಗಲಿ. ವಿಪ್ರಕಾರ್ಯಕ್ಕಾಗಿ ತಮ್ಮ ಯೌವನವನ್ನೂ ಧನವನ್ನೂ ಧಾರೆಯೆರೆಯುತ್ತ ಪ್ರಜೆಗಳಿಗೆ ಹಿತವನ್ನು ಕೋರುತ್ತಿದ್ದ ನಮ್ಮ ವಂಶೀಯರೆಲ್ಲರನ್ನೂ ಶ್ರೀಕೃಷ್ಣನು ಅನುಗ್ರಹಿಸಲಿ. ಬ್ರಾಹ್ಮಣೋತ್ತಮ, ಕತ್ತರಿಸಿದ ಮೇಲೆ ನನ್ನ ದೇಹಾರ್ಧವನ್ನು ನೀನು ತೆಗೆದುಕೊಂಡು ಹೋಗು. ಈ ದಾನಕಾರ್ಯದಿಂದ ನರಸಿಂಹದೇವನು ಸಂಪ್ರೀತನಾಗಲಿ. ನನ್ನ ದೇಹವನ್ನು ಸೀಳಿಸುತ್ತೇನೆ. ಎಲೈ ಜಟ್ಟಿಗಳೆ, ಸೀಳಿದ ನನ್ನ ದೇಹವನ್ನು ರೇಷ್ಮೆಯ ಹಗ್ಗಗಳಿಂದ ಕಟ್ಟಿ ಬ್ರಾಹ್ಮಣನು ಹೇಳಿದಲ್ಲಿಗೆ ತೆಗೆದುಕೊಂಡು ಹೋಗಿ ಕೊಡತಕ್ಕದ್ದು. ಇದು ನನ್ನ ಆಜ್ಞೆ. ಇದಕ್ಕಾಗಿ ಈ ವಿಪ್ರನಿಗೆ ತಡವಾಗುವುದು ಬೇಡ. ಭೂತಳದಲ್ಲಿ ನಾನು ಹುಟ್ಟಿದುದು ಈ ಬ್ರಾಹ್ಮಣನಿಂದ ಸಾರ್ಥಕವಾಯಿತು. ಸಕಲರೂ ನನ್ನ ಮಾತನ್ನು ಆದರದಿಂದ ಆಲಿಸಬೇಕು. ಏನೆಂದರೆ, ಯಾರ ಶರೀರವೂ ಐಶ್ವರ್ಯವೂ ಪರೋಪಕಾರಕ್ಕಾಗಿ ವಿನಿಯೋಗ ವಾಗುತ್ತವೆಯೋ ಅವೇ ಸ್ಥಿರ. ದಾನವರ್ಜಿತವಾದ ಶರೀರವಾಗಲಿ-ಐಶ್ವರ್ಯವಾಗಲಿ

ಶೋಚನೀಯವೇ ಸರಿ. ಆದ್ದರಿಂದ ಸಭಾಸದರು ನನ್ನನ್ನು ನೋಡಿ ಸಂತೋಷಿಸಬೇಕು" ಎಂದು ನುಡಿದನು.

ಜನಮೇಜಯ, ಆಗ ರಾಜನನ್ನು ನೋಡಿ ರಾಷ್ಟ್ರವೇ ಹಾಹಾಕಾರ ಮಾಡಿತು. ಎಲ್ಲರೂ ಕುರರಪಕ್ಷಿಗಳಂತೆ ಗೋಳಾಡತೊಡಗಿದರು. ಆ ಸಮಯದಲ್ಲಿ ಮಯೂರಧ್ವಜನ ರಾಣಿಯಾದ ಕುಮುದ್ವತಿಯು ಮುಂದೆ ಬಂದು ಪತಿಯನ್ನು ನೋಡಿ "ಆರ್ಯಪುತ್ರ, ನಿನ್ನ ದೇಹದ ಅರ್ಧಭಾಗವನ್ನು ಬ್ರಾಹ್ಮಣನಿಗೆ ಕೊಡಬೇಕಾಗಿದೆಯೆಂದು ನಾನು ಕೇಳಿದ್ದೇನೆ. ನಾನು ನಿನ್ನ ಅರ್ಧಾಂಗಿ. ಆದ್ದರಿಂದ ಅರ್ಧಭಾಗವಾದ ನನ್ನನ್ನು ಬ್ರಾಹ್ಮಣನಿಗೆ ಒಪ್ಪಿಸಿ ಸತ್ಯವಾದಿ ಎನಿಸಿಕೊ. ಜೀವವಿರುವ ವಸ್ತುವನ್ನು ದಾನ ಮಾಡಬೇಕಲ್ಲದೆ ಜೀವರಹಿತವಾದ ಅರ್ಧ ದೇಹವನ್ನಲ್ಲ. ಅಲ್ಲದೆ ಇತರರು ಸೀಳಿದ ದೇಹವನ್ನು ಸಿಂಹವು ಸ್ವೀಕರಿಸುವುದಿಲ್ಲ ವೆಂದು ನನಗೆ ತೋರುತ್ತದೆ. ನಾಲ್ಕನೆಯ ಒಂದು ಭಾಗವನ್ನು ಸಿಂಹವು ಕೇಳಿದ್ದರೆ ನಿನ್ನ ದೇಹವನ್ನು ಕತ್ತರಿಸಬೇಕಾಗುತ್ತಿತ್ತು. ಆದರೆ ಅದು ಅರ್ಧಭಾಗವನ್ನು ಮಾತ್ರ ಕೇಳಿದೆ. ಸ್ತ್ರೀರೂಪಳಾದ ನಾನೇ ನಿನ್ನ ದೇಹದ ಅರ್ಧಭಾಗ. ಪ್ರಾಣನಾಥ, ಪತಿಯ ಎದುರಿಗೆ ಯಾವ ಹೆಂಗಸು ಮರಣಹೊಂದುವಳೋ ಅವಳಿಗೆ ಸದ್ಗತಿಯಾಗುವುದು. ಈ ವಿಷಯದಲ್ಲಿ ಇನ್ನು ವಿಚಾರಿಸಬೇಕಾದ್ದಿಲ್ಲ" ಎಂದಳು. ರಾಜನು ಏಕಾಗ್ರತೆಯಿಂದ ಪತ್ನಿಯ ಮಾತನ್ನು ಆಲಿಸುತ್ತಿದ್ದನು. ಅಷ್ಟರಲ್ಲಿ ಚತುರನಾದ ಕಪಟ ಬ್ರಾಹ್ಮಣನು ತ್ವರೆಯಿಂದ "ರಾಜ, ಸ್ತ್ರೀಯು ಎಡಭಾಗದ ಅಂಗವೆನಿಸುತ್ತಾಳೆ. ರಾಜನ ಬಲಭಾಗದ ಅಂಗವು ಬೇಕೆಂದು ಸಿಂಹವು ಕೇಳಿದೆ! ಆದ್ದರಿಂದ ನಿನ್ನ ದಕ್ಷಿಣಾಂಗವನ್ನು ಕೊಡಬೇಕು. ಕೊಡುವುದಿಲ್ಲವಾದರೆ ನಿರಾಶನಾಗಿ ಹಿಂದಿರುಗುತ್ತೇನೆ. ಎಲೈ ಸಚ್ಚಾರಿತ್ರನೆ, ಸಿಂಹವೇ ಹೀಗೆ ಹೇಳಿ ನನ್ನನ್ನು ನಿನ್ನ ಬಳಿಗೆ ಕಳಿಸಿದೆ. ನಾನು ಸಿಂಹದ ಬಳಿಗೆ ಹೋಗಿ "ನಿನಗೆ ಹಿತವೆನಿಸಿದಂತೆ ಮಾಡು. ನನ್ನ ಮಗನನ್ನು ಭಕ್ಷಿಸು" ಎಂದು ಹೇಳಿಬಿಡುವೆನು ಎಂದನು. ಆ ಸಭೆಯಲ್ಲಿ ಇದ್ದವರೆಲ್ಲರೂ ಬ್ರಾಹ್ಮಣನ ಮಾತನ್ನು ಕೇಳುತ್ತ, ಅಚ್ಚರಿಯನ್ನು ನೋಡುತ್ತ ನಿಂತಿದ್ದರು. ಅವರೆಲ್ಲರೆದುರಿಗೆ ರಾಜಪುತ್ರನಾದ ತಾಮ್ರಧ್ವಜನು ಉತ್ಸಾಹದಿಂದ ಮುಂದೆ ಬಂದು ಶಿಷ್ಯಸಮೇತನಾದ ಬ್ರಾಹ್ಮಣನನ್ನು ಕುರಿತು ತಂದೆಗೆ ಕೀರ್ತಿಯನ್ನು ತರುವ ಮೃದುನುಡಿಗಳಿಂದ ಹೀಗೆಂದನು: "ದ್ವಿಜೋತ್ತಮ, ತಂದೆಯೇ ಮಗನೆಂದೂ ಅವರಿಬ್ಬರಿಗೆ ಭೇದವಿಲ್ಲವೆಂದೂ ಸನಾತನವಾದ ವೇದವು ಸಾರುತ್ತಿದೆ. ನನ್ನ ತಂದೆಯು ಬ್ರಾಹ್ಮಣಕಾರ್ಯಕ್ಕಾಗಿ ಶರೀರಾರ್ಧವನ್ನು ಸಮರ್ಪಿಸಿದ್ದಾನೆ. ಪುತ್ರನೇ ತಂದೆಯ ಸರಿಯಾದ ಶರೀರಾರ್ಧವೆನಿಸುತ್ತಾನೆ. ನಾನು ಯುವಕನೂ ಮಾಂಸಪುಷ್ಟನೂ ಆಗಿದ್ದೇನೆ. ನನ್ನನ್ನು ನೋಡಿ ಸಿಂಹವು ನಿಜವಾಗಿಯೂ ಆನಂದಿಸುತ್ತದೆ. ನನ್ನನ್ನು ಸಿಂಹಕ್ಕೆ ಒಪ್ಪಿಸಿದರೆ ಪುತ್ರನೆನಿಸಿದ ನನಗೂ ಮಹತ್ತರವಾದ ಕೀರ್ತಿಯುಂಟು. ಭೀಷ್ಮ, ಶ್ರೀರಾಮ, ಪರಶುರಾಮಾದಿಗಳು ತಂದೆಯ ಮಾತನ್ನು ನಡೆಸಿ ಯಶಸ್ಸನ್ನು ಗಳಿಸಿದ್ದಾರೆ" ಎಂದನು. ಅದಕ್ಕೆ ಆ ಬ್ರಾಹ್ಮಣನು "ರಾಜಪುತ್ರ, ನೀನು ಹೇಳುವುದು ದಿಟವೇ. ಆದರೆ ಸಿಂಹವು ಹೇಳಿದ ನುಡಿಯನ್ನು ಕೇಳು. ಅದು ಮಯೂರಧ್ವಜನ ಶಿರಸ್ಸನ್ನು ಅವನ ಪುತ್ರನೂ ಪತ್ನಿಯೂ ಸೇರಿ ಸೀಳಬೇಕೆಂದೂ ಸೀಳಿದ

ಮೇಲೆ ಅವನ ದೇಹದ ದಕ್ಷಿಣಾರ್ಧವನ್ನು ತರಬೇಕೆಂದೂ ತಿಳಿಸಿದೆ! ಹೀಗಿರುವಾಗ ಸ್ಪಷ್ಟವಾದ ಅದರ ಮಾತನ್ನು ಮಾರ್ಪಡಿಸುವುದು ನನಗೆ ಹೇಗೆ ಸಾಧ್ಯ?" ಎಂದನು.

ಅನಂತರ ಮಯೂರಧ್ವಜನು ತನ್ನ ಪತ್ನಿಯನ್ನೂ ಪುತ್ರನನ್ನೂ ತಡೆದು, ಅವರ ಕೈಗೆ ಗರಗಸವನ್ನು ತಾನೇ ಸಂತೋಷದಿಂದ ಕೊಟ್ಟನು. ಆ ಧೀರನು ಅವರೆದುರಿಗೆ 'ಕೇಶವ, ರಾಮ, ನೃಸಿಂಹ' ಎಂಬುದಾಗಿ ಭಗವಂತನ ನಾಮಾವಳಿಯನ್ನು ಜಪಿಸುತ್ತ ಕುಳಿತನು. ಇಂದ್ರಾದಿದೇವತೆಗಳು ಆ ಮಹಾತ್ಮನನ್ನು ವೀಕ್ಷಿಸುತ್ತಿದ್ದರು. ಆ ಮಹಾಪುರುಷನ ಶಿರಸ್ಸಿನ ಮೇಲೆ ಗರಗಸವು ಇಡಲ್ಪಟ್ಟಿತು. ಸಕಲರೂ ದುಃಖದೈನ್ಯಗಳಿಂದ ಕಂಗೆಟ್ಟರು. ಪತಿಯ ಆಜ್ಞೆಯಂತೆ ಕುಮುದ್ವತಿಯೂ ತಾಮ್ರಧ್ವಜನೂ ಗರಗಸವನ್ನು ಹಿಡಿದಿದ್ದರು. ಕುಮುದ್ವತಿಯು 'ರಾಮ ರಾಮ' ಎಂದು ಜಪಿಸುತ್ತ ಆ ಬ್ರಾಹ್ಮಣನನ್ನು ನೋಡಿ "ಬ್ರಾಹ್ಮಣ, ಹಿಂದೆ ನೃಸಿಂಹನು ಸ್ತಂಭವನ್ನು ಸೀಳಿದಂತೆಯೂ ಹಿರಣ್ಯಕಶಿಪುವನ್ನು ಸೀಳಿದಂತೆಯೂ ಮಹಾಪ್ರಾಜ್ಞನಾದ ನನ್ನ ಪತಿಯನ್ನು ಸೀಳುತ್ತೇನೆ!" ಎಂದಳು. ಮಯೂರಧ್ವಜನು ಪತ್ನಿಯನ್ನು ಕುರಿತು "ಪ್ರಿಯೆ, ನೀನು ಕೈಯಲ್ಲಿ ಹಿಡಿದಿರುವ ಗರಗಸವು ಕೇದಗೆಯ ಕೋಮಲ ಪತ್ರದಂತೆ ನನ್ನ ದೇಹಕ್ಕೆ ಸುಖಕರವೇ ಆಗಿರುವುದು! ನಿನ್ನ ನಖಕ್ಷತಗಳಿಂದ ನನಗೆ ಹೇಗೆ ಪೀಡೆಯಾಗುವುದಿಲ್ಲವೋ ಹಾಗೆ ಗರಗಸದ ಹಲ್ಲುಗಳಿಂದಲೂ ನನಗೆ ಪೀಡೆಯಾಗದು. ನಿಶ್ಶಂಕೆಯಿಂದ ನನ್ನ ತಲೆಯನ್ನು ಕೊಯ್ದುಬಿಡು. ಗರಗಸದ ಹಲ್ಲುಗಳು ತಾವರೆಯ ದಳದಂತೆ ಮೃದುವಾದವೆಂದೇ ತಿಳಿಯುತ್ತೇನೆ" ಎಂದನು. ಆಮೇಲೆ ಕುಮುದ್ವತಿಯೂ ಆಕೆಯ ಮಗನಾದ ತಾಮ್ರಧ್ವಜನೂ ಗರಗಸದ ಒಂದೊಂದು ತುದಿಯನ್ನು ಹಿಡಿದು ಶ್ರೀಕೃಷ್ಣಾರ್ಜುನರ ಸಂಮುಖದಲ್ಲಿ ಆ ಭೂಪಾಲನ ಶಿರಸ್ಸನ್ನು ಕೊಯ್ಯಲಾರಂಭಿಸಿದರು. ಜನಮೇಜಯ, ಎಲ್ಲೆಲ್ಲಿಯೂ ಹಾಹಾಕಾರವೆದ್ದಿತು. ಮಯೂರಧ್ವಜನ ಎಡಗಣ್ಣಿಂದ ನೀರು ತೊಟ್ಟಿಕ್ಕಿತು. ಆಗ ದುರ್ಧರ್ಷನಾದ ಆ ಬ್ರಾಹ್ಮಣನು ಕಣ್ಣುಗುಡ್ಡೆಯು ಅಲ್ಲಾಡುತ್ತಿದ್ದ ಮಯೂರಧ್ವಜನನ್ನು ನೋಡಿ "ರಾಜ, ನಿನ್ನ ಗಾತ್ರವನ್ನು ಅಳುತ್ತ ದಾನ ಮಾಡುತ್ತಿದ್ದೀಯೆ. ಮನಸ್ಸಿಲ್ಲದೆ ಕೊಡುವ ದಾನವನ್ನು ನಾನು ತೆಗೆದುಕೊಳ್ಳುವುದಿಲ್ಲ! ಪ್ರಾಜ್ಞರಾದವರು ಯಾರೂ ತೆಗೆದುಕೊಳ್ಳುವುದಿಲ್ಲ. ನನಗೆ ಮಗನಿಲ್ಲದೆ ಸ್ವರ್ಗವು ದೊರೆಯುವುದಿಲ್ಲವಾದರೆ, ದೊರೆಯುವುದೇ ಬೇಡ. ಸಿಂಹವು ನನ್ನ ಪುತ್ರನನ್ನು ಗ್ರಹಿಸಿ ಯಥೇಚ್ಛವಾಗಿ ಹೋಗಲಿ! ಈ ರಾಜನು ಎಡಗಣ್ಣಿಂದ ಅಳುತ್ತ ದೇಹಾರ್ಧವನ್ನು ಕೊಡುತ್ತಿದ್ದಾನೆ. ನಾನು ಶ್ರೇಷ್ಠನಾದ ವಿಪ್ರನಾಗಿ ಇಂಥ ದಾನವನ್ನು ಹೇಗೆ ಸ್ವೀಕರಿಸಲಿ?" ಎಂದು ಧಿಕ್ಕರಿಸಿ ಶಿಷ್ಯನೊಡನೆ ಅಲ್ಲಿಂದ ಹೊರಟುಬಿಟ್ಟನು.

ಬ್ರಾಹ್ಮಣನು ಹೊರಟುಹೋಗುತ್ತಿರುವುದನ್ನು ಕಂಡು ಸಾಧ್ವೀಶಿರೋಮಣಿಯಾದ ಕುಮುದ್ವತಿಯು ಸೀಳಿಹೋದ ಪತಿಯ ಶಿರಸ್ಸನ್ನು ಎರಡು ಕೈಗಳಿಂದಲೂ ಹಿಡಿದುಕೊಂಡಳು. ಅವಳು ಪತಿಯನ್ನು ಕುರಿತು "ಹೇ ಸತ್ಯವ್ರತ, ಉದಾರ ಬುದ್ಧಿಯೆ, ದಾತೃಗಳಲ್ಲಿ ಅಗ್ರಗಣ್ಯ, ಬ್ರಾಹ್ಮಣನು ಹೊರಟು ಹೋಗುತ್ತಿರುವನು, ನೋಡು. ನಾಥ, ಅವನನ್ನು ತಡೆದು ನಿಲ್ಲಿಸು. ದೇಹಾರ್ಧವನ್ನು ಸ್ವೀಕರಿಸದೆ ಹೋದರೆ, ನಿನ್ನ ಕೀರ್ತಿಗೆ ಕಳಂಕ ಬರುವುದು" ಎಂದು

ಹೇಳಿದಳು. ಮಯೂರಧ್ವಜನು "ಭದ್ರೆ, ಸೀಳಿರುವ ನನ್ನ ತಲೆಯನ್ನು ಹಾಗೆಯೇ ಹಿಡಿದುಕೊಂಡಿರು. ಬ್ರಾಹ್ಮಣನೊಡನೆ ಮಾತಾಡುತ್ತೇನೆ. ಓ ಮುನಿಶ್ರೇಷ್ಠ, ಹೋಗಬೇಡ. ನನ್ನ ಮಾತನ್ನು ಆಲಿಸು. ಎಡಗಣ್ಣಿಂದ ನೀರು ಏಕೆ ಸುರಿಯಿತೆಂದರೆ 'ದೇಹದ ಈ ಬಲಭಾಗವು ಬ್ರಾಹ್ಮಣಕಾರ್ಯಕ್ಕಾಗಿ ಮೀಸಲಾಯಿತು. ಸಾರ್ಥಕವಾಯಿತು. ಎಡಭಾಗವು ನೆಲದಲ್ಲಿ ಬಿದ್ದು ವ್ಯರ್ಥವಾಗುವುದಲ್ಲ" ಎಂದು ಈ ದೇಹವು ರೋದಿಸಿತು. ಹೇ ದ್ವಿಜೋತ್ತಮ, ದಾನವನ್ನು ಸ್ವೀಕರಿಸು. ನೀನು ವಿಮುಖನಾಗಿ ಹೊರಟುಹೋದರೆ, ಹರಿತವಾದ ಈ ಗರಗಸದಿಂದಾಗುವ ಬಾಧೆಗಿಂತಲೂ ಅಧಿಕವಾದ ಬಾಧೆಯು ನನಗಾಗುವುದು" ಎಂದು ಉಸುರಿದನು.

ಆಗ ಸರ್ವೇಶ್ವರನಾದ ಶ್ರೀಕೃಷ್ಣನು ಪ್ರಸನ್ನನಾಗಿ ತನ್ನ ನಿಜಸ್ವರೂಪವನ್ನು ತೋರಿಸಿ ಮಯೂರಧ್ವಜನನ್ನು ಅಪ್ಪಿಕೊಂಡನು. "ಹೇ ನೃಪೋತ್ತಮ, ಮಯೂರಧ್ವಜ, ಸುವ್ರತ, ನೀನೇ ಧನ್ಯ. ಅರ್ಜುನನೊಡನೆ ಬಂದು ನಾನು ನಿನ್ನನ್ನು ಬಹುವಿಧದಲ್ಲಿ ಪರೀಕ್ಷಿಸಿದೆನು. ಓ ಮಹಾಬಾಹು, ಪತ್ನೀ ಪುತ್ರಸಮೇತನಾಗಿ ಯಜ್ಞವನ್ನು ನಡೆಸು. ನಿನ್ನ ಪುತ್ರನಾದ ತಾಮ್ರಧ್ವಜನು ರಣರಂಗದಲ್ಲಿ ನಮ್ಮಿಬ್ಬರನ್ನೂ ಸಂತೋಷಪಡಿಸಿರುವನು. ಶತ್ರುಸೂದನರೆನಿಸಿದ ನಮ್ಮಿಬ್ಬರನ್ನೂ ನಮ್ಮ ಸೇನೆಯನ್ನೂ ನಿನ್ನ ಪುತ್ರನೊಬ್ಬನೇ ಮೂರ್ಛೆಗೊಳಿಸಿದನು. ನನ್ನನ್ನು ಸಂದರ್ಶಿಸಿದ ಮೇಲೆ ಜೀವಿಗಳಿಗೆ ಕಷ್ಟವು ಬಂದೀತೆ? ಮಹಾತ್ಮನಾದ ನೀನು ದೇಹಾರ್ಧವನ್ನೇ ನನಗೆ ಸಮರ್ಪಿಸಿದ್ದೀಯೆ. ನಿನ್ನ ಯಜ್ಞಕಾರ್ಯದಲ್ಲಿ ಕರ್ಮಕರನಾಗಿ ಹೇಳಿದ ಕೆಲಸವನ್ನು ಮಾಡುವೆನು! ಏಕೆಂದರೆ, ನಾನು ಭಕ್ತರಿಗೆ ಅಧೀನ. ಅಲ್ಲದೆ ನಿನ್ನ ಮಗನು ನನ್ನನ್ನು ಜಯಿಸಿದ್ದಾನೆ! ಯುಧಿಷ್ಠಿರನ ಯಜ್ಞಾಶ್ವವನ್ನೂ ನೀನೇ ಉಪಯೋಗಿಸಿ ಎರಡು ಅಶ್ವಗಳಿಂದಲೂ ವಿಧಿವತ್ತಾಗಿ ಯಾಗವನ್ನು ನಡೆಸಿ ಕೀರ್ತಿವಂತನಾಗು. ನಾನು ಕೃಪಾದೃಷ್ಟಿಯಿಂದ ನೋಡಿದಾಗ, ಸೀಳಾದ ನಿನ್ನ ತಲೆಯ ಗಾಯವು ಉಳಿದೀತೆ?" ಎಂದ ವಾಸುದೇವನು ನುಡಿದನು. ಭಿನ್ನವಾದ ಶಿರಸ್ಸು ಕೂಡಿಕೊಂಡು ಮಯೂರಧ್ವಜನು ಎಂದಿನಂತೆಯೇ ಸ್ವಸ್ಥನಾದನು. ಆತನು ಈ ರೀತಿಯಲ್ಲಿ ಮಾತಾಡುತ್ತ ಶ್ರೀಕೃಷ್ಣನನ್ನು ಸ್ತುತಿಸಿದನು: "ಹೇ ವಿಷ್ಣೋ, ಬಾಹ್ಯದಲ್ಲಿದ್ದ ನಿನ್ನ ಪರಮಧಾಮವೇ-ಪರಮಪದವೇ ನನ್ನ ದೇಹವನ್ನು ಸೀಳಿ ಒಳಗೆ ಪ್ರವೇಶಿಸಿತು! ಶ್ರೀಪತಿ, ವಾಸುದೇವ, ಹೇ ಸ್ವಾಮಿ, ನನ್ನನ್ನು ಕೃತಾರ್ಥನನ್ನಾಗಿ ಮಾಡಿದೆ. ಕೇಶವ, ಗೋವಿಂದ, ಈ ಯಜ್ಞದಿಂದ ನನಗೆ ಏನಾಗಬೇಕಾಗಿದೆ? ಜಗನ್ನಾಥನಾದ ನಿನ್ನನ್ನು ನೋಡಿದರೆ ಹಾಡಿದರೆ ವಂದಿಸಿದರೆ ನಿನ್ನ ಲೀಲೆಯನ್ನು ಕೇಳಿದರೆ, ಇಂಥ ಕೋಟಿಯಜ್ಞಗಳ ಫಲವು ದೊರಕುತ್ತದೆ. ಜನಾರ್ದನ, ಹೇಳಿದ ಕೆಲಸವನ್ನು ಮಾಡುವ ಕರ್ಮಕರನಾಗುವೆನು ಎಂದೆಯಷ್ಟೆ. ಹಾಗೆಯೇ ಮಾಡು! ಏನೆಂದರೆ, ಈ ಅಶ್ವಗಳು, ನಾನು, ನನ್ನ ಮಕ್ಕಳು, ನನ್ನ ಪತ್ನಿ, ಈ ಮಹಾಜನರು, ಋತ್ವಿಜರು, ಈ ಯಜ್ಞೋಪಕರಣಗಳು-ಇವರೆಲ್ಲರನ್ನೂ ನೀನು ಕೈಯಿಂದ ಮುಟ್ಟಿ ನಿನ್ನ ಹೃದಯದಲ್ಲಿ ಸೇರಿಸಿಕೊ. ಹೇ ಸ್ವಾಮಿ, ಈ ಸ್ಥಳದಲ್ಲಿ ನಿನ್ನ ಸಾಕ್ಷಾತ್ಕಾರವೇ ಆದಮೇಲೂ ನಾನು ಯಜ್ಞದಲ್ಲಿ ತೊಡಗಿದರೆ, ವೇದ ವೇದಾಂಗ ಪಾರಂಗತರು ನಗುತ್ತಾರೆ. ಚಳಿಯಿಂದ

ನಡುಗತಕ್ಕವನು ಬಳಿಯಲ್ಲಿ ದೊಡ್ಡದಾಗಿ ಉರಿಯುವ ಬೆಂಕಿಯನ್ನು ಪರಿತ್ಯಜಿಸಿ, ಬೆಂಕಿಯ ಕಿಡಿಯನ್ನು ಹುಡುಕುತ್ತ ಹೋಗುವನೆ? ಬಾಯಾರಿಕೆಯಾದಾಗ ಗಂಗಾಜಲವನ್ನು ಬಿಟ್ಟು ಮಂಜಿನ ಹನಿಯನ್ನು ಹುಡುಕುವನೆ? ಮಹಾವಿಷ್ಣುವಾದ ನಿನ್ನನ್ನು ಉಪೇಕ್ಷಿಸಿ ಯಾವ ಮೂಢನು ಅಶ್ವಮೇಧವನ್ನು ಆಚರಿಸುವನೋ ಅವನನ್ನು ಯಮನು ದಂಡಿಸಿಯಾನು. ನನ್ನ ಪುತ್ರನು ಕೃಷ್ಣಾರ್ಜುನರನ್ನು ರಣರಂಗದಲ್ಲಿ ತ್ಯಜಿಸಿ ಬಂದುಬಿಟ್ಟನು. ನನ್ನ ಭಾಗ್ಯೋದಯದಿಂದ ಈ ನರನಾರಾಯಣರನ್ನು ನಾನು ನೋಡುವಂತಾಯಿತು. 'ನಮಸ್ತೇ ಪುಂಡರೀಕಾಕ್ಷ ಬ್ರಹ್ಮಣೇ ಗುರುವೇ ನಮಃ, ಸಾವಿರಾರು ಬ್ರಹ್ಮಲೋಕ ಗೋಲೋಕಗಳಿಗಿಂತ ಉತ್ತಮ ಫಲಸ್ವರೂಪನಾದ ನಿನಗೆ ನಮಸ್ಕಾರ. ಸೃಷ್ಟಿಸ್ಥಿತಿ ಸಂಹಾರಕನೂ ಭಕ್ತರ ಇಷ್ಟವನ್ನು ನಡೆಸುವವನೂ ಆದ ನಿನಗೆ ನಮಸ್ಕಾರ. ಅನಂತನೂ ಪೂರ್ಣನೂ ಆದ ನಿನಗೆ ನಮಸ್ಕಾರ. ನಿಶ್ವಾಸಮಾತ್ರದಿಂದ ವೇದಗಳನ್ನು ಸೃಜಿಸಿದ ಶ್ರೀಧರನಿಗೆ ನಮಸ್ಕಾರ. ಆದಿಶೇಷನೆಂಬ ಮಂಚದಲ್ಲಿ ಪವಡಿಸುವ ನಿನಗೆ ನಮಸ್ಕಾರ. ಲವಣಾಸುರನನ್ನು ಸಂಹರಿಸಿದವನೂ ಶಾಂತಸ್ವರೂಪನೂ ಸಮಸ್ತಕಲಾಯುಕ್ತನೂ ಆದ ನಿನಗೆ ನಮಸ್ಕಾರ. ಜ್ಞಾನಸ್ವರೂಪನೂ ಜ್ಞಾನಗಮ್ಯನೂ ಕಾಲಾತೀತನೂ ಆದ ನಿನಗೆ ನಮಸ್ಕಾರ. ನೋಡಲೇಬೇಕಾದವನೂ ತಿಳಿಯಲೇಬೇಕಾದವನೂ ಪರಂಪರೆಯಿಂದ ಭಕ್ತಸೇವ್ಯನೂ ಆದ ನಿನಗೆ ನಮೋನಮಃ."

ಈ ಪ್ರಕಾರವಾಗಿ ಮಯೂರಧ್ವಜನು ಸ್ತುತಿಸಲು ವಿಶ್ವಾತ್ಮನಾದ ಮಧುಸೂದನನು ಪ್ರಸನ್ನನಾಗಿ ಅರ್ಜುನನಿಗೆ ಆ ರಾಜನ ಭಕ್ತ್ಯತಿಶಯವನ್ನು ತೋರಿಸಿದನು. ಆತನ ಭಕ್ತಿಗೆ ಸಂಪ್ರೀತನಾಗಿ ಜಗನ್ನಾಥನು ಮಯೂರಧ್ವಜನ ಅರಮನೆಯಲ್ಲಿ ಮೂರುರಾತ್ರಿಗಳವರೆಗೆ ತಂಗಿದನು. ಮಯೂರಧ್ವಜನು ಅರ್ಜುನನ್ನು ಪ್ರೀತಿಯಿಂದ ಆಲಿಂಗಿಸಿ ಸ್ನೇಹವನ್ನು ಬೆಳೆಸಿದನು. ಅನಂತರ ಎರಡು ಅಶ್ವಗಳೂ ಮುಂದೆ ಹೊರಟವು. ಮಯೂರಧ್ವಜನು ತನ್ನ ಧನವನ್ನೂ ಜೀವಿತವನ್ನೂ ಶ್ರೀಕೃಷ್ಣನಿಗೆ ಅಧೀನ ಮಾಡಿ ಮಿತ್ರರಿಂದ ಪರಿವೃತನಾಗಿ ಯಜ್ಞಾಶ್ವವನ್ನು ರಕ್ಷಿಸುತ್ತ ಹೊರಟನು.

# ವೀರವರ್ಮನೊಡನೆ ಯುದ್ಧಪ್ರಸಂಗ

ಜನಮೇಜಯ, ಆಮೇಲೆ ಅಶ್ವಗಳು ವೀರವರ್ಮನೆಂಬ ರಾಜನ ನಗರಿಯಾದ ಸಾರಸ್ವತಪುರದ ಕಡೆಗೆ ಹೋದವು. ಶ್ರೀಕೃಷ್ಣನು ಸೇನಾಸಮೇತನಾಗಿ ಅವುಗಳನ್ನು ಹಿಂಬಾಲಿಸಿದನು. ವೀರವರ್ಮನ ರಾಜ್ಯದಲ್ಲಿ ಧರ್ಮವು ನಾಲ್ಕು ಪಾದಗಳಿಂದಲೂ ನೆಲೆಸಿತ್ತು. ಆ ರಾಜನ ಅಳಿಯನಾದ ಯಮಧರ್ಮನು ಮೂರ್ತಿವಂತನಾಗಿ ಅಲ್ಲಿ ವಾಸವಾಗಿದ್ದನು. ಸಾರಸ್ವತಪುರದಲ್ಲಿದ್ದ ಪ್ರಜೆಗಳು ಧರ್ಮಾರ್ಥ ಕಾಮಮೋಕ್ಷಗಳೆಂಬ ನಾಲ್ಕು ಪುರುಷಾರ್ಥಗಳನ್ನು ಸಾಧಿಸುವುದರಲ್ಲಿ ನಿಪುಣರಾಗಿದ್ದರು. ಕನಸಿನಲ್ಲಿಯೂ ಅವರು ತಪ್ಪು ದಾರಿಯನ್ನು ತುಳಿಯುತ್ತಿರಲಿಲ್ಲ. ಶ್ರೀಕೃಷ್ಣನು ಅರ್ಜುನ ಸಮೇತನಾಗಿ ಕುದುರೆಗಳನ್ನು ರಕ್ಷಿಸುತ್ತ ಬರುತ್ತಿರುವನೆಂಬುದು ವೀರವರ್ಮನಿಗೆ ತಿಳಿಯಿತು. ಅವನು ವೀರರಾದ ಯೋಧರನ್ನು ಕರೆಸಿ "ಮಹಾತ್ಮನಾದ ಧರ್ಮರಾಜನ ಅಶ್ವಗಳು ನಮ್ಮ ರಾಷ್ಟ್ರದಲ್ಲಿ ತಿರುಗುತ್ತಿವೆಯೆಂದು ತಿಳಿದುಬಂದಿದೆ. ನಿಮ್ಮ ಪೌರುಷದಿಂದ ಅವುಗಳನ್ನು ಬಂಧಿಸಿ ತನ್ನಿರಿ" ಎಂದು ಆಜ್ಞಾಪಿಸಿದನು. ರಾಜಾಜ್ಞೆಯಂತೆ ವಿವಿಧ ಸೇನಾವಿಭಾಗವು ಸಜ್ಜಾಗಿ ಹೊರಟಿತು. ವೀರವರ್ಮನಿಗೆ ಸುಭಾಲ, ಸುರಭ, ಲೀಲ, ಕುವಲ ಮತ್ತು ಸರಲ ಎಂಬ ಐವರು ಮಕ್ಕಳಿದ್ದರು. ಅವರೆಲ್ಲರೂ ಮಹಾವೀರರು; ಧೀರರು. ಐವರೂ ಧನುರ್ಧಾರಿಗಳಾಗಿ ದಿವ್ಯರಥಗಳನ್ನೇರಿ ಹೊರಟರು.ಅವರು ಪಾಂಡವಸೇನೆಯನ್ನು ಹುಲ್ಲುಕಡ್ಡಿಯಂತೆ ಲಕ್ಷಿಸದೆ ಮುನ್ನುಗ್ಗಿ ಅಶ್ವಗಳನ್ನು ಹಿಡಿದು ವೀರವರ್ಮನ ಬಳಿಗೆ ಒಯ್ದರು.

ಅಷ್ಟರಲ್ಲಿ ಬಭ್ರುವಾಹನನು ರೋಷಾವಿಷ್ಟನಾಗಿ ಶತ್ರುಸೈನ್ಯವು ಕಿವುಡಾಗುವಂತೆ ಶಂಖವನ್ನೂದುತ್ತ ಮುಂದೆ ಬಂದು ಭೀಕರವಾದ ಕಾಳಗವನ್ನಾರಂಭಿಸಿ ವೈರಿಸೇನೆಯನ್ನು ವಿಧ್ವಂಸಗೊಳಿಸಲಾರಂಭಿಸಿದನು. ಮಹಾತೇಜಸ್ವಿಯಾದ ಆ ವೀರನು ಸುವರ್ಣ ಪುಂಖಾಂಕಿತಶರಗಳನ್ನು ತೂರಿದನು. ದಾರುಣವಾದ ತುಮುಲಯುದ್ಧವು ತೊಡಗಿತು. ಯುದ್ಧೋನ್ಮತ್ತರಾದ ಕಾಲಾಳುಗಳು ಮುಂದೆ ನುಗ್ಗಿ ಹೋರಾಡಿದರು. ಕೇಶಾಕೇಶಿ ಮುಷ್ಟಾಮುಷ್ಟಿ ನಖಾನಖಿಯಾದ ಕಾಳಗವು ನಡೆಯಿತು. ಆಮೇಲೆ ಎಲ್ಲವೂ ವಿಪರೀತವಾಗಿ ಪರಿಣಮಿಸಿತು. ರಥಗಳು ಆನೆಗಳಿಗೆ ಎದುರಾದವು. ಕುದುರೆಗಳು ಆನೆಗಳಿಗೆ ಎದುರಾದವು! ರುದ್ರಲೀಲಾಭೂಮಿಯೋ ಎಂಬಂತೆ ಸಂಗ್ರಾಮಭೂಮಿಯು ಕಾಣಿಸಿತು. ವೀರನಾದ ಬಭ್ರುವಾಹನನಿಂದ ಕೊಲ್ಲಲ್ಪಡುತ್ತಿದ್ದ ವಿಶಾಲವಾದ ಸೇನೆಯು ಕ್ರಮೇಣ ಚಿಕ್ಕದಾಗುತ್ತ ನಡೆಯಿತು. ಬೆಂಕಿಯಲ್ಲಿ ಎಸೆದ ಚರ್ಮದಂತೆ ಸುಕ್ಕಿ ಮುದುರಿತು. ಅಷ್ಟರಲ್ಲಿ ಸಂಯಮಿನೀಪುರಾಧೀಶನಾದ ಯಮಧರ್ಮನು ಕೋಪದಿಂದ ಬಂದು ಬಭ್ರುವಾಹನನನ್ನೆ ದುರಿಸಿ ಪಾರ್ಥನ ಸೇನೆಯನ್ನು ಕೊಲ್ಲಲಾರಂಭಿಸಿದನು. ತನ್ನ ಮಾವನ ಸಹಾಯಕ್ಕಾಗಿ ಬಂದ ಆ ಯಮಧರ್ಮನು ಪ್ರಬಲವಾದ ಅರ್ಜುನಸೇನೆಯನ್ನು ಘಾತಿಸಿದನು.

ಅರ್ಜುನನು ಆ ರೀತಿಯಲ್ಲಿ ಸಂಹರಿಸುತ್ತಿದ್ದ ಯಮನನ್ನು ಕಂಡು ಶ್ರೀಕೃಷ್ಣನೊಡನೆ "ಶ್ರೀಕೃಷ್ಣ, ಆತನು ಮನುಷ್ಯರೂಪದಿಂದ ಬಂದ

ದೇವತಾಪುರುಷನಂತೆ ಕಾಣುತ್ತಾನೆ! ನಿನ್ನೆದುರಿಗೆ ನನ್ನ ಸೇನೆಯನ್ನು ತೀಕ್ಷ್ಣಾಸ್ತ್ರಗಳಿಂದ ಧ್ವಂಸ ಮಾಡುತ್ತಿರುವನಲ್ಲ, ಅವನು ಯಾರು?" ಎಂದು ಕೇಳಿದನು. ವಾಸುದೇವನು "ಪಾರ್ಥ, ಎದುರಿಗೆ ಯುದ್ಧ ಮಾಡುತ್ತಿರುವ ಆತನು ಯಮನೆಂದು ತಿಳಿ! ವೀರವರ್ಮನು ತನ್ನ ಮಗಳಿಗಾಗಿ ಅವನನ್ನು ಪ್ರಾರ್ಥಿಸಿಕೊಂಡಿದ್ದನು" ಎಂದು ಹೇಳಿದನು. ಅರ್ಜುನನು ಚಕಿತನಾಗಿ 'ಶ್ರೀಕೃಷ್ಣ, ಏನು ನೀನು ಹೇಳಿದ್ದು? ಯಮನು ಈ ರಾಜನ ಮಗಳ ಪತಿಯೆ! ವಿಚಿತ್ರವಾಗಿದೆ! ಇದು ಹೇಗೆ ಸಾಧ್ಯ? ವಿವರಿಸಿ ಹೇಳು" ಎಂದನು. ವಾಸುದೇವನು ಇಂತೆಂದನು: "ಅರ್ಜುನ, ವೀರವರ್ಮನಿಗೆ ಮಾಲಿನಿಯೆಂಬ ಮಗಳಿದ್ದಾಳೆ. ಅಭಿಮಾನಶೀಲಳಾದ ಆ ಕನ್ಯೆಯು ತನಗೆ ಮನುಷ್ಯನು ಪತಿಯಾಗಬಾರದೆಂದು ನಿಶ್ಚಯಿಸಿಕೊಂಡಿದ್ದಳು. ಒಂದು ಸಲ ಅವಳ ತಂದೆಯು "ನಿನಗೆ ಮನುಷ್ಯನು ಬೇಡವಾದರೆ, ಇನ್ನು ಯಾರನ್ನು ವರಿಸುವೆ?" ಎಂದು ಕೇಳಿದನು. ಮಾಲಿನಿಯು 'ತಂದೆಯೇ, ನನ್ನನ್ನು ಯಮಧರ್ಮನಿಗೆ ಕೊಟ್ಟು ಮದುವೆ ಮಾಡು. ಇನ್ನು ಯಾವ ವರನೂ ಬೇಡ. ಧರ್ಮದೇವತೆಯಾದ ಆತನ ಶರೀರವನ್ನು ಸ್ಪರ್ಶಿಸಿ ಕೀರ್ತಿಶಾಲಿಯಾಗುವೆನು. ಪತಿಗೆ ಸಂತೋಷಕರವಾದ ನನ್ನ ಗುಣಗಳಿಂದ ಶ್ರೀಕೃಷ್ಣನನ್ನು ವರಿಸಿದ ಜನರಿಗೆ ಸಮಾನಳಾಗುವೆನು. ನಾನು ಮನುಷ್ಯನ ಪಾಣಿಗ್ರಹಣವನ್ನು ಮಾಡಿದರೆ, ಒಂದು ದಿನ ನನ್ನ ದೇಹವು ಅಗ್ನಿಯಲ್ಲಿ ಬೀಳಬೇಕಾಗುವುದು! ಆದ್ದರಿಂದ, ತಂದೆ, ಬೇರೊಬ್ಬನು ನನ್ನನ್ನು ವರಿಸಬಾರದು. ಯಮಧರ್ಮನೇ ವರಿಸಬೇಕು. ಅವನೇ ನನ್ನ ಪತಿ. ಲೋಕದಲ್ಲಿ ತಂದೆಯು ತನ್ನನ್ನು ಯಾರಿಗೆ ಕೊಡುವನೋ ಆ ಪತಿಯನ್ನು ವಂಚಿಸಿ ಯಾವ ಸ್ತ್ರೀಯು ಬೇರೊಬ್ಬನನ್ನು ಕಾಮಿಸುವಳೋ ಅವಳನ್ನು ಈ ವೈವಸ್ವತನು ನರಕಕ್ಕೆ ದಬ್ಬುವನು. ಅಂಥ ವೈವಸ್ವತನನ್ನೇ ನಾನು ವರಿಸಿ ಅವನ ಆಜ್ಞೆಯಂತೆ ನಡೆದುಕೊಳ್ಳುವೆನು. ನನಗೆ ಕೇಡಾಗದಂತೆ ಯಮಧರ್ಮನು ನನ್ನನ್ನು ಪಾಲಿಸುವನು. ಇದರಿಂದ ತಂದೆಯೆ, ನಿನ್ನ ಪುಣ್ಯವೂ ಸರ್ವದಾ ಸುರಕ್ಷಿತವಾಗಿರುವುದು. ಒಬ್ಬ ಸಾಮಾನ್ಯನಿಗೆ ಕನ್ಯೆಯನ್ನು ದಾನ ಮಾಡಿದರೆ ಎಷ್ಟೋ ಪುಣ್ಯ ಉಂಟು. ಹೀಗಿರುವಾಗ ಸಾಕ್ಷಾತ್ ಯಮಧರ್ಮರಾಜನಿಗೆ ನನ್ನನ್ನು ಕೊಟ್ಟರೆ ಎಷ್ಟು ಪುಣ್ಯವು ಲಭಿಸಬೇಡ? ಈ ರೀತಿಯಲ್ಲಿ ಮಾಡಬೇಕೆಂದು ನನ್ನ ಕರ್ತವ್ಯವನ್ನು ಅಂತರಂಗದಲ್ಲಿ ನಿಶ್ಚಯಿಸಿಕೊಂಡಿದ್ದೇನೆ. ನನ್ನ ಆಲೋಚನೆಯಂತೆ ಧರ್ಮಕಾರ್ಯಗಳನ್ನು ಸರಿಯಾಗಿ ಆಚರಿಸಿದಲ್ಲಿ, ರಮಣೀಯವಾದ ನನ್ನ ಇಷ್ಟಾರ್ಥವು ಸಿದ್ಧಿಸುವುದು" ಎಂದು ಹೇಳಿದಳು.

# ಕರ್ಮವಿಪಾಕವರ್ಣನೆ

ವೀರವರ್ಮನು ಮಗಳ ಈ ಮಾತನ್ನು ಕೇಳಿ ಅಹೋರಾತ್ರವೂ ಯಮಸೂಕ್ತಗಳಿಂದ ಯಮನನ್ನು ಸ್ತುತಿಸತೊಡಗಿದನು. ಯುವತಿಯಾದ ಮಾಲಿನಿಯು ಸದಾ ಯಮನನ್ನು ಧ್ಯಾನಿಸುತ್ತ ಅವನ ಆರಾಧನೆಯಲ್ಲಿ ಮಗ್ನಳಾದಳು. ಹೀಗಿರುವಾಗ ನಾರದಮುನಿಯು ಇದೆಲ್ಲವನ್ನೂ ತಿಳಿದು ನನ್ನ ಮನಸ್ಸಿನಲ್ಲಿ "ಈ ರಾಜಕುಮಾರಿಯು ಇಷ್ಟೊಂದು ಭಕ್ತಿಯನ್ನಿಟ್ಟು ಯಮನನ್ನು ಧ್ಯಾನಿಸುತ್ತಿದ್ದಾಳೆ. ಯಮನಿಗೇ ಇದು ತಿಳಿಯದಾಯಿತೆ! ಪ್ರತಿದಿನವೂ ಯಮಪ್ರೀತಿಗಾಗಿ ಧರ್ಮಕಾರ್ಯವನ್ನು ಶ್ರದ್ಧೆಯಿಂದ ನಡೆಸುತ್ತಿದ್ದಾಳೆ. ರಮಣೀಯವಾದ ಇವಳ ಅಂತರಂಗಭಕ್ತಿಯನ್ನು ಯಮನಿಗೆ ನಾನಾದರೂ ಹೋಗಿ ತಿಳಿಸುವೆನು. ಧರ್ಮಪಾಲಕನಾದ ಯಮನಿಗೆ ಸಕಲ ಪ್ರಾಣಿಗಳ ಚೇಷ್ಟೆಯೂ ಹೃದ್ಗತವಾದ ಅಭಿಪ್ರಾಯವೂ ತಿಳಿದೇ ಇರುತ್ತದೆ. ಆದರೆ ಈ ಮೂಢನು ಮಾಲಿನಿಯ ಭಾವವನ್ನು ಅರಿಯದೆ ಹೋದನಲ್ಲ! ಅವಳ ಪುಣ್ಯಕಾರ್ಯಕ್ಕೆ ಫಲವನ್ನು ಕೊಡದೆ ಇರುವನಲ್ಲ!" ಎಂದು ಆಲೋಚಿಸಿ ಯಮನ ಅರಮನೆಗೆ ಹೋದನು. ಆ ದೇವರ್ಷಿಯು ಯಮನನ್ನು ಕಂಡು "ಧರ್ಮರಾಜ, ಮಾಲಿನಿಯು ನಿನ್ನಲ್ಲಿ ಅನುರಕ್ತಳಾಗಿರುವುದು ನಿನಗೆ ತಿಳಿಯದೆ? ಅವಳು ಸತ್ಯವಾದಿನಿಯೂ ಧರ್ಮನಿಷ್ಠಳೂ ಆಗಿ ನಿನಗೋಸ್ಕರ ತನ್ನ ಪುಣ್ಯಸರ್ವಸ್ವವನ್ನೂ ಧಾರೆಯೆರೆಯುತ್ತಿದ್ದಾಳೆ. ಪ್ರತಿದಿನವೂ ನಿನ್ನನ್ನೇ ಸ್ಮರಿಸುತ್ತ ವ್ರತನಿಷ್ಠಳಾಗಿದ್ದಾಳೆ. ನೀನು ಬೇಗನೆ ಅವಳನ್ನು ವರಿಸು. ಸಜ್ಜನರು ಪರರ ಅಭಿಲಾಷೆಯನ್ನು ನೆರವೇರಿಸುತ್ತಾರೆ. ದುರ್ಜನರು ಮಾತ್ರ ಹಾಗೆ ಮಾಡರು. ವೀರವರ್ಮನು ಪಾಲಿಸುತ್ತಿರುವ ಸಾರಸ್ವತಪುರಕ್ಕೆ ಮನುಷ್ಯವೇಷವನ್ನು ಧರಿಸಿ ಹೋಗು. ರಮ್ಯವಾದ ಆ ನಗರದಲ್ಲಿ ಧರ್ಮವು ನಾಲ್ಕು ಪಾದಗಳನ್ನೂರಿ ಪ್ರತಿಷ್ಠಿತವಾಗಿದೆ. ಪ್ರಜೆಗಳು ನಿರಾತಂಕರಾಗಿ ಸುಖದಿಂದ ಇದ್ದಾರೆ. ನೀನು ಅಲ್ಲಿಗೆ ಹೋದರೆ ಆ ನಗರವು ಧನ್ಯವಾಗುವುದೆಂದು ನಾನು ಭಾವಿಸುತ್ತೇನೆ" ಎಂದು ತಿಳಿಸಿದನು. ಆಗ ಯಮನು "ನಾರದರೆ, ಬರುವ ವೈಶಾಖಮಾಸದ ಶುಕ್ಲಪಕ್ಷದಲ್ಲಿ ಆ ಕನ್ಯೆಯನ್ನು ನಾನು ವರಿಸುವೆನು" ಎಂದು ಹೇಳಿ ನಾರದನನ್ನು ಸಾರಸ್ವತಪುರಕ್ಕೆ ಕಳಿಸಿದನು. ನಾರದನು ಆ ನಗರಕ್ಕೆ ಹೋಗಿ ವೀರವರ್ಮನನ್ನು ಕಂಡು ಯಮನು ಹೇಳಿದ ಮಂಗಳವಾರ್ತೆಯನ್ನರುಹಿದನು. ವೀರವರ್ಮನು ತನ್ನ ಮಗಳ ಮದುವೆಯ ಸಿದ್ಧತೆಯಲ್ಲಿ ತೊಡಗಿದನು.

ಇತ್ತಲಾಗಿ ಯಮಧರ್ಮನು ಮಹಾಕಾಯರೂ ಮಹಾಪರಾಕ್ರಮಿಗಳೂ ಆದ ನೂರೆಂಟು ಮಂದಿ ತನ್ನ ಸೇನಾನಾಯಕರನ್ನು ಕರೆಸಿದನು. ಅವರಲ್ಲಿ ಮಹಾವೀರನೂ ಅಗ್ರಗಣ್ಯನೂ ಬ್ರಹ್ಮಹತ್ಯೆಯ ಅಪರಾವತಾರನೂ ಪ್ರಾಣಿಗಳ ಸ್ವರಧಾತುಗಳನ್ನು ವಿಧ್ವಂಸಗೊಳಿಸತಕ್ಕವನೂ ರೋಗರಾಜನೂ ಆದ ಕ್ಷಯನಾಯಕನನ್ನು ನೋಡಿ ಹೀಗೆಂದನು:- "ಎಲೈ ಕ್ಷಯನಾಯಕನೆ, ನನ್ನ ಮದುವೆಗೆ ಬರಬೇಕೆಂದು ನಿನಗೆ ಆಹ್ವಾನವನ್ನೀಯುತ್ತಿದ್ದೇನೆ. ಭೂಲೋಕದಲ್ಲಿರುವ ಸಾರಸ್ವತಪುರಕ್ಕೆ ನಿನ್ನ ಭೃತ್ಯರೊಡನೆ ಆಗಮಿಸು" ಎಂದನು. ಆಗ ಕ್ಷಯನಾಯಕನು ಈ ಪ್ರಕಾರವಾಗಿ ಯಮನಿಗೆ ನಿವೇದಿಸಿದನು:

"ಸ್ವಾಮಿ-ಯಮರಾಜ, ವೀರವರ್ಮನ ರಾಜ್ಯದಲ್ಲಿ ಸಕಲ ಪ್ರಜೆಗಳೂ ವಿಪ್ರರನ್ನು ಗೌರವಿಸುತ್ತಾರೆ. ರಾಜನೂ ವಿಪ್ರರನ್ನು ಭಕ್ತಿಯಿಂದ ಸೇವಿಸುತ್ತಾನೆ. ವೇದಾಧ್ಯಯನ ಮಾಡುವ ಬ್ರಾಹ್ಮಣರ ವೇದಘೋಷವು ಕರ್ಣಕಠೋರವಾಗಿ ನನ್ನ ಕಿವಿಗಳನ್ನು ಇರಿಯುತ್ತಿವೆ! ಹೋಮದಿಂದ ಹುಟ್ಟಿದ ಹೊಗೆಯು ನನ್ನ ಕಣ್ಣುಗಳನ್ನು ನೋಯಿಸುತ್ತದೆ. ಹೀಗಿರುವಾಗ ನಾನು ಪರಿವಾರದೊಡನೆ ಅಲ್ಲಿಗೆ ಬರುವುದು ಹೇಗೆ? ಪ್ರಾಣಿಗಳಿಗೆ ಬಹುಕಾಲದಿಂದ ಮೂತ್ರಕೃಚ್ಛ್ರವನ್ನುಂಟುಮಾಡುವ ಘೃತಾಕ್ಷನೂ ಮತ್ತು ಮೇಹರೋಗವನ್ನುಂಟುಮಾಡುವ ಪ್ರಮೇಹನೂ ನನ್ನ ಮಕ್ಕಳು. ಅವರು ಸೂಕ್ಷ್ಮಸ್ವಭಾವದವರು. ಅವರಿಗೆ ನನ್ನ ಗುಣಗಳೇ ಬಂದಿವೆ. ನಿನ್ನ ದಾಸಿಯಾದ ನನ್ನ ಹೆಂಡತಿ ವಿಷೂಚಿಕೆಯು ಒಂದು ಕ್ಷಣದಲ್ಲಿ ಮನುಷ್ಯರನ್ನು ಕೊಂದು ಬಿಡುವಳು! ಅವಳ ಮಹಿಮೆ ಯಾರಿಗೆ ಇದ್ದೀತು? ನನ್ನ ಸೋದರನಾದ ಪಾಂಡು ಎಂಬವನು ಮಹಾತೇಜಸ್ವಿ. ಅವನಿಗೆ ವೀರವರ್ಮನ ರಾಜ್ಯದಲ್ಲಿ ಇಳಿದುಕೊಳ್ಳಲು ಸ್ಥಳವೆಲ್ಲಿದೆ? ನನ್ನ ತಮ್ಮನ ಮಡದಿಯಾದ ಶೋಫಾ ಎಂಬ ವಿಶಾಲಾಕ್ಷಿಯು ಜನರನ್ನು ಕೊಲ್ಲತಕ್ಕವಳು. ಅವಳಲ್ಲಿ ಪಾಂಡುವಿಗೆ ಜಲೋದರನೆಂಬ ಮಗನು ಹುಟ್ಟಿದ್ದಾನೆ. ಅವನ ಗುಣಗಳೂ ನನ್ನ ಗುಣಗಳಂತೆಯೇ ಇವೆ. ಅವನಿಗೆ ಎಲ್ಲಿ ವಸತಿಯನ್ನು ಕಲ್ಪಿಸಲಿ? ವೀರವರ್ಮನು ಸದಾ ಧರ್ಮನಿಷ್ಠನೂ ತ್ರಿಕರಣಶುದ್ಧನೂ ಆಗಿದ್ದಾನೆ. ಅವನಿರುವ ರಾಜ್ಯದಲ್ಲಿ ನಾನು ಬದುಕಿರಲು ಸಾಧ್ಯವೆ? ಇನ್ನು ವ್ರಣಗಳ ಎದುರಿಗೆ ಶೋಚನೀಯನಾದ ನಾನು ಎಷ್ಟರವನು? ನೀನು ಅವರನ್ನು ಸಂಮಾನಿಸಿ ಪುರಸ್ಕರಿಸಿದ್ದೀಯೆ. ನಾನು ಅವರೆದುರಿಗೆ ಪರಮಾಣುವಿನಂತೆ ಅಲ್ಪನು. ಈ ವ್ರಣಗಳು ತಮ್ಮ ಪೌರುಷದಿಂದ ಭೂಪತಿಗಳನ್ನೂ ಸಂಹರಿಸಬಲ್ಲ ತೇಜಸ್ವಿಗಳು. ಗುರುಪತ್ನೀಗಾಮಿಗಳನ್ನೂ ಬ್ರಹ್ಮಹತ್ಯಾಕಾರಿಗಳನ್ನೂ ಶಿಶುಘಾತುಕರನ್ನೂ ಇವರು ನಿರ್ಮೂಲ ಮಾಡಬಲ್ಲರು. ಈ ವ್ರಣರಾಜನು ಒಬ್ಬನೇ ಆದರೂ ನೂರೆಂಟು ರೂಪಗಳನ್ನು ಧರಿಸಿ ವಿಜೃಂಭಿಸುತ್ತಾನೆ. ಇವನ ಹೆಂಡತಿ ವಿಚರ್ಚಿಕೆ. ಮಗನ ಹೆಸರು ಭಗಂದರ. ಗುರುಪತ್ನೀಗಾಮಿಗಳು ಇದ್ದಲ್ಲಿ ಭಗಂದರನು ನೆಲೆಸುತ್ತಾನೆ. ವೀರವರ್ಮನ ರಾಷ್ಟ್ರದಲ್ಲಿ ಗುರುಗಳ ಮತ್ತು ಪ್ರಭುಗಳ ನೆರಳನ್ನು ಸಹ ಜನರು ಮುಟ್ಟುವುದಿಲ್ಲ. ವೀರವರ್ಮನೂ ಸಹ ಭಯಭಕ್ತಿಗಳುಳ್ಳವನು. ಆದ್ದರಿಂದ ವ್ರಣರಾಜನು ಆ ದೇಶಕ್ಕೆ ಬರಲಿಚ್ಛಿಸುವುದಿಲ್ಲ. ಸಾಂನಿಪಾತಿಕನೆಂಬ ಜ್ವರರಾಜನು ಹದಿಮೂರು ರೂಪಗಳನ್ನು ಧರಿಸಬಲ್ಲನು. ಅವನು ಎಲ್ಲಿ ಉಳಿದುಕೊಳ್ಳಬೇಕು, ಹೇಳು. ನಿನ್ನ ಸೇನಾನಾಯಕನಾದ ಅತಿಸಾರನು ಅತ್ಯಂತ ಬಲಶಾಲಿ. ಅವನ ಹೆಂಡತಿ ಸಂಗ್ರಹಣಿ. ಅವರಿಗೆ ಧ್ಮಾನ, ಅರೋಚಕ ಎಂಬ ಕೋಪಿಷ್ಠರೂ ಪರಮಪಾಪಿಗಳೂ ಆದ ಮಕ್ಕಳಿದ್ದಾರೆ. ಈ ಪರಿವಾರದೊಡನೆ ಅವನು ಎಲ್ಲಿ ವಾಸಮಾಡಬೇಕು? ಇನ್ನು ಮುನ್ನೂರು ಮಂದಿ ಮಹಾತ್ಮರಾದ ಶೂಲರು ಎಲ್ಲಿರಬೇಕು? ವಾಸಕ್ಕೆ ಸ್ಥಳವಿಲ್ಲದೆ ಅವರು ನಾಶವಾಗಿ ಹೋದಾರು! ಹಿಕ್ಕಾ, ಶ್ವಾಸ, ಕಾಸ ಮುಂತಾದ ಬಲಾಢ್ಯರು ವಾಯುಸ್ವರೂಪರು. ಆ ನಗರದಲ್ಲಿ ಇವರ ಸಂಚಾರಕ್ಕೆ ಅವಕಾಶವೇ ಇಲ್ಲ. ಧನುರ್ವಾತಾದಿ ವಿವಿಧ ವಾತಗಳು,

ಕರ್ಣಶೂಲ, ನೇತ್ರರೋಗ, ಮುಖರೋಗ, ವಲ್ಮೀಕ, ಗಂಡಮಾಲಾ, ಅಪಸ್ಮಾರ, ಡಮರು, ಶಿರಶ್ಶೂಲ ಮುಂತಾದ ಕ್ರೂರಕರ್ಮಿಗಳಿಗೆ ನೀನು ಆಜ್ಞೆಯನ್ನಿತ್ತರೂ ಅವರು ಅಲ್ಲಿಗೆ ಬರಲಾರರು".

ಆಗ ಯಮನು ಈ ರೀತಿಯಲ್ಲಿ ಆಜ್ಞಾಪಿಸಿದನು: "ಎಲೈ ಕ್ಷಯನಾಯಕನೆ, ಮಹಾರೋಗಗಳಾದ ನೀವೆಲ್ಲರೂ ದಿವ್ಯಾಲಂಕಾರಗಳನ್ನು ಧರಿಸಿ ನಿಮ್ಮ ದೇವತಾ ಸ್ವರೂಪದಿಂದ ವೀರವರ್ಮನ ನಗರಕ್ಕೆ ಹೋಗಿರಿ. ನನ್ನ ನಗರದಲ್ಲಿ ನೀವು ಯಾರಿಗೂ ಪೀಡೆಯನ್ನು ಕೊಡದೆ ಸ್ವರೂಪಮಾತ್ರದಿಂದ ಹೇಗೆ ನೆಲೆಸಿರುವಿರೋ ಅದೇ ಪ್ರಕಾರದಲ್ಲಿ ವೀರವರ್ಮನ ನಗರದಲ್ಲಿ ಹೋಗಿರಲು ಯಾವ ಅಡ್ಡಿಯೂ ಇಲ್ಲ. ನನ್ನ ಮಾತನ್ನು ನಡೆಸುತ್ತ ವಿಧೇಯರಾಗಿ ವರ್ತಿಸುವಂತೆ ಆತನಿಗೂ ವಿಧೇಯರಾಗಿ ವರ್ತಿಸಿರಿ. ಪಾಪಿಗಳಾದ ಜೀವಿಗಳಿದ್ದರೆ ಅವರನ್ನು ನೀವು ಬಾಧಿಸಬಹುದು. ಭೂಲೋಕದಲ್ಲಿರುವ ಧರ್ಮಿಷ್ಠರಿಗೆ ನಾನು ಧರ್ಮಸ್ವರೂಪನೂ ಶುಭಕರನೂ ಆಗಿ ಕಾಣಿಸಿಕೊಳ್ಳುತ್ತೇನೆ. ಪಾಪಿಗಳಿಗೆ ಕಾಲಾಗ್ನಿಸ್ವರೂಪನಾಗಿ ಕಾಣಿಸಿಕೊಳ್ಳುತ್ತೇನೆ. ನನ್ನಂತೆಯೇ ನೀವೂ ನಡೆದುಕೊಳ್ಳಿರಿ. ಎಲೈ ಗಲತ್ಕುಷ್ಠ, ಬುದ್ಧಿಹೀನನಾದ ಯಾವನು ಬ್ರಹ್ಮಹತ್ಯೆಯನ್ನು ಮಾಡುವನೋ ಅವನ ದೇಹದಲ್ಲಿ ರೋಗರಾಜನಾದ ನೀನು ನೆಲಸಬೇಕು. ನಿನ್ನಿಂದ ಬಾಧಿತನಾದ ಮನುಷ್ಯನು ಮಹಾರುದ್ರವೆಂಬ ಶಿವಮಂತ್ರದ ಜಪವನ್ನು ಹೋಮಸಹಿತವಾಗಿ ಮಾಡಿ, ಇಪ್ಪತ್ತು ನಾಲ್ಕು ನಿಷ್ಕಗಳಿಂದ ರಚಿಸಿದ ಸುವರ್ಣ ಪ್ರತಿಮೆಯನ್ನು ವಿಪ್ರನಿಗೆ ದಾನ ಮಾಡಿದಲ್ಲಿ, ಅವನ ದೇಹವನ್ನು ತ್ಯಜಿಸು. ಪುಣ್ಯವಂತನ ಬಳಿಯಲ್ಲಿ ನೀನು ಭೃತ್ಯನಂತೆ ನಡೆದುಕೊಳ್ಳಬೇಕು. ಎಲೈ ಕ್ಷಯನಾಯಕ, ಕ್ಷಯರೋಗಿಯು ಬಡವನಾದಲ್ಲಿ ಗೌತಮೀನದಿಯು ಸಮುದ್ರದಲ್ಲಿ ಸೇರುವ ಸಂಗಮಸ್ಥಳದಲ್ಲಿ ಒಂದು ತಿಂಗಳು ನಿಯಮಪೂರ್ವಕವಾಗಿ ಸ್ನಾನ ಮಾಡಿದರೆ, ಆತನನ್ನು ನೀನು ತ್ಯಜಿಸು. ಇಲ್ಲದಿದ್ದರೆ ಪತಿತನಾಗುವೆ. ದೇವಸ್ವವನ್ನು ಯಾವನು ಅಪಹರಿಸುವನೋ ಭೋಜನ ಮಾಡುತ್ತಿರುವ ಬ್ರಾಹ್ಮಣರನ್ನು ಯಾವನು ತಡೆಯುವನೋ ತನ್ನ ಮಕ್ಕಳನ್ನೂ ದ್ವಿಜರನ್ನೂ ವಂಚಿಸಿ ಯಾವನು ಮೃಷ್ಟಾನ್ನವನ್ನು ತಿನ್ನುವನೋ ಅವರೆಲ್ಲರನ್ನೂ ನಿನ್ನ ಪ್ರಿಯಪತ್ನಿಯಾದ ವಿಷೂಚಿಕಾ ದೇವಿಯು ಬಾಧಿಸುವಳು. ಅನ್ನದಾನ ಮಾಡತಕ್ಕವನನ್ನೂ ದೇವಪೂಜಾನಿರತನನ್ನೂ ಅವಳು ಬಾಧಿಸಬಾರದು. ಯಾವ ಜನರು ತಮ್ಮ ತಂದೆಯ ವಂಶದಲ್ಲಿ ಜನಿಸಿದ ಹೆಂಗಸನ್ನಾಗಲಿ ಅಥವಾ ಹೆಂಗಸರು ಅಂಥ ಗಂಡಸನ್ನಾಗಲಿ ಕಾಮಿಸುವರೋ ಅವರನ್ನು ನಿನ್ನ ಮಗನಾದ ಪ್ರಮೇಹನು ಪೀಡಿಸತಕ್ಕದ್ದು. ಚಿನ್ನವನ್ನು ಕದಿಯತಕ್ಕವರು ಮೂತ್ರಕೃಚ್ಛ್ರನಿಂದ ಪೀಡಿತರಾಗಲಿ. ಚಿನ್ನದ ಚೂರುಗಳನ್ನೂ ಚಿನ್ನದ ದೇವಾಲಂಕಾರವನ್ನೂ ದಾನ ಮಾಡಿದರೆ ಪ್ರಮೇಹನಿಂದ ಬಿಡುಗಡೆ ಹೊಂದಲಿ. ಒಂದು ಪಲತೂಕದ ಚಿನ್ನದ ತಾವರೆಯನ್ನು ವಿಪ್ರನಿಗೆ ದಾನ ಮಾಡಿದಲ್ಲಿ, ಮೂತ್ರಕೃಚ್ಛ್ರನು ಆ ರೋಗಿಯನ್ನು ತ್ಯಜಿಸಲಿ. ಶಿವನ ಧನವನ್ನು ಯಾರು ಅಪಹರಿಸುವರೋ ಪರರ ಅಭಿವೃದ್ಧಿಯನ್ನು ಕಂಡು ಯಾರು ಹೊಟ್ಟೆಕಿಚ್ಚುಪಡುವರೋ ಅವರಿಗೆ ಗುಹ್ಯರೋಗವು ಬಾಧೆಯನ್ನೀಯುತ್ತದೆ. ಚಿನ್ನವನ್ನು ಕದಿಯತಕ್ಕವರು

ಕುಂಭೀಪಾಕಾದಿ ನರಕದಲ್ಲಿ ಬೀಳುತ್ತಾರೆ. ಅವರು ಉಗುರುಗಳು ಮಾಂಸಪಿಂಡಗಳಂತಾಗಿ ಕೆಟ್ಟುಹೋಗುತ್ತವೆ. ಅಲ್ಲದೆ ಅವರನ್ನು ನಿನ್ನ ಸೋದರನಾದ ಪಾಂಡುವು ಪೀಡಿಸುತ್ತಾನೆ. ಅಂಥ ಪಾತಕಿಗಳು ದಾಸವಾಳದ ಹೂಗಳಿಂದ ಅಲಂಕೃತವಾದ ಎಮ್ಮೆಯನ್ನು, ಹಿಂಡಿ ಸಾಸಿವೆಗಳ ಸಹಿತವಾಗಿ ವಿಪ್ರನಿಗೆ ದಾನ ಮಾಡಬೇಕು. ಅಲ್ಲದೆ ಮುದ್ಗಲವೆಂಬ ತೀರ್ಥದಲ್ಲಿದ್ದು ಐವತ್ತುಮೂರು ಸಾವಿರ ವಿಷ್ಣುಮಂತ್ರದ ಜಪವನ್ನು ಮಾಡಿದರೆ ರೋಗವಿಮುಕ್ತನಾಗುವನು. ಇಲ್ಲದಿದ್ದರೆ ಅವನು ಸಾಯುವನು. ಎಲೈ ಶೋಫೆ, ಸುವರ್ಣಾಲಂಕೃತವಾದ ಹೆಣ್ಣು ಮೇಕೆಯನ್ನು ವೇದವಿದನಾದ ವಿಪ್ರನಿಗೆ ಯಾವನು ದಾನ ಮಾಡುವನೋ ಅವನ ದೇಹವನ್ನು ನೀನು ಬಿಟ್ಟುಬಿಡತಕ್ಕದ್ದು. ಗರ್ಭಪಾತ ಮಾಡತಕ್ಕವನನ್ನು ಜಲೋದರನು ಬಾಧಿಸಲಿ. ಆ ರೋಗಿಯು ಅರವಟ್ಟಿಗೆಯನ್ನಿಡಿಸಿ ಪುಣ್ಯ ಸಂಪಾದನೆ ಮಾಡಿದರೆ, ಆತನನ್ನು ತ್ಯಜಿಸಲಿ. ಅಭಿಮಾನ ಶೀಲರಾದ ನೂರೆಂಟು ವ್ರಣಭೇದಗಳು ತುಲಾಭಾರವನ್ನು ಮಾಡಿಸಿಕೊಟ್ಟ ಮನುಷ್ಯನನ್ನು ತ್ಯಜಿಸಲಿ. ಅರ್ಧ ಪ್ರಸವಸ್ಥಿತಿಯಲ್ಲಿರುವ ಗೋವನ್ನು ಯಾವನು ದಾನ ಮಾಡುವನೋ ಆತನ ದೇಹದಲ್ಲಿ ಯಾವ ವ್ರಣಗಳೂ ನೆಲಸಬಾರದು. ರಸದ್ರವ್ಯವನ್ನು ಕದಿಯತಕ್ಕವನು ಸುವರ್ಣದಾನ ಮಾಡುವವರೆಗೂ ವಿಚರ್ಚಿಕೆಯಿಂದ ಬಾಧಿತನಾಗಲಿ. ಪಲತೂಕದ ಚಿನ್ನದ ಬಾಳೆಯಹಣ್ಣನ್ನು ದಾನಮಾಡಿದವನು ಭಗಂದರದಿಂದ ಮುಕ್ತನಾಗಲಿ. ಶಿವದೇವಸ್ಥಾನವನ್ನು ಭಗ್ನಗೊಳಿಸಿದ ಪಾತಕಿಯನ್ನೂ ವಿಶ್ವಾಸಘಾತಕನನ್ನೂ ಸನ್ನಿಪಾತವು ಪೀಡಿಸಲಿ. ಪರರ ಮೇಲೆ ಅಪವಾದವನ್ನು ಹೊರಿಸುವ ಪಾತಕಿಯನ್ನು ಅತಿಸಾರವು ಬಾಧಿಸಲಿ. ಎಲೈ ಕ್ಷಯನಾಯಕ, ಕೆರೆ ಬಾವಿಗಳನ್ನು ಯಾವನು ಹಾಳು ಮಾಡುವನೋ ಅವನ ಬಳಿಗೆ ನಿನ್ನ ಸ್ನೇಹಿತನಾದ ಅತಿಸಾರನು ಹೋಗಲಿ. ಧರ್ಮದ್ರವ್ಯವನ್ನು ಅಪಹರಿಸತಕ್ಕವನ ಬಳಿಗೆ ಸಂಗ್ರಹಣಿಯು ಹೋಗಲಿ. ಹೆಣ್ಣು ಕುರಿಯನ್ನು ದಾನ ಮಾಡಿದರೆ ಅತಿಸಾರ ಪತ್ನಿಯಾದ ಸಂಗ್ರಹಣಿಯು ಆತನನ್ನು ತ್ಯಜಿಸಬೇಕು. ಊಟ ಮಾಡುತ್ತಿರುವ ಬ್ರಾಹ್ಮಣರನ್ನು ಯಾವನು ಹಳಿಯುವನೋ ಅವನನ್ನು ಅರೋಚಕನು ಪೀಡಿಸಲಿ. ವಿವಿಧ ಮೃಷ್ಟಾನ್ನಗಳಿಂದ ಆತನು ವಿಪ್ರರನ್ನು ಸಂತೋಷಗೊಳಿಸಿದಾಗ ಅರೋಚಕನು ಅವನನ್ನು ಬಿಟ್ಟು ಹೋಗಲಿ. ಯಾರು ಮಿತ್ರನನ್ನು ಧಿಕ್ ಎಂದು ನಿಂದಿಸುವರೋ ಯಾರು ಪರರನ್ನು ಹೊಡೆಯುವರೋ ಯಾರು ದಾರಿಯನ್ನು ಅಡ್ಡಗಟ್ಟಿ ಪಥಿಕರನ್ನು ಭಲ್ಲೆಗಳಿಂದ ಪೀಡಿಸುವರೋ ಮತ್ತು ಆಶಾಭಂಗವನ್ನುಂಟು ಮಾಡುವರೋ ಅವರನ್ನು ಶೂಲಗಣಗಳು ಮುತ್ತಲಿ. ಕಾರಾಗೃಹದಲ್ಲಿ ಸಿಕ್ಕಿ ನರಳುವವರನ್ನೂ ಪಂಜರದಲ್ಲಿರುವ ಹಕ್ಕಿಗಳನ್ನೂ ದಾರಿಯಲ್ಲಿ ಕಳ್ಳರ ಬಾಧೆಗೆ ಸಿಕ್ಕಿದವರನ್ನೂ ಯಾರು ಬಿಡಿಸುವರೋ ಯಾರು ಸದಾಶಿವನ ಭಕ್ತರೋ ಅವರನ್ನು ಮುನ್ನೂರು ಶೂಲಗಣಗಳೂ ಪೀಡಿಸಕೂಡದು. ಇನ್ನೊಬ್ಬರ ಅಭಿವೃದ್ಧಿಯನ್ನು ಯಾವನು ಸಹಿಸುವುದಿಲ್ಲವೋ ಅವನ ಬಳಿಗೆ ಹಿಕ್ಕಾದೇವಿಯು ಹೋಗಲಿ. ಲಕ್ಷಹೋಮಗಳನ್ನು ಮಾಡಿ ಪಾಪವಿಮುಕ್ತನಾದಲ್ಲಿ ಆತನನ್ನು ತ್ಯಜಿಸಲಿ. ಯಕ್ಷನಂತೆ ಧನವನ್ನು ಸಂಗ್ರಹಿಸಿದ ಲೋಭಿಯನ್ನು ಧನುರ್ವಾತವು

ಪೀಡಿಸಲಿ. ಮಾಷ ಪ್ರಮಾಣದ ಚಿನ್ನದ ತುಂಡುಗಳನ್ನೂ ಎಳ್ಳೆಣ್ಣೆಯನ್ನೂ ಹೇರಳವಾಗಿ ದಾನಮಾಡಿದಾಗ, ಆತನನ್ನು ತ್ಯಜಿಸಲಿ. ಯಾರು ಶ್ರೀಹರಿಯ ಲೀಲೆಗಳನ್ನೂ ಸಜ್ಜನರ ಚರಿತೆಗಳನ್ನೂ ಕೇಳುವುದಿಲ್ಲವೋ ಅವರನ್ನು ಕರ್ಣಶೂಲವು ಬಾಧಿಸಲಿ. ಕಪಿಲವರ್ಣದ ಹಸುಗಳನ್ನು ದಾನ ಮಾಡಿ ಶ್ರೀಹರಿಯ ಲೀಲೆಗಳನ್ನು ಕೇಳತೊಡಗಿರುವವರನ್ನು ಕರ್ಣಶೂಲವು ಬಾಧಿಸಬಾರದು. ಪರರ ಆಸ್ತಿಯ ಮೇಲೆ ಕಣ್ಣು ಹಾಕತಕ್ಕವರನ್ನೂ ಪರಸ್ತ್ರೀಯರ ಅಪಹಾರಿಗಳನ್ನೂ ಊಟ ಮಾಡುವ ಅನ್ನವನ್ನು ಕಿತ್ತುಕೊಳ್ಳತಕ್ಕವರನ್ನೂ ನೇತ್ರರೋಗವು ಬಾಧಿಸಬೇಕು. ಚಿನ್ನದ ಸಾವಿರ ಕಮಲಗಳನ್ನು ದಾನ ಮಾಡಿದಾಗ ಅವರನ್ನು ಬಿಡಬೇಕು. ಯಾರು ಶೈಲೇಶನನ್ನೂ ಸೋಮನಾಥನನ್ನೂ ಕಾಶೀನಾಥನಾದ ವಿಶ್ವೇಶ್ವರನನ್ನೂ ಸಂದರ್ಶಿಸುವರೋ ಅವರಿಗೆ ಸಂಸಾರ ಭಯವಿಲ್ಲ. ಅಲ್ಲದೆ ಅವರನ್ನು ನೇತ್ರರೋಗಗಳು ಕಾಡುವುದಿಲ್ಲ. ತಂದೆಯನ್ನು ಕೊಂದವನು ಚೈತನ್ಯಹೀನನಾಗುತ್ತಾನೆ. ತಾಯಿಯನ್ನು ಕೊಂದವನು ಕುರುಡನಾಗಿ ಹುಟ್ಟುತ್ತಾನೆ. ಅದಕ್ಕೆ ಶಾಸ್ತ್ರೋಕ್ತವಾದ ಪ್ರಾಯಶ್ಚಿತ್ತವನ್ನು ಮಾಡಿಕೊಂಡಲ್ಲಿ ನರಕಬಾಧೆ ತಪ್ಪುವುದು. ಯಾವನ ನುಡಿಯು ಸಜ್ಜನರನ್ನು ಹೊಗಳುವುದಿಲ್ಲವೋ ಪರರನ್ನು ನಿಂದಿಸುವುದರಲ್ಲಿಯೇ ನಿರತವಾಗಿರುವುದೋ ಅಂಥವನನ್ನು ನೋಡಿ ಮುಖರೋಗವು ತನ್ನ ಕುಟುಂಬದೊಡನೆ ನೆಲಸುವುದು. ಅಂಥ ರೋಗಿಯು ಸಜ್ಜನರನ್ನೂ ಶಿವನನ್ನೂ ಭಕ್ತಿಯಿಂದ ಸದಾ ಸ್ತುತಿಸುತ್ತ ಬಿಳಿಯ ವೃಷಭವನ್ನು ವಿಪ್ರನಿಗೆ ದಾನ ಮಾಡಿದರೆ ಮುಖರೋಗವು ತೊಲಗುವುದು. 'ನೀನು ಇದನ್ನು ರಕ್ಷಿಸಿಕೊಂಡಿರು' ಎಂದು ಹೇಳಿ ಯಾರಾದರೊಬ್ಬರು ಧನವನ್ನು ನ್ಯಾಸವಾಗಿಟ್ಟುಹೋದಾಗ ಆ ಧನವನ್ನು ಮತ್ತೆ ಯಾವನು ಹಿಂದಿರುಗಿ ಕೊಡುವುದಿಲ್ಲವೋ ಅವನು ಮಹಾಪಾತಕಿ ಎನಿಸುತ್ತಾನೆ. ಅವನ ಕಾಲನ್ನು ವಲ್ಮೀಕರೋಗವು ಬಾಧಿಸುತ್ತದೆ. ಆ ರೋಗಿಯು ಶ್ರೀಹರಿಯನ್ನು ಸೇವಿಸುತ್ತ ವಿಪ್ರರಿಗೆ ವಿಪುಲವಾಗಿ ದಾನಧರ್ಮಗಳನ್ನು ನಡೆಸಿದರೆ ವಲ್ಮೀಕ ರೋಗವು ಆತನನ್ನು ತ್ಯಜಿಸುವುದು. ಇನ್ನೊಬ್ಬನ ಬಾಯಲ್ಲಿರುವ ಆಹಾರವನ್ನು ಯಾವ ಮೂಢನು ಅಪಹರಿಸುವನೋ ಅವನನ್ನು ಗಂಡಮಾಲೆಯು ಬಾಧಿಸುವಳು. ದೇವರ ಸಾಮಗ್ರಿಗಳನ್ನು ಅಪಹರಿಸತಕ್ಕವನೂ ಗಂಡಮಾಲೆಯ ಬಾಧೆಗೆ ಒಳಗಾಗುತ್ತಾನೆ. ನಾನಾ ರತ್ನಗಳನ್ನು ದಾನಮಾಡಿದಲ್ಲಿ ಆ ರೋಗವು ಹೋಗುವುದು. ಗುರುಪತ್ನೀಗಾಮಿಯು ಕಂಡೂ ಕುಷ್ಠದ ಪೀಡೆಗೆ ಒಳಗಾಗುತ್ತಾನೆ. ಶಿವಘಂಟಾದಾನದಿಂದ ಆ ರೋಗವು ಲಯಿಸುವುದು. ಐಶ್ವರ್ಯವಂತನಾದ ದಾನಿಯನ್ನು ನೋಡಿ ಯಾವನು ಅಸೂಯೆಪಡುತ್ತಾನೋ ಅವನನ್ನು ಅಪಸ್ಮಾರವು ಪೀಡಿಸಲಿ. ಅಂಥವನು ಕಪ್ಪಾದ ಹಸುವನ್ನೂ ಚಿನ್ನದ ಕಮಲವನ್ನೂ ದಾನ ಮಾಡಿದರೆ ಅಪಸ್ಮಾರವು ತ್ಯಜಿಸುತ್ತದೆ. ಯಾವನು ಧರ್ಮವನ್ನು ಕೇವಲ ದಂಭಕ್ಕಾಗಿ ಆಚರಿಸುವನೋ ಅವನ ಬಳಿಗೆ ಗಜಚರ್ಮವು ಹೋಗಲಿ. ಹಂಸತೀರ್ಥದಲ್ಲಿ ಸ್ನಾನ ಮಾಡುತ್ತಿದ್ದರೆ ಅವನನ್ನು ತ್ಯಜಿಸಲಿ. ವಿಶ್ವಾಸಘಾತಕನನ್ನು ತಲೆನೋವು ಮುಂತಾದ ರೋಗಗಳು ಕಾಡಿಸಲಿ. ಸೂರ್ಯಪೂಜೆಯೇ ಮುಂತಾದ ಪುಣ್ಯಕಾರ್ಯಗಳನ್ನು ನಡೆಸಿದಲ್ಲಿ

ಅವನನ್ನು ಬಿಡಲಿ. ಯಾವ ನರಾಧಮರು ಪರರ ಯಜ್ಞೋಪವೀತವನ್ನು ಛೇದಿಸುತ್ತಾರೋ ಅವರನ್ನು ಡಮರು ಮತ್ತು ವಾಲುಕಗಳು ಪೀಡಿಸಬೇಕು. ಸ್ವರ್ಣಸೂತ್ರಗಳನ್ನು ದೇವತೆಗಳಿಗೂ ವಿಪ್ರರಿಗೂ ಅರ್ಪಿಸಿದಲ್ಲಿ ಆ ರೋಗಗಳು ಹಿಂಜರಿಯುತ್ತವೆ. ಯಾವನು ಮನೋವಾಕ್ಕಾಯಗಳಿಂದ ಪರರಿಗೆ ದ್ರೋಹವೆಸಗುತ್ತಾನೋ ಅವನು ಜನ್ಮಾಂತರದಲ್ಲಿ ಪುತ್ರಹೀನನಾಗುತ್ತಾನೆ. ಇದರಲ್ಲಿ ಸಂದೇಹವಿಲ್ಲ. ಅವನು ಮೂರು ಸಲ ಹರಿವಂಶವನ್ನು ಕ್ರಮವಾಗಿ ಕೇಳಿದರೆ ಪುತ್ರವಂತನೂ ಧನವಂತನೂ ಆಗುವನು".

ಈ ರೀತಿಯಲ್ಲಿ ಯಮನು ಹೇಳಿದ ವಿಚಾರವನ್ನು ಯಾವ ಮಾನವರು ಆಲಿಸುತ್ತಾರೋ ಅವರಿಗೆ ರೋಗಗಳಿಂದ* ಪೀಡೆಯು ಉಂಟಾಗುವುದಿಲ್ಲ.

---

* ಈ ಅಧ್ಯಾಯದಲ್ಲಿ ಹೇಳಿದ ಕೆಲವು ಶಬ್ದಗಳ ಅರ್ಥ:- ವಿಷೂಚಿಕಾ = ಕಾಲರಾ. ಪಾಂಡು = ರಕ್ತಹೀನತೆ. ಶೋಫಾ = ಊತ, ಬಾವು. ವಿಚರ್ಚಿಕಾ = ಕಜ್ಜಿ, ತುರಿ. ಹಿಕ್ಕಾ = ಬಿಕ್ಕಳಿಕೆ. ಸಂನಿಪಾತ = ತ್ರಿದೋಷಗಳಿಂದ ಬರುವ ಜ್ವರ. ಸಂಗ್ರಹಣಿ = ಆಮಶಂಕೆ. ವಲ್ಮೀಕ ರೋಗ = ಆನೆಯಕಾಲು ರೋಗ. ಡಮರು = ಕಿರುಕುಳವನ್ನು ಕೊಡುವ ಬಗೆ ಬಗೆಯ ರೋಗ. ವಾಲುಕ = ?

# ವೀರವರ್ಮನ ವಿಜಯ

ಆಮೇಲೆ ಯಮಧರ್ಮನು ಕಾಮರೂಪಿಗಳಾದ ಆ ಭೃತ್ಯರೊಡನೆ ಹೊರಟು ರಾಜಕುಮಾರಿಯಾದ ಮಾಲಿನಿಯನ್ನು ಮದುವೆಯಾಗಲು ಸಾರಸ್ವತಪುರಕ್ಕೆ ಆಗಮಿಸಿದನು. ಅಲ್ಲಿಗೆ ನಾರದನು ಮೊದಲು ಬಂದಿದ್ದನು. ಧರ್ಮಿಷ್ಠಳಾದ ಮಾಲಿನಿಯು ಹೋಮಶಾಲೆಯಲ್ಲಿ ಅಗ್ನಿಯನ್ನು ಹೋಮದಿಂದ ಸಂತೃಪ್ತಿಗೊಳಿಸುತ್ತ ನಾರದಾದಿ ಮುನಿಗಳನ್ನು ಪೂಜಿಸುತ್ತ ಪತಿಯನ್ನು ನಿರೀಕ್ಷಿಸುತ್ತ ಇದ್ದಳು. ಯಮನು ಆ ಕನ್ಯೆಯನ್ನು ಮದುವೆಯಾಗಿ ವೀರವರ್ಮನನ್ನು ಕುರಿತು "ಎಲೈ ಪುಣ್ಯಶಾಲಿಯೆ, ನಾನು ಪ್ರಸನ್ನನಾಗಿದ್ದೇನೆ. ನಿನಗೆ ಯಾವ ವರವು ಬೇಕು, ಕೇಳಿಕೊ. ಇನ್ನು ಸ್ವಲ್ಪ ದಿನಗಳಲ್ಲಿಯೇ ನಿನಗೆ ಮರಣವು ಸನ್ನಿಹಿತವಾದಂತೆ ತೋರುತ್ತದೆ!" ಎಂದನು. ವೀರವರ್ಮನು "ನನಗೆ ಆಯಸ್ಸು ಬೇಕೆಂಬ ವರವನ್ನು ಅಳಿಯನಾದ ನಿನ್ನಿಂದ ಕೇಳಿಕೊಳ್ಳಲಾರೆ! ಕನ್ಯಾಶುಲ್ಕದಿಂದ ಜೀವಿಸತಕ್ಕವರು ನರಕಕ್ಕೆ ಹೋಗುವರು" ಎಂದು ತಿಳಿಸಿದನು. ಆಗ ಯಮನು "ವೀರವರ್ಮ, ನೀನು ಕನ್ಯಾದಾನವನ್ನು ಮಾಡಿದ್ದೀಯೆ. ನಾನು ದಾನವನ್ನು ಸ್ವೀಕರಿಸಿದ್ದೇನೆ. ಸಂತುಷ್ಟನಾದ ನಾನು ಆಶೀರ್ವಾದಗಳಿಂದ ನಿನ್ನನ್ನು ಅಭಿನಂದಿಸುತ್ತೇನೆ. ಇದರಲ್ಲಿ ವಿಶೇಷವೇನು?" ಎಂದು ಕೇಳಿದನು. ವೀರವರ್ಮನು "ಯಮಧರ್ಮರಾಜ, ಯಾವ ದಿವಸ ನನಗೆ ಮರಣವು ಸಂಭವಿಸುವುದೋ ಆ ದಿವಸ ನನಗೆ ಶ್ರೀಕೃಷ್ಣನ ದರ್ಶನವಾಗಬೇಕೆಂದು ಬಯಸುತ್ತೇನೆ" ಎಂದನು. ಯಮಧರ್ಮನು "ಒಳ್ಳೆಯದು; ನಿನಗೆ ಶ್ರೀಕೃಷ್ಣನ ಸಂದರ್ಶನವಾಗುವವರೆಗೂ ನಾನು ನಿನ್ನನ್ನು ತ್ಯಜಿಸಿಹೋಗದೆ ಇಲ್ಲಿಯೇ ಇರುವೆನು. ನಿನಗೋಸ್ಕರ ವೈರಿಬಲವನ್ನು ಎದುರಿಸುವೆನು" ಎಂದು ವರವನ್ನು ಸಲ್ಲಿಸಿದನು.

ಅರ್ಜುನ, ಈ ಕಾರಣದಿಂದ ಯಮನು ನಿನ್ನ ಸೈನ್ಯವನ್ನು ಎದುರಿಸುತ್ತಿದ್ದಾನೆ. ಅಗೋ, ಅಲ್ಲಿ ನೋಡು. ವೀರವರ್ಮನು ಮಹಾರಥರಿಂದ ಪರಿವೃತನಾಗಿ ನನ್ನನ್ನು ಕಾಣುವ ಉತ್ಸಾಹದಿಂದ ಬರುತ್ತಿದ್ದಾನೆ. ನೀನು ಸನ್ನದ್ಧನಾಗು. ಮಯೂರಧ್ವಜಾದಿವೀರರೂ ಬಭ್ರುವಾಹನ ವೃಷಕೇತುಗಳೂ ಪ್ರದ್ಯುಮ್ನಾದಿಗಳೂ ಯುದ್ಧದಲ್ಲಿ ತೊಡಗಲಿ. ಮುಂದೆ ನಡೆಯುವ ಕೌತುಕವನ್ನು ನೋಡಲಿ! ಭೀಕರವಾದ ಯುದ್ಧವು ನಡೆಯುವುದು."

ಜನಮೇಜಯ, ಈ ರೀತಿಯಲ್ಲಿ ಶ್ರೀಕೃಷ್ಣನು ಪಾರ್ಥನ ರಥದಲ್ಲಿದ್ದು ಹೇಳುತ್ತಿರುವಾಗ ವೀರವರ್ಮನು ನುಗ್ಗಿಬಂದು ಪಾರ್ಥನನ್ನು ನೋಡಿ "ಅರ್ಜುನ, ಸಂಗ್ರಾಮದಲ್ಲಿ ನಿನ್ನ ಕಡೆಯ ವೀರರೆಲ್ಲರನ್ನೂ ಜಯಿಸಿದೆನು. ಆದರೆ ನಿನ್ನೊಡನೆ ಹೋರಾಡಿದ ಹೊರತು ನನ್ನ ಯುದ್ಧಕುತೂಹಲವು ಶಾಂತವಾಗದು! ಗೋವಿಂದ, ಅರ್ಜುನನು ಏನಾದರೂ ಮಾಡಲಿ, ನೀನಾದರೂ ವೀರನಾಗಿ ಚಲಿಸದೆ ನಿಲ್ಲು! ನನ್ನ ಶರಗಳ ಹೊಡೆತವನ್ನು ಸಹಿಸಿಕೊ. ಯುದ್ಧಭೂಮಿಯಿಂದ ಚಲಿಸದಿರು!" ಎಂದು ಹೇಳಿದನು. ಒಡನೆಯೇ ಏಳು ಬಾಣಗಳಿಂದ ಅರ್ಜುನನನ್ನು ನೋಯಿಸಿ ಶ್ರೀಕೃಷ್ಣನ ಎದೆಗೆ ಅರುವತ್ತು ಬಾಣಗಳನ್ನು ಹೊಡೆದನು. ಐದೈದು ಬಾಣಗಳಿಂದ ಮಯೂರಧ್ವಜನೇ ಮೊದಲಾದವರನ್ನು ಪ್ರಹರಿಸಿ ಮೂರ್ಛೆಗೊಳಿಸಿದನು. ಎಲ್ಲವೂ ಅದ್ಭುತವಾಗಿ ತೋರಿತು.

ಅರ್ಜುನನು "ವೀರವರ್ಮ, ನನ್ನ ತುರಂಗಗಳನ್ನು ಒಳ್ಳೆಯ ಮಾತಿನಿಂದ ಬಿಟ್ಟುಬಿಡು" ಎಂದು ನುಡಿಯುತ್ತ, ಕೂರ್ಗಣೆಗಳಿಂದ ಅವನನ್ನು ಆಚ್ಛಾದಿಸಿದನು. ವೀರವರ್ಮನು "ಅರ್ಜುನ, ಆ ಎರಡು ಕುದುರೆಗಳನ್ನು ಬಂಧಿಸಿರುವಂತೆ, ನನ್ನೆದುರಿಗಿರುವ ಮಾಧವ ಅರ್ಜುನ ಎಂಬಿಬ್ಬರನ್ನೂ ಹಿಡಿದು ಬಂಧಿಸುವೆನು!" ಎಂದು ನುಡಿದು ಸಾವಿರಾರು ಬಾಣಗಳಿಂದ ಕೃಷ್ಣಾರ್ಜುನರನ್ನು ಮುಚ್ಚಿ ಕಾಲಮೇಘದಂತೆ ಬೊಬ್ಬಿರಿದನು. ಪಾರ್ಥನು ಆ ಬಾಣಗಳನ್ನು, ಪ್ರಾಜ್ಞರಾದ ಮಂತ್ರಿಗಳಿಂದ ಕೂಡಿದ ವೀರನು ಶತ್ರುದೇಶವನ್ನು ಕತ್ತರಿಸುವಂತೆ ಚೂರುಚೂರಾಗಿ ಕತ್ತರಿಸಿದನು. ಅಲ್ಲದೆ ಏಳು ಬಾಣಗಳನ್ನು ವೀರವರ್ಮನ ಮೇಲೆ ಬಿಗಿದನು. ವೀರವರ್ಮನು ನಿಶಿತಗಳಾದ ಅರುವತ್ತು ಬಾಣಗಳಿಂದ ಪಾರ್ಥನನ್ನೂ ನೂರು ಬಾಣಗಳಿಂದ ವಾಸುದೇವನನ್ನೂ ಪ್ರಹರಿಸಿ, ಹನುಮಂತನ ಮೇಲೆ ನೂರುಬಾಣಗಳನ್ನು ಪ್ರಯೋಗಿಸಿದನು. ಘೋರ ಶರಜಾಲಗಳಿಂದ ಪಾರ್ಥನ ಅಶ್ವಗಳು ಗಾಯಗೊಂಡವು. ಶ್ರೀಕೃಷ್ಣನು ಅವುಗಳನ್ನು ಕೈಯಿಂದ ಎಳೆದು ಹಿಡಿದಿದ್ದರೂ ಏರು ತಗ್ಗುಗಳಿರುವ ನೆಲದಲ್ಲಿ ಅವನ ಹಿಡಿತವನ್ನು ತಪ್ಪಿಸಿಕೊಂಡು ಮುಗ್ಗರಿಸಿ ನಡೆದವು. ಇತರ ಯೋಧರು ವೀರವರ್ಮನ ಕೂರ್ಗಣೆಗಳಿಂದ ಮುಚ್ಚಲ್ಪಟ್ಟು ಕಾಣದಾದರು. ಮೋಹಾವೃತವಾದ ಜಗತ್ತಿನಂತೆ ಪಾಂಡವಬಲವು ಕಂಗೆಟ್ಟಿತು. ವೀರವರ್ಮನ ಪರಾಕ್ರಮವನ್ನು ಕಂಡು ವಾಸುದೇವನು ಅರ್ಜುನನನ್ನು ಕುರಿತು "ಅರ್ಜುನ-ಮಹಾಬಾಹು, ಕಂಡೆಯಾ ವೀರವರ್ಮನನ್ನು! ಇತರ ಕ್ಷತ್ರಿಯರನ್ನು ಗೆದ್ದಂತೆ ಈತನನ್ನೂ ಗೆಲ್ಲಬಹುದೆಂದು ತಿಳಿದಿರುವೆಯಾ? ನನ್ನಿಂದಲೂ ಈತನನ್ನು ಜಯಿಸಲು ಸಾಧ್ಯವಿಲ್ಲ. ಇತರ ಕ್ಷತ್ರಿಯ ವೀರರನ್ನು ವಿವಿಧೋಪಾಯಗಳಿಂದ ಗೆಲ್ಲಲಾಯಿತು. ಕರ್ಣನ ರಥದ ಚಕ್ರವನ್ನು ಭೂದೇವಿಯು ಸಂಗ್ರಾಮಮಧ್ಯದಲ್ಲಿ ನುಂಗಿದಳು. ಹಾಗೆ ಈತನ ಚಕ್ರವನ್ನು ಭೂಮಿಯೂ ನುಂಗಲಾರಳು! ಮತ್ತೆ ಇವನು ತನ್ನ ಸಾಮರ್ಥ್ಯದಿಂದ ಹೋರಾಡಬಲ್ಲನು. ಶಿಶುಪಾಲನ ಶಿರಸ್ಸನ್ನು ನನ್ನ ಸುದರ್ಶನಚಕ್ರವು ಕತ್ತರಿಸಿತು. ಅದೇ ಚಕ್ರವು ಈ ವೀರವರ್ಮನ ಶಿರಸ್ಸನ್ನು ಕತ್ತರಿಸಲರಿಯದು. ನಿನ್ನ ಕೊಂಕು ಬಾಣಗಳು ಸಿಂಧುರಾಜನಾದ ಜಯದ್ರಥನ ತಲೆಯನ್ನು ರಣರಂಗದಿಂದ ದೂರಕ್ಕೆ ಹಾರಿಸಿದವು. ಅವೇ ಬಾಣಗಳು ಇವನ ಮುಖವನ್ನೂ ತಲೆಯೆತ್ತಿ ನೋಡಲಾರವು! ಆದ್ದರಿಂದ ಈಗ ಹನುಮಂತನು ತನ್ನ ಬಾಲದಿಂದ ವೀರನಾದ ವೀರವರ್ಮನ ರಥವನ್ನು ಬಿಗಿದು ಕಟ್ಟಲಿ!" ಎಂದು ಹೇಳಿದನು. ಅದನ್ನು ಕೇಳಿ ಹನುಮಂತನು "ಇದು ರಾವಣನ ಅಶೋಕವನವಲ್ಲ! ಎದುರಿಗೆ ಹೋರಾಡತಕ್ಕವನು ರಾಕ್ಷಸನಾದ ಜಂಬುಮಾಲಿಯೂ ಅಲ್ಲ! ಎದುರಿಗೆ ಇರತಕ್ಕವರು ಜಾನಕಿಯನ್ನು ಹೆದರಿಸುತ್ತಿದ್ದ ರಾಕ್ಷಸಿಯರೂ ಅಲ್ಲ" ಎಂದು ಹೇಳಿದನು. ಆಗ ಶ್ರೀಕೃಷ್ಣನು "ವಾಯುಪುತ್ರ, ವೀರವರ್ಮನ ರಥವನ್ನು ಹಿಡಿದು ಬೀಸಿ ಎಸೆದು ಬಿಡು! ಇದು ನನ್ನ ಆಜ್ಞೆ! ಧರ್ಮೋದ್ದೇಶದಿಂದ ನಾನಾಗಲಿ ನೀನಾಗಲಿ ಅಕಾರ್ಯವನ್ನಾದರೂ ಮಾಡಬೇಕು!" ಎಂದನು. ಹೀಗೆ ಶ್ರೀಕೃಷ್ಣನಿಂದ ಪ್ರೇರಿತನಾದ ಹನುಮಂತನು ವೀರವರ್ಮನ ರಥವನ್ನು

ಕುದುರೆ ಸಾರಥಿಗಳ ಸಹಿತವಾಗಿ ಹಿಡಿದೆತ್ತಿ ಗಗನವನ್ನಡರಿದನು. ಒಡನೆಯೇ ವೀರವರ್ಮನು ರಥದಿಂದ ಛಂಗನೆ ನೆಗೆದು ಅರ್ಜುನನ ರಥವನ್ನು ಹಿಡಿದೆತ್ತಿ ಹನುಮಂತನಿದ್ದೆಡೆಗೆ ಗಗನವನ್ನಡರಿದನು! "ಎಲೈ ಹನುಮಂತ, ನೀನು ತ್ಯಜಿಸಿದ ಶ್ರೀಕೃಷ್ಣನಿರುವ ರಥವನ್ನು ನಾನು ಎತ್ತಿ ತಂದಿದ್ದೇನೆ, ನೋಡು! ಎಲ್ಲಿಗೆ ನನ್ನ ರಥವನ್ನೊಯ್ಯುವೆಯೋ ಅಲ್ಲಿಗೆ ಕೃಷ್ಣಾರ್ಜುನರನ್ನೂ ಹೊತ್ತು ತರುವೆನು! ಎಂದಿಗೂ ಇದನ್ನು ಬಿಡೆನು. ದೈವವಶದಿಂದ ಇವರನ್ನು ನೀನು ತ್ಯಜಿಸಿ ಬಂದಿದ್ದೀಯೆ. ಸ್ವಾಮಿಯಾದ ಶ್ರೀಕೃಷ್ಣನು ಕ್ಷೀರಸಮುದ್ರದ ನಡುವೆ ಶೇಷ ಮಂಚದಲ್ಲಿ ಪವಡಿಸಲಿ! ವಿರಹಿಣಿಯಾಗಿ ಒಬ್ಬಳೇ ಇರುವ ಲಕ್ಷ್ಮೀದೇವಿಯು ಸದಾ ಮಾಧವನನ್ನೇ ನೆನೆಯುತ್ತಿದ್ದಾಳೆ! ಪಾರ್ಥನ ಭಕ್ತಿಗೆ ವಶನಾಗಿ ಇಲ್ಲಿ ಬಂದಿರುವ ಅವಳ ಕಾಂತನನ್ನು ಅವಳಿಗೆ ಒಪ್ಪಿಸುವೆನು! ಅತ್ತ ನೋಡು! ಸೂರ್ಯನು ಪ್ರಕಾಶಿಸುವುದಿಲ್ಲ; ಚಂದ್ರನು ಕಾಣೆಯಾಗಿದ್ದಾನೆ! ಏಕೆ ಹೀಗಾಯಿತೆಂಬುದನ್ನು ಪಂಡಿತರು ತಿಳಿದುಕೊಳ್ಳಲಿ! ನಿನಗಿಂತಲೂ ಮಹತ್ತರವಾದ ಕರ್ಮವನ್ನು ನಾನು ಮಾಡಿದ್ದೇನೆಂದು ಶ್ರೀಕೃಷ್ಣನ ಅಂತರಂಗಕ್ಕೆ ತಿಳಿದಿದೆ" - ಎಂದು ವೀರವರ್ಮನು ನುಡಿದನು. ಆಗ ಹನುಮಂತನು "ನಿನ್ನ ಮಹಿಮೆಯನ್ನು ನಾನು ಕಣ್ಣಿನಿಂದ ಕಂಡೆನು. ಅದನ್ನೇಕೆ ನೀನೇ ವರ್ಣಿಸಿಕೊಳ್ಳುತ್ತಿದ್ದೀಯೆ? ತನ್ನ ಪೌರುಷವನ್ನು ಯಾವನು ಹೊಗಳಿಕೊಳ್ಳುವನೋ ಅವನನ್ನು ಸಜ್ಜನರು ಶ್ಲಾಘಿಸುವುದಿಲ್ಲ" ಎಂದನು. ವೀರವರ್ಮನು "ಎಲೈ ಹನುಮಂತ, ನನ್ನ ರಥವನ್ನು ಹೊತ್ತು ಮುಂದೆ ಹೋಗಲು ನಿನಗೆ ಸಾಧ್ಯವಾಗದು. ಕೃಷ್ಣಾರ್ಜುನರನ್ನು ಹಿಡಿದು ಹೇಗೆ ಬಂಧಿಸಿದ್ದೇನೆ, ನೋಡು. ತಡೆದುಕೋ ನನ್ನ ಗುದ್ದಿನ ಜಡಿತವನ್ನು!" ಎಂದು ಹೇಳಿ ಹನುಮಂತನನ್ನು ಮುಷ್ಟಿಯಿಂದ ಬಲವಾಗಿ ಗುದ್ದಿದನು. ಹನುಮಂತನಿಗೆ ಅಲ್ಲಾಡಲೂ ಸಾಧ್ಯವಾಗಲಿಲ್ಲ. ವೀರವರ್ಮನು ಹನುಮಂತನನ್ನೂ ಕೃಷ್ಣಾರ್ಜುನರನ್ನೂ ಸೇರಿಸಿ ಒಟ್ಟಿಗೆ ಅದುಮಿ ಹಿಡಿದನು. ಒಡನೆಯೇ ಶ್ರೀಕೃಷ್ಣನು ವೀರವರ್ಮನ ಎದೆಯ ಮೇಲೆ ಒದ್ದನು. ವೀರವರ್ಮನು ಶ್ರೀಕೃಷ್ಣನ ಪಾದಗಳನ್ನು ತನ್ನ ಎದೆಯ ಮೇಲೆ ಒತ್ತಿ ಹಿಡಿದುಕೊಂಡು ಮೂರ್ಛಿತನಾಗಿ ನೆಲದ ಮೇಲೆ ಬಿದ್ದನು. ಕ್ಷಣಾರ್ಧದಲ್ಲಿ ಮತ್ತೆ ಎಚ್ಚತ್ತು "ನಾನೊಬ್ಬನೇ ನಿಮ್ಮ ಮೂವರನ್ನೂ ಹಿಡಿದು ಬಂಧಿಸಿದ್ದೇನೆ. ನೀವು ಮೂವರಿದ್ದರೂ ನನ್ನನ್ನು ಹಿಡಿಯಲಾರದೆ ಹೋದಿರಿ! ಶ್ರೀಕೃಷ್ಣನ ಸಂದರ್ಶನವಾದೊಡನೆ ನನಗೆ ಮರಣ ವಾಗುವುದೆಂದು ಯಮನು ಹೇಳಿದ್ದನು. ಅದು ಏಕೆ ಬರಲಿಲ್ಲ! ಅರ್ಜುನನ ಎರಡು ಕುದುರೆಗಳನ್ನೂ ಹಿಡಿದೊಯ್ದೆನು. ವೀರರನ್ನು ರಣರಂಗದಲ್ಲಿ ಸಂತೋಷಪಡಿಸಿದೆನು. ಶ್ರೀಕೃಷ್ಣನ ಪಾದಸ್ಪರ್ಶದಿಂದ ದಿಟವಾಗಿಯೂ ನನ್ನ ಮರಣವು ದೂರಕ್ಕೆ ಓಡಿಹೋಯಿತು!" ಎಂದು ಹೇಳಿದನು. ಮರುಕ್ಷಣದಲ್ಲಿ ಆ ರಾಜನು ತನ್ನ ರಥದಲ್ಲಿ ಮೊದಲಿನಂತೆ ಸನ್ನದ್ಧನಾಗಿ ನಿಂತಿದ್ದನು! ಆಗ ಶ್ರೀಕೃಷ್ಣನು ಅರ್ಜುನನನ್ನು ನೋಡಿ "ಪಾರ್ಥ, ಇನ್ನು ಸಾವಿರ ವರ್ಷಗಳವರೆಗೆ ಯುದ್ಧಮಾಡಿದರೂ ನನ್ನಿಂದಾಗಲಿ ನಿನ್ನಿಂದಾಗಲಿ ವೀರವರ್ಮನನ್ನು ಜಯಿಸಲು ಶಕ್ಯವಿಲ್ಲ. ಈತನು ಲಘುಹಸ್ತನೂ ಮಹಾಬಲಶಾಲಿಯೂ ಆಗಿದ್ದಾನೆ. ಸರ್ವಾಸ್ತ್ರಗಳನ್ನೂ ಬಲ್ಲನು. ಸಕಲ

ವೀರರನ್ನೂ ಗೆದ್ದು ನನ್ನನ್ನು ಸಂತೋಷಪಡಿಸಿದ್ದಾನೆ" ಎಂದನು. ಅರ್ಜುನನು "ಸ್ವಾಮಿ, ನೀನು ಯಾರಿಂದ ಸಂತೋಷಗೊಳಿಸಲ್ಪಡುವೆಯೋ ಆತನು ವಿಜಯಶಾಲಿಯೇ ಆಗುವನು! ನನ್ನ ಪೌರುಷದಿಂದ ಅವನಿಗೆ ಪರಾಜಯವಾಗದು" ಎಂದು ಹೇಳಿದನು. ಒಡನೆಯೇ ವೀರವರ್ಮನು ಸಂಪ್ರೀತನಾಗಿ "ಧನಂಜಯ, ಹೀಗೆ ಹೇಳಬೇಡ. ಯುದ್ಧದಲ್ಲಿ ಚರಾಚರಾತ್ಮಕವಾದ ಜಗತ್ತನ್ನೇ ಗೆಲ್ಲಲು ನಿನ್ನ ಸಾಧ್ಯವಿದೆ. ನಿನ್ನ ವಿನಯವಚನಗಳಿಂದ ನನ್ನ ಹೃದಯವು ಪ್ರಸನ್ನವಾಯಿತು"-ಎಂದು ನುಡಿದು ಧನುಸ್ಸನ್ನೆಸೆದು ಶ್ರೀ ಕೃಷ್ಣನ ಪಾದಗಳಿಗೆ ಸಾಷ್ಟಾಂಗವೆರಗಿದನು. ಅರ್ಜುನನನ್ನು ಆಲಿಂಗಿಸಿಕೊಂಡನು. ಆಮೇಲೆ ಆ ಎರಡು ಅಶ್ವಗಳನ್ನೂ ತನ್ನ ರಾಜ್ಯವನ್ನೂ ತನ್ನ ದೇಹವನ್ನೂ ಶ್ರೀಕೃಷ್ಣಸ್ವಾಮಿಗೆ ಅರ್ಪಿಸಿದನು. ನೆರೆದಿದ್ದ ವೀರರೊಡನೆ ಸ್ನೇಹವನ್ನು ಬೆಳೆಸಿ, ಶ್ರೀಕೃಷ್ಣನನ್ನು ಭಕ್ತಿಯಿಂದ ಸ್ತುತಿಸುತ್ತ ಎದುರಿಗೆ ನಿಂತುಕೊಂಡನು. (ಐದು ದಿನಗಳವರೆಗೆ ಅವರೆಲ್ಲರನ್ನೂ ಪ್ರೀತಿಯಿಂದ ಸತ್ಕರಿಸಿದನು). ಆರನೆಯ ದಿನ ಪಾರ್ಥನಿಗೆ ತನ್ನ ಸಾರಸ್ವತಪುರವೆಲ್ಲವನ್ನೂ ತೋರಿಸಿ ವಿಪುಲವಾದ ಧನವನ್ನೂ ಎಂಟು ಬಗೆಯ ಮುತ್ತಿನ ರಾಶಿಗಳನ್ನೂ ವಿವಿಧ ರತ್ನಗಳನ್ನೂ ಅರ್ಪಿಸಿದನು. ಅವುಗಳನ್ನು ಒಯ್ಯುವುದೇ ಅರ್ಜುನನಿಗೆ ಕಷ್ಟವೆನಿಸಿತು! ಅಲ್ಲದೆ ಚಂದ್ರನಂತೆ ಶುಭ್ರವರ್ಣದ ಇಪ್ಪತ್ತೊಂದು ಸಾವಿರ ಆನೆಗಳನ್ನೂ ಒಂದು ಕಿವಿಯು ಕಪ್ಪಾಗಿರುವ ಅಸಂಖ್ಯಾತ ಕುದುರೆಗಳನ್ನೂ ಸಾವಿರಾರು ಸುಂದರ ಸ್ತ್ರೀಯರನ್ನೂ ವೀರವರ್ಮನು ಪಾರ್ಥನಿಗೆ ಕೊಟ್ಟನು. ತರುವಾಯ ತಾನೇ ಮುಂದಾಳಾಗಿ ನಿಂತು ಪಾರ್ಥನ ಅಶ್ವಗಳನ್ನು ಪಾಲಿಸುತ್ತ ಹೊರಟನು.

ಹೀಗೆ ಎಲ್ಲರೂ ಪ್ರಯಾಣಮಾಡುತ್ತ ಹೋಗುತ್ತಿರಲು ಎದುರಿಗೆ ಒಂದು ಮಹಾನದಿಯು ಹರಿಯುವುದನ್ನು ಕಂಡರು. ನೀರಿನ ಸುಳಿಗಳಿಂದಲೂ ಅಲೆಗಳಿಂದಲೂ ನದಿಯು ಆಕುಲವಾಗಿತ್ತು. ನದಿಯಲ್ಲಿದ್ದ ಮೀನುಗಳು ಎಷ್ಟು ಪ್ರಬಲವಾಗಿದ್ದವೆಂದರೆ-ಕೆಲವು ಮೀನುಗಳು ಆನೆಗಳನ್ನು ಎಳೆದುಕೊಂಡು ಹೋಗಬಲ್ಲವಾಗಿದ್ದವು! ಅಂತಹ ಮೀನುಗಳನ್ನೂ ಎಳೆಯಬಲ್ಲ ಇನ್ನೂ ಪ್ರಬಲವಾದ ಮೀನುಗಳಿದ್ದವು! ಆ ನದಿಯು ಬೃಹತ್ತರವಾದ ಅಲೆಗಳಿಂದ ಸಮುದ್ರವನ್ನು ಹಾಸ್ಯಮಾಡುವಂತೆ ಕಾಣಿಸುತ್ತಿತ್ತು. ಪಾರ್ಥನು ವೀರವರ್ಮನನ್ನು ನೋಡಿ "ಮಹಾಭಾಗ, ನನ್ನ ಅಶ್ವಗಳು ನೀರಿನಲ್ಲಿ ಈಜಿ ನದಿಯನ್ನು ದಾಟಿಬಿಟ್ಟವು. ದೋಣಿಗಳಿಂದ ನನ್ನ ಸೈನ್ಯವನ್ನು ಆಚೆಗೆ ದಾಟಿಸು" ಎಂದನು. ವೀರವರ್ಮನು ಅದರಂತೆಯೇ ದೋಣಿಗಳ ಮೂಲಕ ಸೇನೆಯನ್ನು ದಾಟಿಸಿದನು. ಜನಮೇಜಯ, ಪಾರ್ಥನ ಸೇನೆಯೆಲ್ಲವೂ ದೋಣಿಗಳಿಂದ ಆ ನದಿಯನ್ನು ದಾಟಿತು.

# ಚಂದ್ರಹಾಸನ ಉಪಾಖ್ಯಾನ

ಜೈಮಿನಿಮುನಿಗಳು ಹೇಳಿದರು: ಜನಮೇಜಯ, ಮಹಾಗಣಪತಿಯನ್ನು ವಂದಿಸಿ ಮುಂದಿನ ಕಥೆಯನ್ನು ಹೇಳುತ್ತೇನೆ, ಕೇಳು. ಸಾರಸ್ವತಪುರದಿಂದ ಹೊರಟಿದ್ದ ಆ ಅಶ್ವಗಳು ವಾಯುವೇಗದಿಂದ ಮುಂದೆ ಹೋಗತೊಡಗಿದವು. ಚಂದ್ರನಂತೆ ಶುಭ್ರವರ್ಣದ ಆ ಕುದುರೆಗಳು ಚಂದ್ರಹಾಸನ ಕುಂತಲಪುರದ ಕಡೆಗೆ ಧಾವಿಸಿದವು. ಅವನ್ನು ಹಿಂಬಾಲಿಸಿ ಶ್ರೀಕೃಷ್ಣ, ಪ್ರದ್ಯುಮ್ನ, ಅರ್ಜುನ, ಹಂಸಧ್ವಜ, ತಾಮ್ರಧ್ವಜ ಅರ್ಜುನಪುತ್ರನಾದ ಬಭ್ರುವಾಹನ, ವೃಷಕೇತು ಮೊದಲಾದವರು ಹೋದರು. ಸ್ವಲ್ಪಕಾಲದಲ್ಲಿಯೇ ಅಶ್ವಗಳು ಕಾಣೆಸದಾದವು. ಆಗ ದಿಗ್ಭ್ರಾಂತರಾದ ಅರ್ಜುನಾದಿಗಳು "ನಮ್ಮ ಕುದುರೆಗಳೆಲ್ಲಿ? ಯಾರು ಒಯ್ದರು? ಪಾತಾಳಕ್ಕೆ ಹೋದವೆ, ಆಕಾಶಕ್ಕೆ ನೆಗೆದವೆ? ಕತ್ತನ್ನು ಆಕಾಶದ ಕಡೆಗೆ ಎತ್ತಿಕೊಂಡಿದ್ದವಲ್ಲವೆ?" ಎಂದು ಮಾತಾಡಿಕೊಳ್ಳುತ್ತ ಮೇಲಕ್ಕೆ ನೋಡಿದರು. ಆಕಾಶದಲ್ಲಿ ಮಹಾತೇಜಸ್ವಿಯಾಗಿ ಎರಡನೆಯ ಸೂರ್ಯನೋ ಎಂಬಂತೆ ಬೆಳಗುತ್ತಿದ್ದ ಒಬ್ಬ ಪುರುಷನು ಗೋಚರಿಸಿದನು. ಆತನು ಮುನಿಶ್ರೇಷ್ಠನೂ ವೇದವೇದಾಂಗಪಾರಂಗತನೂ ಕಲಹಪ್ರಿಯನೂ ಆದ ನಾರದನಾಗಿದ್ದನು! ನಾರದನು ವಿಷ್ಣುಭಕ್ತರಲ್ಲಿ ಅಗ್ರಗಣ್ಯನು. ಪರಮಭಕ್ತಿಯಿಂದ 'ಕೃಷ್ಣ ಮಾಧವ ಗೋವಿಂದ ನೃಸಿಂಹ ಮಧುಸೂದನ' ಎಂದು ಮನಸ್ಸಿನಲ್ಲಿ ಜಪಿಸುತ್ತಿದ್ದನು. ಅರ್ಜುನಾದಿಗಳೆಲ್ಲರೂ ನಾರದಮುನಿಗೆ ನಮಸ್ಕರಿಸಿದರು. ಅರ್ಜುನನು ಭಕ್ತಿ ಗೌರವಗಳಿಂದ ನಾರದನನ್ನು ಕುರಿತು "ಪೂಜ್ಯರು ಆಗಮಿಸಿದ್ದು ಎಲ್ಲಿಂದ? ನಮ್ಮ ಅಶ್ವಗಳು ತಮಗೆ ಗೋಚರಿಸಿದವೆ?" ಎಂದು ಕೇಳಿದನು. ಆಗ ನಾರದಮುನಿಯು "ಅರ್ಜುನ, ನಿನ್ನ ಅಶ್ವಗಳು ಕುಂತಲಪುರಕ್ಕೆ ಹೋದವು. ಆ ನಗರವನ್ನು ಚಂದ್ರಹಾಸನೆಂಬ ವಿಷ್ಣುಭಕ್ತನು ಪಾಲಿಸುತ್ತಿದ್ದಾನೆ. ಆತನಿಗೆ ಕುಂತಲರಾಜನು ರಾಜ್ಯವನ್ನೊಪ್ಪಿಸಿ ಅರಣ್ಯಕ್ಕೆ ಹೋದನು. ಧೃಷ್ಟಬುದ್ಧಿಯೆಂಬ ಮಂತ್ರಿಯ ಮಗಳನ್ನು ಚಂದ್ರಹಾಸನು ಮದುವೆಯಾಗಿದ್ದಾನೆ. ಆತನು ಕೇರಳಾಧಿಪತಿಯ ಪುತ್ರನು. ಕುಲಿಂದನು ಅವನನ್ನು ಪೋಷಿಸಿದನು. ಲಕ್ಷ್ಮೀಪತಿಯ ಅನುಗ್ರಹದಿಂದ ಚಂದ್ರಹಾಸನು ಕುಂತಲಪುರಿಯನ್ನು ಪಡೆದು ಅದನ್ನು ಪಾಲಿಸುತ್ತಿದ್ದಾನೆ. ಮಹಾಬಾಹುವಾದ ಚಂದ್ರಹಾಸನು ವೀರಾಗ್ರಣಿ. ಅವನಿಗೆ ಸದೃಶನಾದ ಇನ್ನೊಬ್ಬ ಯೋಧನೇ ಇಲ್ಲ. ಇಲ್ಲಿರುವ ಈ ನೃಪಾಲರು ಆತನ ಹದಿನಾರನೆಯ ಒಂದು ಅಂಶವೂ ಅಲ್ಲ! ಎಂದು ಹೇಳಿದನು. ಅರ್ಜುನನು ವಿಸ್ಮಿತನಾಗಿ "ನಾರದಮುನಿಗಳೆ, ಬಲಾಢ್ಯನಾದ ಈ ಚಂದ್ರಹಾಸನು ಯಾರು? ಇವನ ಚರಿತ್ರೆ ಆಶ್ಚರ್ಯಕರವಾಗಿ ಕಾಣುತ್ತದೆ. ಅದನ್ನು ವಿಸ್ತರಿಸಿ ಹೇಳೋಣವಾಗಲಿ. ಆ ಭೂಪತಿಯು ವಾಸುದೇವನ ಭಕ್ತನಲ್ಲವೆ?" ಎಂದು ಕೇಳಿದನು. ಆಗ ನಾರದನು "ಅರ್ಜುನ, ಅವನ ಚರಿತ್ರೆಯನ್ನು ಕೇಳಲು ನಿನಗೆ ಸಮಯವೆಲ್ಲಿದೆ? ಅಶ್ವಗಳು ಈಗಲೇ ದಾರಿ ತಪ್ಪಿವೆ! ಧರ್ಮರಾಜನು ಹಸ್ತಿನಾಪುರದಲ್ಲಿ ಚಿಂತಾಕ್ರಾಂತನಾಗಿರುವನು" ಎಂದನು. ಅರ್ಜುನನು "ಹಾಗಾದರೆ, ನಾರದರೆ, ಕುರು ಪಾಂಡವಸೇನೆಗಳ ಮಧ್ಯದಲ್ಲಿ ನಾನು ಸ್ವಸ್ಥಚಿತ್ತನಾಗಿ ಶ್ರೀಕೃಷ್ಣನ ಮುಖದಿಂದ ಗೀತಾಕಥಾನಕವನ್ನು ಕೇಳಿದ್ದು ಹೇಗೆ? ಯಾರಿಗೆ ಸತ್ಕಥೆಯನ್ನು ಕೇಳಲು ಸಮಯವಿಲ್ಲವೋ ಅವರನ್ನು ಕಾಲವಂಚಿತರೆಂದು ತಿಳಿಯಬೇಕು. ಅವರು

ಅಲ್ಪಜೀವಿಗಳೇ ಸರಿ. ಆದ್ದರಿಂದ ಹೇಗಾದರೂ ಈ ಚಂದ್ರಹಾಸನ ಕಥೆಯನ್ನು ನೀವು ಹೇಳಬೇಕು. ಮುನಿಗಳೆ, ನನ್ನ ಕುದುರೆಯು ಎಲ್ಲಿಗಾದರೂ ಹೋಗಲಿ, ಯಜ್ಞವು ನಡೆಯಲಿ ಬಿಡಲಿ. ಶ್ರೇಯಸ್ಸನ್ನು ಬಯಸತಕ್ಕವರು ವಿಷ್ಣುವಿನ ಚರಿತೆಯನ್ನು ಆಲಿಸಲೇಬೇಕು. ಈ ಸತ್ಕಥಾಶ್ರವಣವು ನೂರು ಅಶ್ವಮೇಧಗಳಿಗೆ ಸಮಾನವಾದದ್ದು" ಎಂದು ನುಡಿದನು. ಆಗ ನಾರದನು ಚಂದ್ರಹಾಸನ ಕಥೆಯನ್ನು ಈ ಪ್ರಕಾರವಾಗಿ ವಿವರಿಸಿದನು:

ಅರ್ಜುನ, ಹಿಂದೆ ಕೇರಳದೇಶದ ಒಬ್ಬ ರಾಜನು ಅತ್ಯಂತ ಧಾರ್ಮಿಕನಾಗಿ ಪ್ರಜೆಗಳನ್ನು ಪಾಲಿಸುತ್ತಿದ್ದನು. ಅವನಿಗೆ ಮೂಲನಕ್ಷತ್ರದಲ್ಲಿ ಭಾಗ್ಯಶಾಲಿಯಾದ ಒಬ್ಬ ಪುತ್ರನು ಜನಿಸಿದನು. ಅವನು ಜನಿಸಿದ ಕೆಲವು ದಿನಗಳಲ್ಲಿಯೇ ರಾಜನ ವೈರಿಗಳು, ಶ್ಲೇಷ್ಮ ವಾತ ಪಿತ್ತಗಳು ದೇಹವನ್ನು ಆಕ್ರಮಿಸುವಂತೆ, ಆತನನ್ನು ಮುತ್ತಿದರು. ಧಾರ್ಮಿಕನಾದ ಆ ರಾಜನು ಶತ್ರುಗಳೊಡನೆ ಹೋರಾಡಿ ಅಸುವನ್ನು ನೀಗಿದನು. ಪತಿಯು ಪರಲೋಕವನ್ನು ಸೇರಿದ ಸುದ್ದಿಯನ್ನು ಕೇಳಿ ಅವನ ಪತ್ನಿಯು ಸಂತೋಷದಿಂದಲೇ ದೇಹವನ್ನು ತ್ಯಜಿಸಿ ಪತಿಯನ್ನು ಹಿಂಬಾಲಿಸಿದಳು. ಈ ರೀತಿಯಲ್ಲಿ ತಂದೆ ತಾಯಿಗಳನ್ನು ಕಳೆದುಕೊಂಡ ಆ ಶಿಶುವನ್ನು ದಾದಿಯೊಬ್ಬಳು ಕುಂತಲಪುರಕ್ಕೆ ಕರೆದೊಯ್ದಳು. ಆ ಬಾಲಕನೇ ಮುಂದೆ ಆ ನಗರಲಕ್ಷ್ಮಿಗೆ ಶ್ರೇಷ್ಠನಾದ ಪತಿಯಾಗತಕ್ಕವನಾಗಿದ್ದನು. ಅರ್ಜುನ, ಆ ದಾದಿಯು ಕುಂತಲಪುರದಲ್ಲಿ ಧಾನ್ಯವನ್ನು ಕುಟ್ಟುವುದು ಬೀಸುವುದು-ಮುಂತಾದ ಕೆಲಸಗಳನ್ನು ಮಾಡಿ ಬಾಲಕನನ್ನು ಮೂರುವರ್ಷಗಳವರೆಗೆ ಕಷ್ಟಪಟ್ಟು ಸಾಕಿದಳು. ಅವಳು ತನ್ನ ಒಡೆಯನಾದ ಕೇರಳಾಧಿಪತಿಯನ್ನು ಸ್ಮರಿಸಿಕೊಂಡು ಯಾವಾಗಲೂ ಶೋಕತಪ್ತಳಾಗಿದ್ದಳು. ಹೀಗಿರಲು ಆ ಸಾಧ್ವಿಯು ಒಂದು ದಿನ ಸತ್ತು ಹೋದಳು. ಬಾಲಕನು ಅನಾಥನಾದನು. ಅವನಿಗೆ ಮೂರುವರ್ಷಗಳಾಗಿದ್ದವು. ಅವನು ಗೌರವರ್ಣನೂ ಶುಭಲಕ್ಷಣಸಂಯುತನೂ ಆಗಿದ್ದನು. ಬಾಲಕನ ಎಡಗಾಲಿನಲ್ಲಿ ಚಿಕ್ಕದಾದ ಆರನೆಯ ಒಂದು ಬೆರಳಿತ್ತು. ನೆರೆಹೊರೆಯ ಕೆಲವು ಸ್ತ್ರೀಯರು ಮರುಕಗೊಂಡು ಬಹುಪ್ರೀತಿಯಿಂದ ಹುಡುಗನನ್ನು ಸಾಕಿದರು. ಅವನಿಗೆ ಐದುವರ್ಷಗಳಾದವು. ಜೊತೆಯ ಹುಡುಗರೊಡನೆ ಬೀದಿಯಲ್ಲಿ ಆಡುತ್ತ ಅವರೊಡನೆ ಊಟಮಾಡುತ್ತ ಬಾಲಕನು ಬೆಳೆಯುತ್ತಿದ್ದನು. ಕೆಲವು ಹೆಂಗಸರು ಬಾಲಕನನ್ನು ಮನೆಗೆ ಕರೆದುಕೊಂಡು ಹೋಗಿ ಊಟ ಹಾಕುತ್ತಿದ್ದರು. ಕೆಲವರು ಸ್ನಾನಮಾಡಿಸುತ್ತಿದ್ದರು. ಇನ್ನು ಕೆಲವರು ಚಂದನಾದಿ ಸುಗಂಧಗಳನ್ನು ಆತನ ಮೈಗೆ ತೊಡೆಯುತ್ತಿದ್ದರು. ಅರ್ಜುನ, ಆ ಬಾಲಕನನ್ನು ಊರಿನ ಸ್ತ್ರೀಯರು ತಮ್ಮ ಬಳಿಯಲ್ಲಿ ಮಲಗಿಸಿಕೊಂಡು ಸಾಕಿದರು. ಕೆಲವು ಸ್ತ್ರೀಯರು ಆತನಿಗೆ ಅವಶ್ಯಕವಾದ ಅಂಗಿ, ಟೋಪಿ, ಚಪ್ಪಲಿ, ರೇಶ್ಮೆಯ ಉಡಿದಾರ-ಮುಂತಾದುವನ್ನು ಕೊಟ್ಟು ಅಲಂಕರಿಸುತ್ತಿದ್ದರು. ಅವನು ಯಾವಾಗಲೂ ಸುಂದರನಾಗಿಯೂ ಶುಚಿಯಾಗಿಯೂ ಇದ್ದನು.

ಹೀಗಿರಲು ಒಂದುದಿನ ಆ ಬಾಲಕನು ತಿರುಗಾಡುತ್ತ ಆ ನಗರದ ಪ್ರಧಾನನಾದ ಧೃಷ್ಟಬುದ್ಧಿಯ ಮನೆಗೆ ಹೋದನು. ಆ ಮನೆಯಲ್ಲಿ ಅನೇಕ ಮಂದಿ ವಿಪ್ರರೂ ಯೋಗೀಶ್ವರರೂ ಶಾಂತಸ್ವಭಾವದ ಮುನಿಗಳೂ ನೆರೆದಿದ್ದರು. ಅವರು ತೇಜಸ್ವಿಯಾದ

ಈ ಬಾಲಕನನ್ನು ನೋಡಿ ವಿಸ್ಮಿತರಾದರು. ಅನಂತರ ಧೃಷ್ಟಬುದ್ಧಿಯು ಮುನಿಜನಾದಿಗಳಿಗೆ ವಿನಯದಿಂದ ಅರ್ಘ್ಯಾದಿಗಳನ್ನಿತ್ತು ಸತ್ಕರಿಸಿ, ಬಗೆಬಗೆಯ ಅನ್ನ, ಪಾಯಸ, ಹೋಳಿಗೆ, ಕಡಬು, ವಡೆ-ಮುಂತಾದವುಗಳನ್ನು ಬಡಿಸಿ ಭೋಜನಮಾಡಿಸಿದನು. ಅವರೆಲ್ಲರೊಡನೆ ಮುನಿಜನರ ಇಷ್ಟದಂತೆ ಈ ಬಾಲಕನೂ ಊಟ ಮಾಡಿದನು. ಭೋಜನವಾದ ಮೇಲೆ ಧೃಷ್ಟಬುದ್ಧಿಯು ವಸ್ತ್ರಾಲಂಕಾರಗಳನ್ನಿತ್ತು ಸಕಲರನ್ನೂ ಉಪಚರಿಸಿದನು. ಆಮೇಲೆ ಸಂತೃಪ್ತರಾದ ಆ ಮುನಿಜನರು ಪ್ರಧಾನನನ್ನು ಕುರಿತು "ಧೃಷ್ಟಬುದ್ಧಿ, ನಿನ್ನ ಸತ್ಕಾರದಿಂದ ತೃಪ್ತರಾದೆವು. ನಿನ್ನನ್ನು ಅಭಿನಂದಿಸುತ್ತೇವೆ. ಚಿರಕಾಲದವರೆಗೆ ಬಾಳು; ಸುಖಿಯಾಗು. ಇಲ್ಲಿ ಐದುವರ್ಷದ ಒಬ್ಬ ಬಾಲಕನನ್ನು ನೀನೂ ನೋಡಿದೆಯಲ್ಲವೆ? ಅವನು ಯಾರು? ಯಾರ ಮಗ? ಎಲ್ಲಿಂದ ಬಂದಿದ್ದಾನೆ, ಹೇಳು" ಎಂದು ಕೇಳಿದರು. ಧೃಷ್ಟಬುದ್ಧಿಯು ಮುಗುಳ್ನಗೆಯಿಂದ "ಮಹಾತ್ಮರೆ, ಈ ಪಟ್ಟಣದಲ್ಲಿ ಅನಾಥರಾದ ಎಷ್ಟು ಮಂದಿ ಹುಡುಗರಿಲ್ಲ? ರಾಜಕಾರ್ಯದಲ್ಲಿ ಮುಳುಗಿರುವ ನನಗೆ ಅವನು ಯಾರೆಂಬುದು ತಿಳಿಯದು" ಎಂದು ಹೇಳಿದನು. ಆಗ ಮುನಿಗಳು "ಈ ಬಾಲಕನು ಸುಂದರಾಂಗನೂ ಶ್ರೇಷ್ಠಲಕ್ಷಣಯುಕ್ತನೂ ಆಗಿದ್ದಾನೆ. ಇವನಲ್ಲಿ ರಾಜಚಿಹ್ನೆಗಳಿವೆ. ಧೃಷ್ಟಬುದ್ಧಿ, ನೀನು ಈ ಹುಡುಗನನ್ನು ಚೆನ್ನಾಗಿ ಪಾಲಿಸು. ಮುಂದೆ ಇವನು ನಿನ್ನ ಸಂಪತ್ತುಗಳನ್ನು ರಕ್ಷಿಸತಕ್ಕವನಾಗುವನು" ಎಂದು ಹೇಳಿ ಅವನಿಂದ ಬೀಳ್ಕೊಂಡು ಹೊರಟುಹೋದರು.

ಮುನಿಗಳ ಮಾತನ್ನು ಕೇಳಿ ಧೃಷ್ಟಬುದ್ಧಿಗೆ ಬಹಳ ಅಸಮಾಧಾನವಾಯಿತು. ಅವನು ಕುಪಿತನಾಗಿ "ಇದೇನು? ಪೂಜ್ಯರಾದ ಮುನಿಗಳು ಈ ರೀತಿ ಹೇಳುತ್ತಾರೆ!" ಎಂದು ಚಿಂತಿಸಿ ಚಿಂತಿಸಿ ತಳಮಳಿಸಿದನು. "ಈ ಹುಡುಗನು ನನ್ನ ಸಂಪತ್ತುಗಳಿಗೆ ಅಧಿಪತಿಯಾಗುವನು- ಎಂದು ಮುನಿಗಳು ಹೇಳಿದರು. ನಾನು ಅವರ ಮಾತನ್ನು ಅಲ್ಲಗಳೆಯುವುದು ಹೇಗೆ?" ಎಂದು ಸಂತಪ್ತನಾಗಿ ಆ ಬಾಲಕನನ್ನು ಕೊಲ್ಲಿಸಬೇಕೆಂದು ನಿಶ್ಚಯಿಸಿದನು. ಆ ಮಂತ್ರಿಯು ಕಟುಕರನ್ನು ಕರೆಯಿಸಿ "ಎಲೈ ಕಟುಕರೆ, ಆ ಹುಡುಗನನ್ನು ದಟ್ಟವಾದ ಅರಣ್ಯಕ್ಕೆ ಕರೆದೊಯ್ದು ಕೊಂದು ಹಾಕಿರಿ. ನೀವು ಕೊಂದದ್ದಕ್ಕೆ ಕುರುಹಾಗಿ ಯಾವುದಾದರೂ ದೇಹದ ಅಂಗವನ್ನು ತಂದು ತೋರಿಸಬೇಕು. ಅದು ನಮಗೆ ತೃಪ್ತಿಯನ್ನುಂಟುಮಾಡುವುದು. ಆಗ ನಿಮಗೆ ಕೊಡಗಟ್ಟಲೆ ಹಾಲನ್ನು ಕೊಡುವ ಎಮ್ಮೆಗಳನ್ನು ಪಾರಿತೋಷಿಕವಾಗಿ ಕೊಡುತ್ತೇವೆ" ಎಂದು ಆಜ್ಞಾಪಿಸಿದನು.

ಧೃಷ್ಟಬುದ್ಧಿಯ ಮಾತನ್ನು ಕೇಳಿ ಸಂತುಷ್ಟರಾದ ಚಾಂಡಾಲರು ಆ ಶಿಶುವಿಗೆ ಆಸೆಯನ್ನು ತೋರಿಸಿ ಉಪಾಯವಾಗಿ ಒಂದು ದಟ್ಟವಾದ ಅಡವಿಗೆ ಕರೆದುಕೊಂಡು ಹೋದರು. ಅಡವಿಯಲ್ಲಿ ಭೀಕರವಾದ ಪಕ್ಷಿಗಳೂ ಮುಳ್ಳುಗಳೂ ತುಂಬಿದ್ದವು. ಧಾರ್ಮಿಕನಾದ ರಾಜನೊಬ್ಬನ ಕುಮಾರನೂ ಮುಗ್ಧನಾದ ನಗೆಯನ್ನು ಬೀರುತ್ತಿದ್ದವನೂ ಆದ ಆ ಬಾಲಕನನ್ನು ಅಡವಿಗೆ ಕರೆದೊಯ್ದು ಚಾಂಡಾಲರು ಹರಿತವಾದ ಆಯುಧಗಳನ್ನು ಒರೆಗಳಿಂದ ಹಿರಿದರು. ಅರ್ಜುನ, ಆ ಬಾಲಕನು ಹಿಂದೆ ನಗರದ ಬೀದಿಯಲ್ಲಿ ಆಡುತ್ತಿದ್ದಾಗ ಅವನಿಗೆ ಒಂದು ಶಾಲಗ್ರಾಮವು ದೊರಕಿತ್ತು. ಅದನ್ನು ಅವನು ಬಾಯಲ್ಲಿ

ಇಟ್ಟುಕೊಂಡಿರುತ್ತಿದ್ದನು. ಜೊತೆಯ ಹುಡುಗರು ಗೋಲಿಯನ್ನಾಡುವಾಗ ಈತನನ್ನು ಕುರಿತು "ಗೆಳೆಯ, ದುಂಡಾದ ಈ ಕಲ್ಲುಗೋಲಿಯಿಂದ ಎಷ್ಟು ಚೆನ್ನಾಗಿ ಆಡುತ್ತೀಯೆ! ಇದು ಯಾವುದು?" ಎಂದು ಕೇಳುತ್ತಿದ್ದರು. ಆಗ ಈ ಬಾಲಕನು "ಗೆಳೆಯರೆ, ಬಣ್ಣಬಣ್ಣದ ಬೇರೆಬೇರೆ ಗೋಲಿಗಳು ಎಷ್ಟೋ ಇವೆ. ಆದರೆ ಇಷ್ಟುಸುಂದರವಾಗಿ ನುಣುಪಾದ ಬೇರೊಂದು ಗೋಲಿಯನ್ನು ನಾನು ನೋಡಿಯೇ ಇಲ್ಲ! ಈ ಬಣ್ಣದ ಗೋಲಿಗಳು ಒಡೆದು ಹೋದಾಗ ಈ ಗೋಲಿಯಿಂದ ಆಡುವೆನು" ಎಂದು ಹೇಳುತ್ತಿದ್ದನು. ಸದಾ ಆ ಶಾಲಗ್ರಾಮವನ್ನು ಬಾಯಲ್ಲಿಟ್ಟುಕೊಂಡು ಸಂತೋಷಪಡುತ್ತಿದ್ದನು. ಪಾರ್ಥ, ಹಿಂದೆ ನನ್ನ ಅನುಗ್ರಹದಿಂದ ಧ್ರುವನು ವಿಷ್ಣುವನ್ನು ಹೇಗೆ ಸ್ತುತಿಸಿದನೋ ಅದೇ ರೀತಿಯಲ್ಲಿ ಈ ಬಾಲಕನು ದೇವೇಶನಾದ ಶ್ರೀಮನ್ನಾರಾಯಣನನ್ನು ಸ್ತುತಿಸಲಾರಂಭಿಸಿದನು. "ಕೃಷ್ಣ ಕೃಷ್ಣ ಜಗನ್ನಾಥ ವಾಸುದೇವ ಜನಾರ್ದನ, ಚಂಡಾಲರು ಹರಿತವಾದ ಕತ್ತಿಗಳಿಂದ ನನ್ನನ್ನು ಸಂಹರಿಸುವರು. ಹೇ ಜಗದೀಶ್ವರ, ಆನಂದಸ್ವರೂಪನೆ, ನನ್ನನ್ನು ರಕ್ಷಿಸು. ಸರ್ವವ್ಯಾಪಿಯೆ, ನಮೋಸ್ತುತೇ. ಹಿಂದೆ ಧ್ರುವನನ್ನು ರಕ್ಷಿಸಿದವನು ನೀನೇ. ಪ್ರಹ್ಲಾದನನ್ನೂ ಗಜೇಂದ್ರನನ್ನೂ ಪಾಲಿಸಿದ್ದೀಯೆ. ಅನಾಥರಿಗೂ ನಿರ್ಗತಿಕರಿಗೂ ದೀನರಿಗೂ ನೀನೇ ನಾಥನೆಂದು ಸ್ತುತಿಸಲ್ಪಡುತ್ತಿರುವೆ. ನನಗೆ ತಾಯಿ ಇಲ್ಲ. ತಂದೆ ಇಲ್ಲ, ಬಂಧುಬಳಗವಿಲ್ಲ. ಹೇ ಗೋವಿಂದ, ನೀನು ಕೈಬಿಟ್ಟರೆ ನನ್ನನ್ನು ಕಾಪಾಡುವವರು ಯಾರು? ಈ ಕಷ್ಟದಿಂದ ನನ್ನನ್ನು ಪಾರುಮಾಡು. ಸರ್ವವ್ಯಾಪಿಯೆ, ನಮೋಸ್ತುತೇ" ಎಂದು ಭಗವಂತನನ್ನು ಪ್ರಾರ್ಥಿಸಿದನು. ಆಗ ಭಗವಂತನು ಚಂಡಾಲರ ಮನಸ್ಸನ್ನು ಪರಿವರ್ತಿಸಿದನು. ಅವರು ತಮ್ಮಲ್ಲಿಯೇ "ಈ ಹುಡುಗನು ಎಷ್ಟು ಸುಂದರನಾಗಿದ್ದಾನೆ! ಎಂತಹ ಸುಕುಮಾರ! ಕಣ್ಣುಗಳು ವಿಶಾಲವಾಗಿವೆ. ಬಾಹುಗಳು ನೀಳವಾಗಿವೆ. ಮನೋಹರವಾದ ಆಕೃತಿ. ಇವನನ್ನು ಕಾಡಿನಲ್ಲಿ ಕೊಂದುಹಾಕಬೇಕೆಂದು ಧೃಷ್ಟಬುದ್ಧಿಯು ಏಕೆ ಹೇಳಿರಬಹುದು? ಯಾವ ಯಾವುದೋ ಪಾಪಕರ್ಮವನ್ನು ಮಾಡಿ ಈಗ ಚಾಂಡಾಲರಾಗಿ ಹುಟ್ಟಿದ್ದೇವೆ. ಈ ಬಾಲಕನನ್ನು ಕೊಂದರೆ ಇನ್ನು ಎಂತಹ ಘೋರಜನ್ಮವನ್ನು ಪಡೆಯುತ್ತೇವೆಯೊ! ಈ ಹುಡುಗನು ಯಾವ ಪಾಪದಿಂದ ತಂದೆತಾಯಿಗಳನ್ನು ಕಳೆದುಕೊಂಡನೊ!" ಎಂದು ಹೇಳಿಕೊಳ್ಳುತ್ತ ಆ ಬಾಲಕನನ್ನು ನೋಡುತ್ತ ನಿಂತರು. ಅವರಿಗೆ ಬಾಲಕನ ಎಡಗಾಲಲ್ಲಿದ್ದ ಚಿಕ್ಕದಾದ ಆರನೆಯ ಬೆರಳು ಗೋಚರಿಸಿತು. "ಎಲಾ! ಈ ಬೆರಳನ್ನು ಕತ್ತರಿಸಿ ಒಯ್ದು ದುರುಳನಾದ ಧೃಷ್ಟಬುದ್ಧಿಗೆ ಕುರುಹೆಂದು ತೋರಿಸೋಣ" ಎಂದು ಆಲೋಚಿಸಿ ಆ ಕಟುಕರು ಆ ಬೆರಳನ್ನು ಕತ್ತರಿಸಿ ಬಾಲಕನನ್ನು ಅಲ್ಲಿಯೇ ಬಿಟ್ಟು ಬೇಗಬೇಗನೆ ನಗರಕ್ಕೆ ಹೋದರು. ಧೃಷ್ಟಬುದ್ಧಿಯನ್ನು ಕಂಡು ನಮಸ್ಕರಿಸಿ ಬೆರಳನ್ನು ತೋರಿಸಿದರು. ಧೃಷ್ಟಬುದ್ಧಿಯು ಮನಸ್ಸಿನಲ್ಲಿಯೇ ನಲಿಯುತ್ತ "ಭಲಾ! ಆ ಮುನಿಗಳ ಮಾತನ್ನು ಸುಳ್ಳುಮಾಡಿದೆನು!" ಎಂದುಕೊಂಡನು. ಕಟುಕರಿಗೆ ಎಮ್ಮೆಗಳನ್ನು ಕೊಟ್ಟು ಸಂತೋಷಪಡಿಸಿದನು.

# ಚಂದ್ರಹಾಸನ ವಿದ್ಯಾಭ್ಯಾಸ

ನಾರದ ಮುನಿಯು ಇಂತೆಂದನು; ಪಾರ್ಥ, ಆ ಬಾಲಕನು ಘೋರಾರಣ್ಯದಲ್ಲಿ ನಿನ್ನ ಮಿತ್ರನಾದ ಶ್ರೀಕೃಷ್ಣನನ್ನು ಸ್ಮರಿಸಿದ ಮಾತ್ರದಿಂದಲೇ, ಚಂಡಾಲರಿಗೆ ಮರುಕ ಉಂಟಾಯಿತು. ಅವರು ಆತನನ್ನು ವಧಿಸಲಿಲ್ಲ. ಹುಡುಗನಾಗಲಿ ತರುಣನಾಗಲಿ ಮುದುಕನಾಗಲಿ ಹೆಂಗಸಾಗಲಿ ಗಂಡಸಾಗಲಿ, ದೇವಕೀಸುತನನ್ನು ಅಹೋರಾತ್ರವೂ ಸ್ಮರಿಸುತ್ತಿದ್ದರೆ ಎಲ್ಲ ಕಷ್ಟವೂ ತೊಲಗುವುದು; ಸಂದೇಹವಿಲ್ಲ. ಆ ಹುಡುಗನ ಆರನೆಯ ಬೆರಳನ್ನು ಕತ್ತರಿಸಲಾಗಿ ರಕ್ತವು ಹರಿಯತೊಡಗಿತು. ಅವನು ದುಃಖಾರ್ತನಾಗಿ ಗಟ್ಟಿಯಾಗಿ ಅಳತೊಡಗಿದನು: "ದೇವ ದೇವ, ಈಶ, ಕೃಷ್ಣ, ಸ್ವಾಮಿ, ಕೃಪಾನಿಧಿ ನನ್ನನ್ನು ಪಾಲಿಸು. ಹೇ ಸರ್ವವ್ಯಾಪಿ, ಈ ಕಷ್ಟದಿಂದ ನನ್ನನ್ನು ಬಿಡಿಸು. ನಮೋಸ್ತುತೇ" ಎಂದು ಬೇಡುತ್ತ ರೋದಿಸಿದನು. ವನದಲ್ಲಿದ್ದ ಹೆಣ್ಣು ಜಿಂಕೆಗಳು ಕನಿಕರಪಡುತ್ತ ಮೆಲ್ಲಮೆಲ್ಲನೆ ಬಂದು ಆ ಹುಡುಗನ ಕಾಲನ್ನು ನೆಕ್ಕತೊಡಗಿದವು. "ನಮ್ಮ ಪತಿಯಾದ ಹರಿಣವು ತನ್ನ ಒಡೆಯನಾದ ಚಂದ್ರನನ್ನು ಬಿಟ್ಟು ಕಾಮಾಸಕ್ತನಾಗಿ ಅರಣ್ಯಕ್ಕೆ ಹೋಗಿಬಿಟ್ಟಿದೆ! ವಾಹನವಿಲ್ಲದ್ದರಿಂದ ಚಂದ್ರನು ಭೂಲೋಕಕ್ಕೆ ಬಂದು ಈ ಬಾಲಕನ ಮುಖರೂಪವನ್ನು ಧರಿಸಿ ಕಣ್ಣೀರನ್ನು ಸುರಿಸುತ್ತಿದ್ದಾನೆ! ಚಂದ್ರನನ್ನು ಸಮಾಧಾನಪಡಿಸಬೇಕು" ಎಂಬ ಅಭಿಪ್ರಾಯದಿಂದಲೋ ಎಂಬಂತೆ ಹೆಣ್ಣುಜಿಂಕೆಗಳು ಬಾಲಕನ ಪಾದವನ್ನು ನೆಕ್ಕಿದವು. ಹಕ್ಕಿಗಳಿಗೂ ದುಃಖವಾಗಿ ಅವು ತಮ್ಮ ರೆಕ್ಕೆಗಳನ್ನು ಹರಡಿ ಬಾಲಕನಿಗೆ ನೆರಳನ್ನು ಮಾಡಿಕೊಟ್ಟವು. ಗೂಬೆಗಳು ದುಃಖದಿಂದ ತಮ್ಮ ಗೂಡುಗಳಲ್ಲಿಯೇ ಇದ್ದವು. ಹೊರಗೆ ಬರಲಿಲ್ಲ. ಪಾರಿವಾಳಗಳು ಶೋಕಾತಿಶಯದಿಂದ ಕಠೋರಸ್ವರದಲ್ಲಿ ಕೂಗುತ್ತ ಕಲ್ಲು ಹರಳುಗಳನ್ನು ನುಂಗಿದವು! ಹೀಗಿರುವಾಗ ಆ ಪ್ರದೇಶದ ಅಧ್ಯಕ್ಷನಾದ ಕುಲಿಂದ ಎಂಬವನು ರಕ್ಷಣಾರ್ಥವಾಗಿ ತಿರುಗುತ್ತ ಆ ವನಕ್ಕೆ ಬಂದನು. ಅಳುತ್ತಿದ್ದ ಹುಡುಗನನ್ನು ನೋಡಿದನು. ಬಾಲಕನು "ರಾಮ, ಗೋವಿಂದ, ಲಕ್ಷ್ಮೀಪತಿ, ನನ್ನನ್ನು ಸಲಹು. ದ್ರೌಪದಿಯನ್ನು ರಕ್ಷಿಸಿದವನಲ್ಲವೆ ನೀನು? ತಾಯಿ ಇಲ್ಲದೆ ವನದಲ್ಲಿ ಅನಾಥನಾದ ಈ ಬಾಲಕನನ್ನು ಏಕೆ ಉಪೇಕ್ಷಿಸುತ್ತೀಯೆ? ನನ್ನನ್ನು ಉಪೇಕ್ಷಿಸುವುದು ನಿನಗೆ ಲಜ್ಜಾದಾಯಕವಲ್ಲವೆ? ನಿನ್ನ ಭಕ್ತರು ಎಂದಿಗೂ ನಾಶವಾಗುವುದಿಲ್ಲವೆಂಬ ಮಾತನ್ನು ಹಿರಿಯರ ಬಾಯಿಂದ ನಾನು ಕೇಳಿದ್ದೇನೆ" ಎಂದು ಮೊರೆಯಿಡುತ್ತಿರುವುದನ್ನು ಕುಲಿಂದರಾಜನು ಕೇಳಿ ವಿಸ್ಮಿತನಾಗಿ ಕುದುರೆಯಿಂದಿಳಿದು ಹತ್ತಿರಕ್ಕೆ ಬಂದನು. ಆತನು ಹುಡುಗನ ಕಣ್ಣೀರನ್ನೊರಸಿ ಸಂತೈಸುತ್ತ "ಮಗು, ನಿನ್ನ ತಂದೆತಾಯಿಗಳು ಯಾರು? ನಿನ್ನ ಸ್ನೇಹಿತರು ಎಲ್ಲಿ? ನಿರ್ಜನವಾದ ಈ ಕಾಡಿಗೆ ಹೇಗೆ ಬಂದೆ? ಎಲ್ಲವನ್ನೂ ತಿಳಿಸು" ಎಂದು ಕೇಳಿದನು. ಬಾಲಕನು "ಸ್ವಾಮಿ, ಶ್ರೀಕೃಷ್ಣನೇ ನನ್ನ ತಂದೆತಾಯಿಗಳು. ಅವನೇ ನನ್ನನ್ನು ಸಲಹಿದನು. ಆತನನ್ನು ಕಾಣದೆ ಅಳುತ್ತಿದ್ದೇನೆ" ಎಂದನು.

ಜನಮೇಜಯ, ನಾರದನು ಮತ್ತೆ ಹೇಳಿದನು: ಅರ್ಜುನ, ಕುಲಿಂದರಾಜನು ತನ್ನ ಮನಸ್ಸಿನಲ್ಲಿ "ನನಗೆ ಮಕ್ಕಳಿಲ್ಲ. ವಿಷ್ಣುಭಕ್ತನಾದ ಈ ಬಾಲಕನೇ ನನಗೆ ಮಗನಾಗಿ

ಬಾಳಲಿ" ಎಂದು ಆಲೋಚಿಸಿ ಆ ಬಾಲಕನನ್ನು ಅಪ್ಪಿಕೊಂಡು ಸಂತೈಸಿ ತನ್ನ ಕುದುರೆಯ ಮೇಲೆ ಕುಳ್ಳಿರಿಸಿಕೊಂಡು ಪರಿವಾರದೊಂದಿಗೆ ಹೊರಟನು. ಕುಲಿಂದರಾಜನು ತನಗೆ ಪುತ್ರನೊಬ್ಬನು ದೊರಕಿದನೆಂದು ಹರ್ಷದಿಂದ ಭುಜವನ್ನಲ್ಲಾಡಿಸುತ್ತ, ನನ್ನ ಪಾಪಕರ್ಮವು ತೊಲಗಿ ಇಂದು ಪುಣ್ಯೋದಯವಾಯಿತು!" ಎಂದು ಹೇಳಿಕೊಳ್ಳುತ್ತ ತನ್ನ ರಾಜಧಾನಿಯಾದ ಚಂದನಾವತಿಗೆ ಪ್ರಯಾಣ ಮಾಡಿದನು. ಅಲ್ಲಿ ಅರಮನೆಯನ್ನು ಪ್ರವೇಶಿಸಿ ಬುದ್ಧಿಮತಿಯಾದ ತನ್ನ ರಾಣಿಗೆ ಮಗುವನ್ನು ತೋರಿಸಿದನು. ನಡೆದ ವೃತ್ತಾಂತವನ್ನು ಹೇಳಲಾಗಿ ಅವಳು ಹರ್ಷದಿಂದ "ಈ ದಿನ ನನ್ನ ಶೋಕವು ತೊಲಗಿತು. ಇಷ್ಟಾರ್ಥಗಳೆಲ್ಲವೂ ಫಲಿಸಿದವು. ನಾನು ಪವಿತ್ರಳಾದೆ" ಎಂದು ಹೇಳಿ ಹಿಗ್ಗಿದಳು. ಮೇಧಾವಿಯಾದ ಕುಲಿಂದರಾಜನು ಒಂದು ಉತ್ಸವವನ್ನೇ ಏರ್ಪಡಿಸಿದನು. ವೇದವಿದ್ವಾಂಸರಾದ ಬ್ರಾಹ್ಮಣರನ್ನು ಪೂಜಿಸಿದನು. ಜ್ಯೋತಿಷ್ಕರು ಬಾಲಕನನ್ನು ಪರೀಕ್ಷಿಸಿ ರಾಜನನ್ನು ಕುರಿತು "ಕುಲಿಂದರಾಜ, ನಿನ್ನ ಈ ಬಾಲಕನು ವಿದ್ವಾಂಸನೂ ಭಾಗ್ಯಶಾಲಿಯೂ ವಿಷ್ಣುಭಕ್ತನೂ ಕೀರ್ತಿಶಾಲಿಯೂ ಆಗುವನು. ಮುಗುಳ್ನಗೆಯನ್ನು ಬೀರುವ ರಮಣೀಯವಾದ ಇವನ ಮುಖದೆದುರಿಗೆ ಚಂದ್ರನು ಕೀಳೆನಿಸುವನು. ಇವನು ನಕ್ಕರೆ ಚಂದ್ರನು ಭೂಮಿಗೆ ಬಿದ್ದಂತಾಗುವುದು! ಆದ್ದರಿಂದ ಬಾಲಕನಿಗೆ ಚಂದ್ರಹಾಸನೆಂದು ನಾಮಕರಣ ಮಾಡು. ಇವನು ಭೂಪಾಲನಾಗುವನು" ಎಂದು ತಿಳಿಸಿದರು.

ಪಾರ್ಥ, ಅಲ್ಲಿಂದ ಮುಂದೆ ಚಂದ್ರಹಾಸನು ಕುಲಿಂದರಾಜನ ಮನೋರಥವನ್ನು ಹಿಗ್ಗಿಸುತ್ತ ಶುಕ್ಲಪಕ್ಷದ ಚಂದ್ರನಂತೆ ಬೆಳೆದನು. ಆ ರಾಜ್ಯದಲ್ಲಿ ಸುಭಿಕ್ಷವು ನೆಲೆಸಿತು. ಪ್ರಜೆಗಳು ಆನಂದದಿಂದಿದ್ದರು. ಹಸುಗಳು ಪುಷ್ಕಳವಾಗಿ ಹಾಲನ್ನು ಕರೆದವು. ಚಂದ್ರಹಾಸನಿಗೆ ಏಳು ವರ್ಷಗಳಾದವು. ಪಾಠಶಾಲೆಯಲ್ಲಿ ವಿದ್ಯಾಭ್ಯಾಸ ಮಾಡುವಾಗ ಎಲ್ಲ ಅಕ್ಷರಗಳಿಗಿಂತಲೂ 'ಹರಿ' ಎಂಬ ಎರಡು ಅಕ್ಷರಗಳೇ ಅವನಿಗೆ ಪ್ರಿಯವಾದವು! ಸದಾ ಹರಿನಾಮವನ್ನು ಜಪಿಸುತ್ತಿದ್ದ ಚಂದ್ರಹಾಸನನ್ನು ನೋಡಿ ಉಪಾಧ್ಯಾಯನು "ಚಂದ್ರಹಾಸ, ಯಾವಾಗ ನೋಡಿದರೂ 'ಹರಿ ಹರಿ' ಎಂದು ಹೇಳುತ್ತಿರುವೆ. ಉಳಿದ ಅಕ್ಷರಗಳ ಕಡೆಗೆ ನಿನ್ನ ಗಮನವೇ ಇಲ್ಲ!" ಎಂದು ಆಕ್ಷೇಪಿಸುತ್ತಿದ್ದನು. ಚಂದ್ರಹಾಸನು "ಗುರುಗಳೆ, ಎಲ್ಲ ಅಕ್ಷರಸಮುದಾಯವೂ ಭಗವಂತನಲ್ಲಿ ಅಡಕವಾಗಿದೆಯೆಂದು ನನಗೆ ಅನ್ನಿಸಿದೆ. ಆದ್ದರಿಂದ ಹರಿಶಬ್ದವನ್ನು ಬಿಟ್ಟು ಇನ್ನೊಂದು ನನ್ನ ಬಾಯಿಂದ ಹೊರಡುವುದಿಲ್ಲ. ಏನು ಮಾಡಲಿ? ನಾನು ನಿಮ್ಮ ಸೇವಕ" ಎಂದು ಹೇಳುತ್ತಿದ್ದನು. ಉಪಾಧ್ಯಾಯನು ಕ್ರುದ್ಧನಾಗಿ ಕೈಯಲ್ಲಿ ಬೆತ್ತವನ್ನು ಹಿಡಿದು "ಎಲೈ ಶಿಷ್ಯ, ಕ ಖ ಎಂದು ಹೇಳು! ನಾಲಿಗೆ ಏಕೆ ತಿರುಗುವುದಿಲ್ಲವೋ ನೋಡುತ್ತೇನೆ!" ಎಂದು ಹೆದರಿಸಿದನು. ಚಂದ್ರಹಾಸನು ಹೆದರುತ್ತ ಮೆಲ್ಲನೆ "ಹೇಳಲಾರೆ! ನನ್ನ ನಾಲಿಗೆ ಹೊರಳುವುದಿಲ್ಲ! ನಾನು ಹರಿನಾಮವನ್ನೇ ಜಪಿಸುವೆನು. ಉಳಿದ ಶಾಸ್ತ್ರಗಳಿಂದ ಏನು ಪ್ರಯೋಜನ? ಎಲ್ಲಿ ಹರಿನಾಮಸಂಕೀರ್ತನವಿಲ್ಲವೋ, ಗುರುಗಳೆ, ಅವು ಶಾಸ್ತ್ರಗಳೆ? ಶಾಸ್ತ್ರವಾಗಲಿ ಪುರಾಣವಾಗಲಿ ಭಗವಂತನ ನಾಮಸ್ಮರಣೆ ಇಲ್ಲದಿದ್ದರೆ, ಬ್ರಹ್ಮನೇ ಬಂದು ಹೇಳಿದರೂ ಅದನ್ನು ಕೇಳಬಾರದು!" ಎಂದು ಉತ್ತರಿಸಿದನು.

ನಾರದನು ಮುಂದುವರಿಸಿದನು: ಅರ್ಜುನ, ವಿಷ್ಣುಭಕ್ತನಾದ ಆ ಬಾಲಕನ ಚರಿತೆಯನ್ನು ಕೇಳು. ಚಂದ್ರಹಾಸನ ಕಥೆಯು ಸರ್ವಪಾಪಗಳನ್ನು ಪರಿಹರಿಸುತ್ತದೆ. ಈ ರೀತಿಯಲ್ಲಿ ಚಂದ್ರಹಾಸನು ಉತ್ತರಕೊಡಲು ಅವನ ಉಪಾಧ್ಯಾಯನು ಕ್ರುದ್ಧನಾಗಿ ಕುಲಿಂದರಾಜನ ಗೃಹಕ್ಕೆ ಹೋಗಿ "ಮಹಾರಾಜ, ನಿನ್ನ ಮಗನ ಮೇಲೆ ಯಾವುದೋ ಒಂದು ಮಹಾಭೂತವು ಆವಿಷ್ಟವಾಗಿದೆ! ಯಾವಾಗಲೂ 'ಹರಿ ಹರಿ' ಎಂದು ಹಲುಬುತ್ತಲೇ ಇರುತ್ತಾನೆ. ನಾನು ಶಾಸ್ತ್ರಭಾಗವನ್ನು ಹೇಳಿಕೊಟ್ಟರೂ ಈ ದುರ್ಬುದ್ಧಿಯು ಅದನ್ನು ಓದುವುದೇ ಇಲ್ಲ. ನೀನು ಅನುಮತಿಯನ್ನು ಕೊಟ್ಟರೆ ಅವನನ್ನು ದಂಡಿಸಿ ಬುದ್ಧಿ ಕಲಿಸುತ್ತೇನೆ!" ಎಂದು ನಿವೇದಿಸಿದನು. ಆಗ ಕುಲಿಂದನು "ದೈವವಶದಿಂದ ಈ ಪುತ್ರನು ನನಗೆ ಲಭಿಸಿದನು. ಅವನನ್ನು ಹೇಗೆ ಹೊಡೆಯಲಾದೀತು? ಎಂತಹ ಪಿಶಾಚಸ್ವಭಾವದ ಮೂರ್ಖನಾದರೂ ಅವನನ್ನು ಪಾಲಿಸಲೇಬೇಕು. ಗುರುಗಳು ಈ ಬಾಲಕನ ಮಹತ್ತರವಾದ ಚರಿತೆಯನ್ನು ಕೇಳಿಲ್ಲವೆಂದು ಕಾಣುತ್ತದೆ. ಏಕಾದಶೀದಿನವು ಬಂದಿತೆಂದರೆ, ಆ ದಿನ ಇವನು ಊಟ ಮಾಡುವುದಿಲ್ಲ. ಅಮೃತವನ್ನು ಕೊಟ್ಟರೂ ತಿನ್ನುವುದಿಲ್ಲ. ನೀವು ಇವನನ್ನು ತ್ಯಜಿಸಿದರೆ, ಆಮೇಲೆ ಹೇಗೆ ಊಟ ಮಾಡುವಿರಿ! ಪರಿಸ್ಥಿತಿ ಈ ರೀತಿಯಲ್ಲಿದೆ. ಆದ್ದರಿಂದ, ವಿಪ್ರೋತ್ತಮರೆ, ನೀವು ಮನೆಗೆ ಹೋಗಿರಿ. ಚಂದ್ರಹಾಸನು ತನಗೆ ತೋರಿದಂತೆ ಇರಲಿ! ಇವನಿಗೆ ಎಂಟನೆಯ ವರ್ಷದಲ್ಲಿ ಉಪನಯನವನ್ನು ಮಾಡುವೆನು. ಆಮೇಲೆ ವೇದಾಧ್ಯಯನವನ್ನು ಮಾಡುವನು" ಎಂದು ತಿಳಿಸಿದನು. ಆ ಬ್ರಾಹ್ಮಣನು ಬಂದ ದಾರಿ ಹಿಡಿದು ಹೋದನು. ಕುಲಿಂದನು ಆನಂದದಿಂದ ಚಂದ್ರಹಾಸನನ್ನು ಆಲಂಗಿಸಿಕೊಂಡನು. "ಈ ಒಬ್ಬ ಮಗನು ನನ್ನ ದೇಶವನ್ನೇ ಪಾವನಗೊಳಿಸಿದನು! ವಿಷ್ಣುಭಕ್ತನೂ ಬುದ್ಧಿಶಾಲಿಯೂ ಆದ ಒಬ್ಬ ಮಗನಿಂದ ಎಲ್ಲವೂ ಪವಿತ್ರವಾಯಿತು. ಸುಮ್ಮನೆ ಬಹುಮಂದಿ ಪುತ್ರರಿಂದ ಏನು ಪ್ರಯೋಜನ? ಸರ್ಪಿಣಿಗೆ ಬೇಕಾದಷ್ಟು ಮರಿಗಳು ಹುಟ್ಟುತ್ತವೆ. ಎಲ್ಲವೂ ಕಪ್ಪೆಗಳನ್ನು ತಿನ್ನತಕ್ಕವು! ನನ್ನ ಪುತ್ರನು ಶ್ರೀಹರಿಯ ಪಾದಗಳನ್ನು ಸರ್ವದಾ ನೆನೆಯುತ್ತಾನೆ. ನಾನು ಹಿಂದಿನ ಜನ್ಮದಲ್ಲಿ ಎಷ್ಟು ಪುಣ್ಯವನ್ನು ಮಾಡಿದ್ದೆನೊ! ಪಂಚಾಗ್ನಿ ಮಧ್ಯದಲ್ಲಿ ತಪಸ್ಸನ್ನಾಚರಿಸಿದ್ದೆನೋ ಏನೋ. ಜನಪ್ರಿಯನೂ ವಿಷ್ಣುಭಕ್ತನೂ ಆದ ಇಂತಹ ಮಗನನ್ನು ಪಡೆದೆನು" ಎಂದ ಕುಲಿಂದರಾಜನು ಹರ್ಷಿಸಿದನು.

ಬಾಲಕನಿಗೆ ಎಂಟನೆಯ ವರ್ಷವು ನಡೆಯುತ್ತಿರುವಾಗ ಕುಲಿಂದನು ಉಪನಯನವನ್ನು ಮಾಡಿಸಿದನು. ವೇದಮಂತ್ರಪೂರ್ವಕವಾಗಿ ಹೋಮವನ್ನಾಚರಿಸಿ ಚಂದ್ರಹಾಸನಿಗೆ ವೇದಾಧ್ಯಯನ ಮಾಡಿಸಿದನು. ಚಂದ್ರಹಾಸನು ಹೃದಯದಲ್ಲಿ ಶ್ರೀಹರಿಯನ್ನು ಧ್ಯಾನಿಸುತ್ತಲೇ ಸಕಲವೇದಗಳನ್ನೂ ಕಲಿತನು. ಕಲಿತ ಮೇಲೆ ಆ ಬಾಲಕನು "ಶ್ರೀಹರಿಯು ಸುಪ್ರೀತನಾಗಲಿ" ಎಂದನು. ಅನಂತರ ವೇದಾರ್ಥಗಳನ್ನು ತಿಳಿದುಕೊಂಡು "ಎಲ್ಲ ವೇದಗಳಲ್ಲಿಯೂ ಸ್ಮೃತಿಗಳಲ್ಲಿಯೂ ಶಾಸ್ತ್ರಗಳಲ್ಲಿಯೂ ನನ್ನ ಪ್ರಭುವಾದ ಶ್ರೀಹರಿಯ ಮಹಿಮೆಯೇ ವರ್ಣಿತವಾಗಿದೆ. ಆತನಿಲ್ಲದ ಯಾವ ವಸ್ತುವನ್ನೂ ಜಗತ್ತಿನಲ್ಲಿ ಕಾಣೆನು" ಎಂದು ನುಡಿದು ಧನುರ್ವೇದವನ್ನು ಅಭ್ಯಾಸ ಮಾಡಿದನು. ತನ್ನ ಹೃದಯಾಂಗಣದಲ್ಲಿ

ಶ್ರೀಹರಿಯೆಂಬ ಗುರಿಯನ್ನು ಸ್ಥಾಪಿಸಿ ಭಕ್ತಿಯೆಂಬ ಧನುಸ್ಸಿನಲ್ಲಿ ಸಾತ್ವಿಕಗುಣವೆಂಬ ಹೆದೆಯನ್ನು ಏರಿಸಿ ಚಿತ್ತವೆಂಬ ಬಾಣವನ್ನು ಪ್ರಯೋಗಿಸಿದನು. ಆ ಬಾಣವು ನೇರವಾಗಿ ಹೋಗಿ ಗುರಿಯಾದ ಜನಾರ್ದನನಿಗೆ ತಾಗಿತು! ಪಾರ್ಥ, ಯಾರು ಈ ಬಗೆಯಲ್ಲಿ ಬಾಣವನ್ನು ಪ್ರಯೋಗಿಸುವುದಿಲ್ಲವೋ, ಆ ಜನರನ್ನು ಗುರಿಯಾದ ಜನಾರ್ದನನು ಅರ್ದಿಸುವನು-ಎಂದರೆ ಪೀಡಿಸುವನು! ಚಂದ್ರಹಾಸನ ದೇಹವೆಂಬ ಬತ್ತಳಿಕೆಯಿಂದ ಪಂಚೇಂದ್ರಿಯಗಳೆಂಬ ಐದು ಬಾಣಗಳು ತಾವಾಗಿ ಹೊರಟು ಶ್ರೀಕೃಷ್ಣನೆಂಬ ಗುರಿಯಲ್ಲಿ ನುಗ್ಗಿ ಎಲ್ಲವೂ ಒಂದಾದವು! ಏನಾಶ್ಚರ್ಯ! ಈ ರೀತಿಯಲ್ಲಿ ಚಂದ್ರಹಾಸನು ಧನುರ್ವೇದವನ್ನು ಕಲಿತು ಗುರುಗಳನ್ನು ಪೂಜಿಸಿದನು. ಅವನು ಅಶ್ವಗಣಗಳನ್ನು ಶತ್ರುಗಣ ಗಳನ್ನು ವಶಪಡಿಸಿಕೊಂಡು ಪಾಲಿಸುತ್ತಿದ್ದನಲ್ಲದೆ ವೈರಿಗಳ ದೇಶವನ್ನೂ ಜಯಿಸಿದನು. ಕುಂಡಲಧಾರಿಯಾದ ಚಂದ್ರಹಾಸನು ಹಂಸ (ಅಶ್ವ)ವನ್ನೇರಿ ಮೂಗುದಾಣವನ್ನು ಜಗ್ಗಿ ಗುರುಗಳನ್ನು ಕುರಿತು 'ನನಗೆ ಭ್ರಮೆ ಇಲ್ಲ' ಎಂದು ನುಡಿದನು.* ಶ್ರೀಹರಿಯನ್ನು ಭಜಿಸತಕ್ಕವನಿಗೆ ಭ್ರಮೆಯಾಗುವುದುಂಟೆ?

---

* ಚಂದ್ರಹಾಸನು ಧನುರ್ವೇದದಲ್ಲಿ ಪಾರಂಗತನಾದನಲ್ಲದೆ ವೇದಾಂತದಲ್ಲಿಯೂ ಪಾರಂಗತನಾಗಿ ಭಕ್ತಿಯೋಗದಿಂದ ಭಗವಂತನನ್ನು ಒಲಿಸಿಕೊಂಡನೆಂಬುದು ಕವಿಯ ಆಶಯ. ಅಶ್ವಗಳು = ಇಂದ್ರಿಯಗಳು. ಶತ್ರುಗಳು = ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯ ಎಂಬ ಅರಿಷಡ್ವರ್ಗಗಳು. ಮೂಗುದಾಣ = ಮನಸ್ಸು. ದೇಶ = ಶಬ್ದ, ಸ್ಪರ್ಶ, ರೂಪ, ರಸ, ಗಂಧ ಎಂಬ ವಿಷಯಗಳು. ಮೂಲದಲ್ಲಿ ಹಂಸಾರೂಢ ಎಂಬ ಶಬ್ದವಿದೆ. ಹಂಸವೆಂದರೆ ಕುದುರೆ ಮತ್ತು ಹಂಸಮಂತ್ರ. 'ನನಗೆ ಭ್ರಮೆ ಇಲ್ಲ' ಎಂದರೆ 'ನಾನು ಗುರಿಯನ್ನು ತಪ್ಪದೆ ಹೊಡೆಯಬಲ್ಲೆ' ಎಂದರ್ಥ. ಹಾಗೆಯೇ 'ನನಗೆ ಅಜ್ಞಾನವಿಲ್ಲ' ಎಂದು ಇನ್ನೊಂದು ಮೂಲದಲ್ಲಿ ಸಕುಂಡಲ ಎಂಬ ಶಬ್ದವಿದೆ. ಕುಂಡಲಧಾರಿ ಎಂಬ ಅರ್ಥ ಸ್ಪಷ್ಟವಾಗಿದೆ. ಕುಂಡಲನೀ ಶಕ್ತಿಯ ಉದ್ಬೋಧವುಳ್ಳವನು ಎಂದೂ ಅರ್ಥವಾಗಬಹುದು. ಈ ರೀತಿಯಲ್ಲಿ ಉಭಯಾರ್ಥಗಳೂ ವಿವಕ್ಷಿತಗಳೆಂದು ತೋರುತ್ತದೆ.

# ಚಂದನಾವತಿಗೆ ಧೃಷ್ಟಬುದ್ಧಿಯ ಪ್ರಯಾಣ

ಜನಮೇಜಯ, ಆಗ ಅರ್ಜುನನು "ನಾರದ ಮುನಿಗಳೆ, ಇಂತಹ ವಿಷ್ಣುಭಕ್ತನಿರುವ ದೇಶವು ಧನ್ಯವಾದುದು. ಧನುರ್ವೇದದ ಅಭ್ಯಾಸವನ್ನು ಚಂದ್ರಹಾಸನು ಈ ಪ್ರಕಾರವಾಗಿ ನಡೆಸಿದನಲ್ಲವೆ? ಹರಿಭಕ್ತನನ್ನು ಯಾವಾಗ ನೋಡುವೆನೆಂದು ನನಗೆ ಸದಾ ಆಸೆ ನೆಲೆಸಿತ್ತು. ಈಗ ನಮ್ಮಿಬ್ಬರಿಗೆ ಅನ್ಯೋನ್ಯವಾಗಿ ಮಾತನಾಡುವ ಸದವಕಾಶವು ಲಭಿಸಿತು. ನನಗೆ ಇತರರೊಡನೆ ಹೀಗೆ ಬೆರೆಯುವ ಭಾಗ್ಯವು ದೊರಕಲಿಲ್ಲ. ಉತ್ತಾನಪಾದನ ಮಗನಾದ ಧ್ರುವನು ಆಕಾಶದಲ್ಲಿ ನೆಲೆಸಿದ್ದಾನೆ. ಬಲಿಯು ಪಾತಾಳದಲ್ಲಿದ್ದಾನೆ. ವಿಭೀಷಣನು ಲಂಕೆಯಲ್ಲಿರುವನು. ನನ್ನ ಪಿತಾಮಹನಾದ ಭೀಷ್ಮನು ಸ್ವರ್ಗವನ್ನು ಸೇರಿದನು. ನೀವಾದರೋ ಇಲ್ಲಿಂದಲ್ಲಿಗೆ ಸಂಚರಿಸುತ್ತಲೇ ಇರುತ್ತೀರಿ. ನಿಮ್ಮ ದರ್ಶನವಾಗುವುದೇ ಕಷ್ಟ. ಈಗ ಚಂದ್ರಹಾಸನನ್ನು ಕಂಡು ನನ್ನ ದೊಡ್ಡ ಬಯಕೆಯನ್ನು ತೀರಿಸಿಕೊಳ್ಳುವೆನು. ಅಮೃತದಂತೆ ಆಪ್ಯಾಯನಕರವಾದ ಚಂದ್ರಹಾಸನ ಕಥೆಯನ್ನು ಇನ್ನೂ ಹೇಳಿರಿ. ನಾರದರೆ, ಭೂಪಾಲ ಶಿರೋಮಣಿಯಾದ ಚಂದ್ರಹಾಸನು ವಿಷಮವಾದ ತಾರುಣ್ಯವನ್ನು ಪಡೆದಾಗ ಹೇಗೆ ನಡೆದುಕೊಂಡನು ಎಂಬುದನ್ನು ತಿಳಿಸಿರಿ" ಎಂದು ಕೇಳಿದನು.

ನಾರದಮುನಿಯು ಹೇಳಿದನು : ಚಂದ್ರಹಾಸನಿಗೆ ಸುಮಾರು ಹದಿನಾರು ವರ್ಷಗಳಾದವು. ಆತನು ಒಂದು ದಿನ ಕುಲಿಂದರಾಜನನ್ನು ನೋಡಿ "ಮಹಾರಾಜ, ದಿಗ್ವಿಜಯ ಮಾಡಲು ನನಗೆ ಆಜ್ಞೆಯನ್ನು ಕೊಡು. ನಿನ್ನ ಅನುಗ್ರಹ ಸಾಮರ್ಥ್ಯದಿಂದಲೇ ಸಕಲ ವೈರಿರಾಜರನ್ನೂ ಜಯಿಸಿ ಕಪ್ಪಕಾಣಿಕೆಗಳನ್ನು ತರುವೆನು" ಎಂದು ನುಡಿದನು. ಕುಲಿಂದನು "ವತ್ಸ, ನೀನೊಬ್ಬನೇ ಹೋಗುವೆಯಾ? ವೈರಿರಾಜರ ಬಳಿ ದೊಡ್ಡ ಸೈನ್ಯವಿದೆ. ಅವರನ್ನು ಜಯಿಸುವುದು ಕಷ್ಟ. ಅಥವಾ ವಾಸುದೇವನನ್ನು ಸ್ಮರಿಸುತ್ತ ಧೈರ್ಯದಿಂದ ಹೋಗುವೆಯಾದರೆ, ಹೀಗೆ ಮಾಡು: ಕುಂತಲರಾಜನ ಮಂತ್ರಿಯಾದ ಧೃಷ್ಟಬುದ್ಧಿಯು ನಮ್ಮ ಪ್ರಭುವಾಗಿದ್ದಾನೆ. ನೂರು ಗ್ರಾಮಗಳಿರುವ ಈ ದೇಶವನ್ನು ಆತನು ನನಗೆ ಕೊಟ್ಟಿದ್ದಾನೆ. ಬಲಶಾಲಿಗಳಾದ ಆತನ ವೈರಿಗಳು ಈ ನನ್ನ ದೇಶಕ್ಕೆ ತೊಂದರೆಕೊಡುತ್ತಿದ್ದರು. ಈಚೆಗೆ ನಿನ್ನ ಸಾಮರ್ಥ್ಯವನ್ನು ಕೇಳಿ ಸುಮ್ಮನಾಗಿದ್ದಾರೆ" ಎಂದು ತಿಳಿಸಿದನು. ತಂದೆಯ ಅಭಿಪ್ರಾಯವನ್ನು ತಿಳಿದು ಚಂದ್ರಹಾಸನು ರಥಾರೂಢರಾದ ಐದು ಮಂದಿ ವೀರರನ್ನು ಮಾತ್ರ ಕರೆದುಕಂಡು ವೈರಿಗಳ ರಾಜ್ಯವನ್ನು ಮುತ್ತಿದನು. ನಗುನಗುತ್ತಲೇ ಅವರೆಲ್ಲರನ್ನೂ ಜಯಿಸಿದನು. ಆತನು "ಈ ರಾಜರು ಮದೋನ್ಮತ್ತರಾಗಿ ಶ್ರೀಹರಿಯನ್ನು ಆರಾಧಿಸಲಿಲ್ಲ. ಆದ್ದರಿಂದ ರಥಿಕರು, ಪದಾತಿಗಳು-ಎಲ್ಲರೂ ಸೋತು ಹೋದರು. ನಾನು ಆಕ್ರಮಿಸಿದ ಮೇಲೆ ಇವರನ್ನು ರಕ್ಷಿಸತಕ್ಕವರು ಯಾರು? ಭಗವಂತನಾದ ಜನಾರ್ದನನೊಬ್ಬನನ್ನು ಬಿಟ್ಟು ಯಾರೂ ಇವರನ್ನು ರಕ್ಷಿಸಲಾರರು!" ಎಂದು ಹೇಳುತ್ತಿದ್ದನು. ವಾಸುದೇವನ ಕಥಾಕಲಾಪಗಳನ್ನು ಕೇಳಿ ಕಲಿದೋಷಗಳು ಅಡಗುವಂತೆ, ಆ ರಾಜರು ಚಂದ್ರಹಾಸನ ಭಯದಿಂದ ಹೇಳಹೆಸರಿಲ್ಲದೆ ಸೋತು ಹೋದರು.

ಚಂದ್ರಹಾಸನು ವೈರಿರಾಜರೆಲ್ಲರನ್ನೂ ಗೆದ್ದು ಸಾವಿರಾರು ಆನೆ ಕುದುರೆಗಳನ್ನು ವಶಪಡಿಸಿಕೊಂಡು ತನ್ನ ನಗರಿಯಾದ ಚಂದನಾವತಿಗೆ ಬಂದನು. ಕುಲಿಂದನು ಪ್ರೀತಿಯಿಂದ ಪುರದ್ವಾರದಲ್ಲಿ ಮಗನನ್ನು ಅಭಿನಂದಿಸಿದನು. ತಾಯಿಯೇ ಸ್ವತಃ ಆರತಿ ಎತ್ತಿದಳು. ಚಂದ್ರಹಾಸನು ಅವರಿಬ್ಬರನ್ನೂ ಪಲ್ಲಕ್ಕಿಯಲ್ಲಿ ಕುಳ್ಳಿರಿಸಿ ಸೇವಕರಿಂದ ಹೊರಿಸಿಕೊಂಡು ಮೆರವಣಿಗೆಯಲ್ಲಿ ನಗರದೊಳಗೆ ಬಂದನು. ತಾನು ತಂದೆತಾಯಿಗಳ ಪಾದುಕೆಗಳನ್ನು ಹೊತ್ತುಕೊಂಡು ಪಲ್ಲಕ್ಕಿಯ ಮುಂದುಗಡೆ ನಡೆದುಬರುತ್ತ "ಮಾತಾಪಿತೃಗಳಲ್ಲಿ ಭಕ್ತಿಯನ್ನಿಡದಿದ್ದರೆ ಜನರಿಂದ ಏನನ್ನೂ ಸಾಧಿಸಲು ಆಗುವುದಿಲ್ಲ. ತಾಯಿ ತಂದೆಗಳನ್ನು ನಾನು ಲಕ್ಷ್ಮಿನಾರಾಯಣ ಸ್ವರೂಪರೆಂದೇ ತಿಳಿಯುತ್ತೇನೆ"- ಎಂದು ಹೇಳುತ್ತಿದ್ದನು. ಹೀಗೆ ಚೌಕದ ಬೀದಿಯಲ್ಲಿ ಬರುತ್ತಿರುವಾಗ ವಿಶಾಲಾಕ್ಷನೂ ಕಿರುನಗೆಯನ್ನು ಬೀರುತ್ತ ಸೌಂದರ್ಯದಲ್ಲಿ ಮನ್ಮಥನೂ ಆದ ಚಂದ್ರಹಾಸನನ್ನು ಪೌರಸ್ತ್ರೀಯರು ನೋಡುತ್ತಿದ್ದರು. ಒಬ್ಬ ತರುಣಿಯು ತನ್ನ ಸಖಿಯನ್ನು ನೋಡಿ ಮುಗುಳ್ನಗೆಯಿಂದ "ಚಂದ್ರಹಾಸನನ್ನು ಅರ್ಚಿಸಿದರೆ ತನ್ನ ನೋಟಗಳಿಂದಲೇ ಪಾಪಗಳ ಸೇನೆಯನ್ನು ಕೊಂದುಹಾಕುವನು!"- ಎಂದು ಹೇಳಿದಳು. ಅದಕ್ಕೆ ಸಖಿಯು "ಗೆಳತಿ, ಇಂತಹ ದೋಷಯುಕ್ತವಾದ ಮಾತನ್ನಾಡಲು ನಿನಗೆ ನಾಚಿಕೆಯಾಗುವುದಿಲ್ಲವೆ? ಈತನು ಕಾಮುಕರನ್ನು ಅಪಹಾಸ್ಯ ಮಾಡತಕ್ಕವನು" ಎಂದಳು. ಈ ಪ್ರಕಾರವಾದ ನುಡಿಗಳನ್ನು ಕೇಳುತ್ತ ಚಂದ್ರಹಾಸನು ತನ್ನ ಗೃಹವನ್ನು ಪ್ರವೇಶಿಸಿದನು. ವಿಜಯವಾರ್ತೆಯಿಂದ ಅವನ ಮಿತ್ರರೂ ಚಿಕ್ಕಪ್ಪನೇ ಮೊದಲಾದವರೂ ಆನಂದಿಸಿದರು. ಅನಂತರ ಕುಲಿಂದರಾಜನು ಒಂದು ಶುಭಕರವಾದ ಪಂಚಮೀತಿಥಿಯಲ್ಲಿ ಪುತ್ರನಾದ ಚಂದ್ರಹಾಸನಿಗೆ ತನ್ನ ಸ್ಥಾನವನ್ನಿತ್ತು ಪಟ್ಟಾಭಿಷೇಕ ಮಾಡಿದನು. ವೇದವಿದರಾದ ಬ್ರಾಹ್ಮಣರು ವಿಧಿಪೂರ್ವಕವಾಗಿ ಹೋಮಕರ್ಮಾದಿಗಳನ್ನು ನಡೆಸಿದರು. ಪಟ್ಟಣಿಗರು ದೊಡ್ಡ ಉತ್ಸವವನ್ನೇ ಆಚರಿಸಿದರು. ತಮ್ಮ ಮನೆಯ ಮುಂದಿನ ಅಂಗಣಗಳನ್ನು ನೀರಿನಿಂದ ಸಾರಿಸಿ ಚಂದನವನ್ನು ತೊಡೆದು ಚಂದ್ರಾದಿಚೂರ್ಣಗಳಿಂದ ಚೌಕಗಳನ್ನು ಬರೆದು ಅಲಂಕರಿಸಿದರು. ಕೋಮಲವಾದ ಧ್ವನಿಯಿಂದ ಶ್ರೀಹರಿಯ ನಾಮಗಳನ್ನು ಗಟ್ಟಿಯಾಗಿ ಹಾಡಿದರು. ಅನಂತರ ಪ್ರಜೆಗಳೆಲ್ಲರೂ ಅರಮನೆಗೆ ಬಂದು ಶ್ರೀಗಂಧ, ಕೇಸರ, ಚಂದ್ರ, ಸಂಪಿಗೆಯ ಮಾಲೆ, ಧೂಪಾದಿಗಳಿಂದ ಚಂದ್ರಹಾಸನನ್ನು ಪೂಜಿಸಿ ಕರ್ಪೂರದ ದೀಪಗಳಿಂದ ಆರತಿ ಬೆಳಗಿದರು. ಹೀಗೆ ಪ್ರಜೆಗಳು ಗೌರವಿಸಲಾಗಿ ಚಂದ್ರಹಾಸನು ಅವರನ್ನು ಕುರಿತು ಹೀಗೆಂದನು: "ಎಲೈ ಪೌರರೆ, ಇಂದಿನಿಂದ ನೀವೆಲ್ಲರೂ ಏಕಾದಶೀ ವ್ರತವನ್ನು ಆಚರಿಸಬೇಕು. ದಶಮಿಯ ದಿನ ಉತ್ಸವವನ್ನು ನಡೆಸಿ ಏಕಭುಕ್ತದಿಂದ ಇರತಕ್ಕದ್ದು. ಇದಕ್ಕೆ ತಪ್ಪಿದವನು ನನ್ನ ಶತ್ರುವೆಂದು ತಿಳಿಯುತ್ತೇನೆ. ಮಾರನೆಯ ದಿನ ವಿಷ್ಣು ತಿಥಿಯಾದ ಏಕಾದಶಿಯಂದು ಭೋಜನ ಮಾಡತಕ್ಕವನು ನನಗೆ ಮಹಾಶತ್ರುವೆಂದು ಪರಿಗಣಿಸುತ್ತೇನೆ. ಸಕಲ ಪಾಪಗಳೂ ಏಕಾದಶಿಯಲ್ಲಿ ವಿಷ್ಣುವಿಗೆ ಹೆದರಿ ಅನ್ನದಲ್ಲಿ ಬಂದು ನೆಲೆಸುತ್ತವೆ. ಆದ್ದರಿಂದ ಆ ದಿನ ಅನ್ನವನ್ನು ತಿನ್ನಬಾರದು. ಯಾವ ದಿನ ಐವತ್ತಾರು ಗಳಿಗೆವರೆಗೆ ದಶಮೀ ತಿಥಿ ಇರುವುದೋ ಅದು ರಿಕ್ತ ತಿಥಿಯೆಂದು ತಿಳಿದು ದಶಮಿಯ

ಆಚರಣೆ ಮಾರನೆಯ ದಿನವೆಂದು ತಿಳಿಯಬೇಕು. ವೈಷ್ಣವರು ಏಕಾದಶೀ ತಿಥಿಯನ್ನು ದಶಮಿಯಿಂದ ಅವಿದ್ಧವಾಗುವಂತೆ ನೋಡಿಕೊಳ್ಳಬೇಕು. ಯಾರು ಪಾಪಭೀತರೂ ಧರ್ಮನಿಷ್ಠರೂ ವಿಷ್ಣುವಿನಲ್ಲಿ ಭಕ್ತಿಯುಳ್ಳವರೂ ಆಗಿರುವರೋ ಮತ್ತು ಎರಡು ಪಕ್ಷಗಳಲ್ಲಿಯೂ ಏಕಾದಶಿಯಂದು ಜಾಗರಣೆ ಮಾಡುವರೋ ಅಂಥವರಿಗೆ ನಾನು ದಾಸನಾಗಿ ವರ್ತಿಸುವೆನು. ಆಯುಸ್ಸು ನೀರಿನ ಗುಳ್ಳೆಯಂತೆ ಚಂಚಲವಾದದ್ದು. ಆದ್ದರಿಂದ, ಮಾನವರೆ, ಸ್ಥಿರವಾದ ಭಗವನ್ಮೂರ್ತಿಯನ್ನು ಸದಾ ಧ್ಯಾನಿಸಿರಿ. ಈ ಶರೀರವಾದರೋ ಮೂಳೆಯೆಂಬ ಕಂಭವುಳ್ಳದ್ದೂ ನರಗಳಿಂದ ಬಿಗಿಯಲ್ಪಟ್ಟದ್ದೂ ಮಾಂಸರಕ್ತಗಳಿಂದ ಲಿಪ್ತವಾದದ್ದೂ ಆಗಿ ನೂರಾರು ವಿಧಗಳಿಂದ ಕೂಡಿದೆ. ಲೋಭ ಕ್ರೋಧಾದಿ ವೈರಿಗಳಿಂದ ಆಕ್ರಾಂತವಾಗಿದೆ. ಏಕಾದಶಿಗೆ ಸಮವಾದ ಇನ್ನೊಂದು ವ್ರತವಿಲ್ಲ. ಆದ್ದರಿಂದ, ಪ್ರಜೆಗಳೆ, ಬುದ್ಧಿಯಿಂದ ಚೆನ್ನಾಗಿ ವಿಚಾರಿಸಿ ಯುಕ್ತವೆನಿಸಿದ್ದನ್ನು ಆಚರಿಸಿರಿ. ಮೂರು ಲೋಕಗಳಲ್ಲಿಯೂ ಏಕಾದಶಿಯಂತೆ ಪಾವನವಾದ ಇನ್ನೊಂದು ವ್ರತವಿರುವುದನ್ನು ನಾನು ಕೇಳಿಲ್ಲ, ನೋಡಿಲ್ಲ. ಏಕೆಂದರೆ ಏಕಾದಶೀತಿಥಿಗೆ ವಿಷ್ಣುವೇ ಸ್ವಾಮಿ" ಎಂದು ತಿಳಿಸಿದನು. ಪ್ರಜೆಗಳೆಲ್ಲರೂ ಚಂದ್ರಹಾಸನ ಆಜ್ಞೆಯಂತೆ ನಡೆಯಲು ಹರ್ಷದಿಂದ ಸಂಮತಿಸಿದರು. ಆಮೇಲೆ ಚಂದ್ರಹಾಸನು ಚಿನ್ನ ರತ್ನ ವಸ್ತ್ರಾದಿಗಳಿಂದ ಪೌರರನ್ನೂ ಬಡವರನ್ನೂ ವಿಪ್ರರನ್ನೂ ಸತ್ಕರಿಸಿದನು. ಸಜ್ಜನರಾದ ಬ್ರಾಹ್ಮಣರಿಗೋಸ್ಕರ ಮನೆಗಳನ್ನು ಕಟ್ಟಿಸಿದನು. ವಾಪೀಕೂಪತಡಾಗಗಳನ್ನೂ ವಿಷ್ಣುದೇವಾಲಯಗಳನ್ನೂ ನಿರ್ಮಿಸಿದನು. ಹಾಗೆಯೇ ಶಿವದೇವಾಲಯಗಳನ್ನೂ ಛತ್ರಗಳನ್ನೂ ಯೋಗೀಶ್ವರರ ಆಶ್ರಮಗಳನ್ನೂ ಸ್ಥಾಪಿಸಿದನು. ಹಣ್ಣು, ಎಲೆ, ಹಾಲು, ನೀರು-ಇವುಗಳನ್ನೊದಗಿಸುವ ಅರವಟ್ಟಿಗೆಗಳನ್ನು ಕಟ್ಟಿಸಿದನು.

ಅರ್ಜುನ, ದೇಶವಿದೇಶಗಳಿಂದ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರಾದಿ ಪ್ರಜೆಗಳು ಚಂದನಾವತಿಗೆ ಬಂದು ನೆಲೆಸಿದರು. ಎಲ್ಲರೂ ಪುತ್ರಪೌತ್ರರಿಂದಲೂ ಧನಧಾನ್ಯಗಳಿಂದಲೂ ಸಮನ್ವಿತರಾಗಿ ಸುಖದಿಂದಿದ್ದರು. ಚಂದ್ರಹಾಸನು ಅವರೆಲ್ಲರ ಯೋಗಕ್ಷೇಮಗಳನ್ನು ನೋಡಿಕೊಳ್ಳುವಂತೆ ವ್ಯವಸ್ಥೆಮಾಡಿದನು. ಸಂತೃಪ್ತರಾದ ಹದಿನೆಂಟು ಬಗೆಯ (?) ಪ್ರಜೆಗಳಿಂದೊಡಗೂಡಿ ಚಂದ್ರಹಾಸನು ಚಂದನಾವತಿಯಲ್ಲಿ ಹರಿಭಕ್ತಿಯು ವರ್ಧಿಸುವಂತೆ ಮಾಡಿದನು. ಅರ್ಥಿಯಾಗಿ ಬಂದವರಿಗೆ ಚಂದ್ರಹಾಸನು "ಶ್ರೀಕೃಷ್ಣನು ಸುಪ್ರೀತನಾಗಲಿ!" ಎಂದು ನುಡಿದು ಬೇಕಾದಷ್ಟು ಐಶ್ವರ್ಯವನ್ನು ದಾನಮಾಡುತ್ತಿದ್ದನು. ಅವನಿಂದ ದಾನವನ್ನು ಸ್ವೀಕರಿಸಿದ ಯಾಚಕನು ಕುಬೇರನನ್ನೂ ಮೀರಿಸುವಷ್ಟು ಐಶ್ವರ್ಯಶಾಲಿಯಾಗುತ್ತಿದ್ದನು! ಹೀಗಿರಲು ಒಂದು ದಿನ ಕುಲಿಂದನು ಚಂದ್ರಹಾಸನನ್ನು ನೋಡಿ "ವತ್ಸ, ಕುಂತಲರಾಜನಿಗೆ ನಾನು ಹತ್ತುಸಾವಿರ ಸುವರ್ಣನಾಣ್ಯಗಳನ್ನು ಕೊಡಬೇಕಾಗಿದೆ. ಅವನ ಮಂತ್ರಿಯೂ ನಮ್ಮ ಒಡೆಯನೂ ಆದ ಧೃಷ್ಟಬುದ್ಧಿಗೆ ಐದು ಸಾವಿರ ನಾಣ್ಯಗಳನ್ನೂ ಅವನ ಪತ್ನಿಗೆ ಎರಡೂವರೆ ಸಾವಿರ ನಾಣ್ಯಗಳನ್ನೂ ಕೊಡಬೇಕು. ಆದ್ದರಿಂದ ಇವೆಲ್ಲವನ್ನೂ ಅವರಿಗೆ ಕಳಿಸಿಕೊಡು. ರಾಜನೂ ಅವನ ಮಂತ್ರಿಯೂ ಸಂತುಷ್ಟರಾಗಲಿ. ಮಗು, ಇಲ್ಲಿಗೆ ಆರುಯೋಜನಗಳ ದೂರದಲ್ಲಿ ಕುಂತಲ ನಗರವಿದೆ. ಅಲ್ಲಿ ಕುಂತಲರಾಜನು ಗಾಲವನೆಂಬ

ಪುರೋಹಿತನಿಂದಲೂ ಧೃಷ್ಟಬುದ್ಧಿ ಎಂಬ ಮಂತ್ರಿಯಿಂದಲೂ ಸಹಿತನಾಗಿ ರಾಜ್ಯವನ್ನು ಪಾಲಿಸುತ್ತಿದ್ದಾನೆ" ಎಂದು ಹೇಳಿದನು. ತಂದೆಯ ನುಡಿಯನ್ನು ಕೇಳಿ ಚಂದ್ರಹಾಸನು ಸಂತುಷ್ಟನಾಗಿ "ತಂದೆಯೆ, ಅವರಿಗೆ ಕೊಡಬೇಕಾದ ಸಕಲ ಧನವನ್ನೂ ಪುರೋಹಿತನಾದ ಗಾಲವನ ಬಳಿಗೆ ಶೀಘ್ರದಲ್ಲಿ ಕಳಿಸುವೆನು" ಎಂದು ನುಡಿದು ಅದರಂತೆ ಏರ್ಪಡಿಸಿದನು. ಧನವನ್ನು ಮಾತ್ರವಲ್ಲದೆ ಹೆಣ್ಣು ಕುದುರೆ ಮತ್ತು ಒಂಟೆಗಳನ್ನು ಹೂಡಿದ ಬಂಡಿಗಳಲ್ಲಿ ಉತ್ತಮ ದುಕೂಲಗಳು, ಚಿನ್ನ, ಶ್ರೀಗಂಧ, ಕರ್ಪೂರ, ಕಸ್ತೂರಿ-ಇವುಗಳನ್ನೂ ಹೇರಿಸಿ ಜೊತೆಯಲ್ಲಿ ಆನೆಗಳನ್ನೂ ಉತ್ತಮ ಜಾತಿಯ ಕುದುರೆಗಳನ್ನೂ ಕಳಿಸಿ, ಅವೆಲ್ಲವನ್ನೂ ಕುಂತಲ ರಾಜನಿಗೂ ಧೃಷ್ಟಬುದ್ಧಿಗೂ ಕೊಡುವಂತೆ ಏರ್ಪಡಿಸಿದನು. ಮತ್ತು ಒಂದು ವಿಜ್ಞಾಪನಾ ಪತ್ರವನ್ನೂ ಕಳಿಸಿದನು.

ಚಂದ್ರಹಾಸನ ಸೇವಕರು ಅವೆಲ್ಲವನ್ನೂ ತೆಗೆದುಕೊಂಡು ಪ್ರಯಾಣ ಮಾಡಿ ಕುಂತಲ ನಗರಕ್ಕೆ ಬಂದರು. ಅವರು ಅಲ್ಲಿಗೆ ಬಂದಾಗ ಏಕಾದಶೀ ತಿಥಿಯು ಪ್ರಾಪ್ತವಾಯಿತು. ಸೇವಕರು ನಗರದ ಸಮೀಪದಲ್ಲಿ ಹರಿಯುತ್ತಿದ್ದ ತಿಳಿನೀರಿನಿಂದ ತುಂಬಿದ ನದಿಯನ್ನು ಕಂಡು "ನಾವು ಇಲ್ಲಿ ಸ್ನಾನಮಾಡಿ ಶ್ರೀಹರಿಯನ್ನು ಅರ್ಚಿಸಿ, ತರುವಾಯ ನಗರದೊಳಗೆ ಹೋಗೋಣ. ಶ್ರೀಹರಿಯನ್ನು ಪೂಜಿಸುವುದರಿಂದ ನಮಗೆ ಶುಭ ವಾಗುವುದು" ಎಂದು ಮಾತನಾಡಿಕೊಂಡರು. ಆಮೇಲೆ ಆ ಸೇವಕರು ನದಿಯಲ್ಲಿ ಮಿಂದು ಶ್ರೀಮನ್ನಾರಾಯಣನನ್ನು ವಂದಿಸಿದರು; ಜಪಿಸಿದರು; ಧ್ಯಾನಮಾಡಿದರು. ನಾರಾಯಣನಿಗೆ ಪ್ರಿಯವಾದ ತುಲಸೀಮಾಲೆಯನ್ನು ಧರಿಸಿದರು. ಈ ರೀತಿಯಲ್ಲಿ ಏಕಾದಶೀ ನಿಯಮವನ್ನು ಪಾಲಿಸಿ ನಗರದೊಳಗೆ ಹೋಗಿ ಮಂತ್ರಿಯಾದ ಧೃಷ್ಟಬುದ್ಧಿಯನ್ನು ಕಂಡರು. ಸೇವಕರು ಉಟ್ಟಿದ್ದ ವಸ್ತ್ರಗಳು ಒದ್ದೆಯಾಗಿರುವುದನ್ನು ನೋಡಿ ಧೃಷ್ಟಬುದ್ಧಿಯು ತನ್ನ ಮನಸ್ಸಿನಲ್ಲಿ "ಆ ಕುಲಿಂದನು ಸತ್ತು ಹೋಗಿರಬೇಕು! ಆದ್ದರಿಂದ ಇವರು ಈ ರೀತಿಯಲ್ಲಿ ಒದ್ದೆಯನ್ನುಟ್ಟು ಬಂದಿದ್ದಾರೆ!" ಎಂದು ಆಲೋಚಿಸಿದನು. ಅವನು ಚಂದ್ರಹಾಸನ ಸೇವಕರನ್ನು ಕುರಿತು "ನಿಮ್ಮ ದೇಶರಕ್ಷಕನಾದ ಕುಲಿಂದನು ಯಾವಾಗ ಮೃತನಾದನು? ಎಷ್ಟು ದಿನಗಳಾದವು? ಅಯ್ಯೋ, ದೊಡ್ಡ ಅನರ್ಥವಾಯಿತು!" ಎಂದನು. ಆ ಸೇವಕರು "ಅನಿಷ್ಟವು ವೈರಿಗಳಿಗೆ ಆಗಲಿ! ನಮ್ಮ ಕುಲಿಂದರಾಜನಿಗೆ ಎಂದಿಗೂ ಆಗದಿರಲಿ! ಕುಲಿಂದರಾಜನ ಸುಪುತ್ರನಾದ ಚಂದ್ರಹಾಸನು ದಿಗ್ವಿಜಯವನ್ನು ಮಾಡಿ, ನಿಮಗೆ ಕೊಡಬೇಕಾದ ಧನವನ್ನು ಕಳಿಸಿದ್ದಾನೆ. ಚಿನ್ನದ ಕಲಶಗಳಿಂದಲೂ ಕರ್ಪೂರ ಧೂಪ ಚಂದನ ದುಕೂಲಾದಿಗಳಿಂದಲೂ ತುಂಬಿದ ಬಂಡಿಗಳು, ಇದೋ, ನಿನ್ನ ಮನೆಬಾಗಿಲಿಗೆ ಬಂದಿವೆ. ಇವುಗಳ ಏಳರಷ್ಟು ಕುಂತಲರಾಜನ ಅರಮನೆಗೆ ಹೋಗಿವೆ!" ಎಂದರು. ಅಚ್ಚರಿಗೊಂಡ ಧೃಷ್ಟಬುದ್ಧಿಯು ಹರ್ಷದಿಂದ ಅವೆಲ್ಲವನ್ನೂ ಸ್ವೀಕರಿಸಿದನು. ಅನಂತರ ತನ್ನ ಅಡಿಗೆಯುವರನ್ನ ಕರೆಯಿಸಿ "ಚಂದನಾವತಿಯಿಂದ ಬಂದ ಈ ಸೇವಕರಿಗೆ ಉತ್ತಮವಾದ ದಿವ್ಯಾನ್ನವನ್ನಿತ್ತು ಭೋಜನಮಾಡಿಸಿರಿ!" ಎಂದು ಆದೇಶವನ್ನಿತ್ತನು. ಅಡಿಗೆಯವರು ಅವರೆಲ್ಲರನ್ನೂ ಭೋಜನಕ್ಕೆ ಕರೆದರು. ಎಷ್ಟು ಒತ್ತಾಯಪಡಿಸಿದರೂ ಈ ಸೇವಕರು ಹೋಗಲಿಲ್ಲ. ಆಗ

ಅಡಿಗೆಯವರು ಈ ವಿಷಯವನ್ನು ಧೃಷ್ಟಬುದ್ಧಿಗೆ ನಿವೇದಿಸಿದರು. ಅದನ್ನು ಕೇಳಿ ಕುಪಿತನಾದ ಮಂತ್ರಿಯು ಸೇವಕರನ್ನು ಕರೆಯಿಸಿ ಕೆಂಗಣ್ಣುಗಳಿಂದ ನೋಡುತ್ತ "ಆದರದಿಂದ ಭೋಜನಕ್ಕೆ ಕರೆದರೂ ನಮ್ಮ ಮನೆಯಲ್ಲಿ ನೀವು ಊಟಮಾಡುವುದಿಲ್ಲವೆ? ನಿಮಗೆ ಇಷ್ಟೊಂದು ಗರ್ವ ಬಂದಿತೆ? ಆ ಕುಲಿಂದನನ್ನು ಸಂಕೋಲೆಯಿಂದ ಬಂಧಿಸಿ ಅವನ ಧನವೆಲ್ಲವನ್ನೂ ಕಿತ್ತುಕೊಳ್ಳುವೆನು!" ಎಂದು ಅಬ್ಬರಿಸಿದನು. ಆಗ ಸೇವಕರು "ಸ್ವಾಮಿ-ಮಂತ್ರಿಶ್ರೇಷ್ಠ, ನಮಗೆ ಗರ್ವವೇನೂ ಇಲ್ಲ. ಈ ದಿವಸ ಏಕಾದಶಿಯಾದ್ದರಿಂದ ನಾವು ಊಟ ಮಾಡುವುದಿಲ್ಲ. ಅಲ್ಲದೆ ನಾವು ಬರುವಾಗ ಕೆಲವು ಕೃತಘ್ನರ ಸಂಪರ್ಕ ಉಂಟಾಯಿತು. ಆದ್ದರಿಂದ ಈ ದಿನ ನಾವು ಆಹಾರವನ್ನೂ ತೆಗೆದುಕೊಳ್ಳುವುದಿಲ್ಲ." ಎಂದು ತಿಳಿಸಿದರು. ಆ ಮಾತನ್ನು ಕೇಳಿ ಮಂತ್ರಿಗೆ ಸಂತೋಷವಾಯಿತು. ಮಾರನೆಯ ದಿನ ಅವರಿಗೆ ಭೋಜನವನ್ನಿತ್ತು ಅನಂತರ ತಾನು ಊಟ ಮಾಡಿದನು. ಸೇವಕರನ್ನು ಬೀಳ್ಕೊಂಡು ಕುಲಿಂದರಾಜನನ್ನು ನೋಡುವ ಅಪೇಕ್ಷೆಯಿಂದ ಚಂದನಾವತಿಗೆ ಹೊರಟನು. ಮಗನಾದ ಮದನನನ್ನು ಕರೆದು "ನಾನು ಬರುವವರೆಗೆ ರಾಜಕಾರ್ಯವನ್ನು ನೋಡಿಕೊಳ್ಳುತ್ತಿರು" ಎಂದು ತಿಳಿಸಿದನು. ಅಷ್ಟರಲ್ಲಿ ಧೃಷ್ಟಬುದ್ಧಿಯ ಮಗಳಾದ 'ವಿಷಯೆ' ಎಂಬ ಕನ್ಯೆಯು ತಂದೆಯ ಬಳಿಗೆ ಬಂದಳು. ಅವಳು ಬಾಲ್ಯವನ್ನು ಕಳೆದು ಯೌವನದಲ್ಲಿ ಪದಾರ್ಪಣ ಮಾಡಿದ್ದಳು. ಆ ಕನ್ಯೆಯು "ಅಪ್ಪ, ನಾನು ದಿನವೂ ನೀರೆರೆಯುತ್ತಿದ್ದ ಮಾವಿನ ಗಿಡವು ಫಲವನ್ನು ಕೊಡಲಾರಂಭಿಸಿದೆ! ಅದರ ಪೋಷಣೆಗೆ ಮನಸ್ಸುಮಾಡು. ನೀನು ಯಾವಾಗಲೂ ರಾಜಕಾರ್ಯದಲ್ಲಿಯೇ ತೊಡಗಿರುತ್ತೀಯೆ!" ಎಂದಳು. ಧೃಷ್ಟಬುದ್ಧಿಯು ಅವಳನ್ನು ಸಂತೈಸಿ ಸೇವಕರೊಡನೆ ಹೊರಟು ಎರಡು ದಿನಗಳಲ್ಲಿ ಚಂದನಾವತಿಯನ್ನು ಸೇರಿದನು. ಆ ನಗರವನ್ನು ನೋಡಿ "ಗೊಂಡಾರಣ್ಯವಾಗಿದ್ದ ಈ ಪ್ರದೇಶವು ಮಹಾನಗರವಾಗಿ ಬೆಳೆದು ಬಿಟ್ಟಿದೆಯಲ್ಲ!" ಎಂದು ಆಶ್ಚರ್ಯದಿಂದ ಉದ್ಗರಿಸಿದನು. ಕುಲಿಂದರಾಜನು ಪುತ್ರನಾದ ಚಂದ್ರಹಾಸನೊಡನೆ ಧೃಷ್ಟಬುದ್ಧಿಯನ್ನು ಎದುರ್ಗೊಂಡು ತನ್ನ ಅರಮನೆಗೆ ಕರೆದುಕೊಂಡು ಹೋಗಿ ವಿಧಿವತ್ತಾಗಿ ಸತ್ಕರಿಸಿದ ಮೇಲೆ, ನಮಸ್ಕರಿಸಿ ಎದುರಿಗೆ ನಿಂತುಕೊಂಡನು. ಧೃಷ್ಟಬುದ್ಧಿಯು ಪುತ್ರಸಹಿತನಾದ ಕುಲಿಂದನನ್ನು ನೋಡಿ "ಕುಲಿಂದ, ನಿನಗೆ ಮಗನು ಯಾವಾಗ ಜನಿಸಿದನು? ಮಗನು ಹುಟ್ಟಿದ ಸಂಗತಿಯನ್ನು ನಮಗೇಕೆ ತಿಳಿಸಲೇ ಇಲ್ಲ!" ಎಂದು ಕೇಳಿದನು. ಕುಲಿಂದನು "ಪ್ರಭು, ಈತನು ನನ್ನ ಔರಸಪುತ್ರನಲ್ಲ. ತಾನಾಗಿ ದೊರಕಿದವನು. ನನಗೆ ಬಹಳ ಪ್ರಿಯನಾಗಿದ್ದಾನೆ. ಒಂದು ಸಲ ನಾನು ಬೇಟೆ ಯಾಡುವುದಕ್ಕಾಗಿ ಕುಂತಲಪುರಕ್ಕೆ ಎರಡು ಯೋಜನಗಳ ದೂರದಲ್ಲಿರುವ ದಟ್ಟವಾದ ಅರಣ್ಯಕ್ಕೆ ಹೋದೆನು. ಅಲ್ಲಿ ಈ ಹುಡುಗನನ್ನು ಕಂಡೆನು. ಇವನ ಕಾಲಿನ ಆರನೆಯ ಬೆರಳು ಕತ್ತರಿಸಿ ಹೋಗಿತ್ತು. ಬಾಲಕನಿಗೆ ಸುಮಾರು ಐದು ವರ್ಷಗಳಾಗಿದ್ದಿರಬಹುದು. ಇವನಿಗೆ ಚಂದ್ರಹಾಸನೆಂದು ಹೆಸರಿಟ್ಟಿದ್ದೇನೆ. ವಿಷ್ಣುಭಕ್ತನಾದ ಈ ಪುತ್ರನು ಔರಸಪುತ್ರನಿಗಿಂತಲೂ ಹೆಚ್ಚಾಗಿ ನನ್ನ ಪ್ರೀತಿಯನ್ನು ಗಳಿಸಿದ್ದಾನೆ" ಎಂದು ತಿಳಿಸಿದನು.

ಅರ್ಜುನ, ಕುಂತಲರಾಜನ ನುಡಿಯನ್ನು ಕೇಳಿ ಧೃಷ್ಟಬುದ್ಧಿಯು ಯೋಗಿಯಂತೆ ಅಂತರ್ಮುಖನಾದನು! ಆ ಮೂಢಾತ್ಮನಿಗೆ ವಿಷ್ಣುಭಕ್ತನಾದ ಚಂದ್ರಹಾಸನ ಮಹಿಮೆಯ ಅರಿವಾಗಲಿಲ್ಲ. ಆತನು ತನ್ನ ಮನಸ್ಸಿನಲ್ಲಿ "ಓಹೋ! ಆ ಹುಡುಗನೇ ಇವನು! ಇವನಿಗೆ ಹದಿನಾರು ವರ್ಷಗಳಾಗಿವೆ! ಚಾಂಡಾಲರು ಬೆರಳನ್ನು ತೋರಿಸಿ ನನ್ನನ್ನು ವಂಚಿಸಿದರು, ಸಂದೇಹವಿಲ್ಲ. ನನಗೆ ಮದನ, ಅಮಲ-ಎಂಬ ತರುಣರಾದ ಇಬ್ಬರು ಮಕ್ಕಳಿದ್ದಾರೆ. ಚಂದ್ರಹಾಸನು ನನ್ನ ಸಂಪತ್ತುಗಳಿಗೆ ಒಡೆಯನಾದರೆ ಅವರು ಏನು ಮಾಡಬೇಕು! ಗತಿಸಿ ಹೋದುದನ್ನೇ ಮತ್ತೆ ಮತ್ತೆ ಚಿಂತಿಸಿದರೆ ಆಗುವುದೇನು? ಚಿಂತಿಸತಕ್ಕವನೇ ಹಾಳಾಗುವನು. ಆದದ್ದು ಆಗಿಹೋಯಿತು. ಇರಲಿ; ಆ ಮುನಿಗಳು ಹೇಳಿದ ಮಾತನ್ನು ಸುಳ್ಳುಮಾಡುವೆನು!" ಎಂದು ಆಲೋಚಿಸಿದನು. ಅವನ ಬುದ್ಧಿಯು ಒಳಗೊಂದನ್ನು ಚಿಂತಿಸುತ್ತ ಹೊರಗೆ ಇನ್ನೊಂದನ್ನು ನಟಿಸುವ ಪಾಖಂಡನ ಬುದ್ಧಿಯಂತಾಯಿತು. ಆ ಮಂತ್ರಿಯು ಒಳಗೆ ದುರ್ಬುದ್ಧಿಯನ್ನು ತಳೆದು ಹೊರಗಡೆ ಹರ್ಷವನ್ನು ಪ್ರಕಟಿಸುತ್ತ "ಕುಲಿಂದ, ಇಂತಹ ಸುಪುತ್ರನನ್ನು ಪಡೆದ ನಿನ್ನ ಜನ್ಮವು ಸಾರ್ಥಕವಾಯಿತು! ನಿನ್ನ ಮಗನನ್ನು ನೋಡಿ ನನಗೆ ಅತ್ಯಾನಂದವಾಗಿದೆ. ಅದನ್ನು ವರ್ಣಿಸಲಾರೆ!" ಎಂದನು. ಅವನ ನುಡಿಯು ಜೇನುತುಪ್ಪದಲ್ಲಿ ಅದ್ದಿದ ಹರಿತವಾದ ಕತ್ತಿಯಂತೆಯೂ ಹುಲ್ಲಿನಿಂದ ಮುಚ್ಚಿದ ಕೊರಕಲು ಗುಂಡಿಯಂತೆಯೂ ವಿಷವನ್ನು ಬೆರಸಿದ ಅನ್ನದಂತೆಯೂ ಇತ್ತು.

# ಕುಂತಲನಗರಕ್ಕೆ ಚಂದ್ರಹಾಸನ ಪ್ರಯಾಣ

ನಾರದಮುನಿಯು ಹೇಳಿದನು: ಅರ್ಜುನ, ದುರ್ಬುದ್ಧಿಸಾಗರನಾದ ಧೃಷ್ಟಬುದ್ಧಿಯು ತನ್ನ ಮನಸ್ಸಿನಲ್ಲಿಯೇ ಈ ಪ್ರಕಾರವಾಗಿ ಗುಣಿಸಿದನು: "ಮುನಿಗಳ ಮಾತು ಸಟೆಯಾಗುವುದು ಹೇಗೆ? ಈತನು ಸಾಯುವುದು ಹೇಗೆ? ಕುಲಿಂದತನಯನಾದ ಈ ವೈರಿಯನ್ನು ಎದುರಿಗೇ ಕೊಂದುಬಿಡಲೆ? ಹಾಗೆ ಮಾಡಿದರೆ ಇವರೆಲ್ಲರೂ ವಿವಿಧಾಸ್ತ್ರಗಳಿಂದ ನನ್ನನ್ನು ಹಿಂಸಿಸದೆ ಬಿಡುವುದಿಲ್ಲ. ಆಗ ನನ್ನ ಮಕ್ಕಳಾದ ಮದನ ಅಮಲರಿಬ್ಬರಿಗೂ ಕಷ್ಟವೇ ಪ್ರಾಪ್ತವಾಗುತ್ತದೆ. ಈತನನ್ನು ನಾನು ವಧಿಸಲೆ? ಅಥವಾ ರಾಜಭಟರಿಂದ ಕೊಲ್ಲಿಸಲೆ? ಇಲ್ಲ, ಈ ಬಗೆಯಿಂದ ಇವನನ್ನು ಸಂಹರಿಸಲು ಸಾಧ್ಯವಿಲ್ಲ. ಶಿವನು ತನ್ನ ಕಂಠದಲ್ಲಿ ಯಾವುದನ್ನು ಧರಿಸಿದನೋ, ಅದರಿಂದಲೇ ಚಂದ್ರಹಾಸನನ್ನು ಮುಗಿಸಬೇಕು!" ಹೀಗೆ ಆಲೋಚಿಸಿ ಧೃಷ್ಟಬುದ್ಧಿಯು ಚಂದ್ರಹಾಸನನ್ನು ಕರೆದು "ಚಂದ್ರಹಾಸ, ಒಂದು ಪತ್ರವನ್ನೂ ಒಂದು ಲೇಖನಿಯನ್ನೂ ತಂದುಕೊಡು. ಮಸಿಯನ್ನು ತೆಗೆದುಕೊಂಡು ಬಾ. ನಾನು ಒಂದು ಪತ್ರವನ್ನು ಬರೆದು ಕೊಡುವೆನು. ಅದನ್ನು ನೀನೇ ಕುಂತಲಪುರಕ್ಕೆ ಒಯ್ಯಬೇಕು" ಎಂದನು. ಚಂದ್ರಹಾಸನು ಆ ಸಲಕರಣೆಗಳನ್ನು ತಂದು ಕೊಟ್ಟನು. ಧೃಷ್ಟಬುದ್ಧಿಯು ಆ ಸಲಕರಣೆಯೊಂದಿಗೆ ಒಂದು ಏಕಾಂತ ಸ್ಥಳದಲ್ಲಿ ಕುಳಿತು ಈ ರೀತಿಯಲ್ಲಿ ಪತ್ರವನ್ನು ಬರೆದನು:

> **"ಸ್ವಸ್ತಿ ಶ್ರೀರಸ್ತು ಮದನ ವಕ್ತುಂ ಕಾರಣಮೀದೃಶಮ್ ।**
> **ಚಂದ್ರಹಾಸೋ ಹಿತೋತೀವ ಮಮಾಯಂ ಸಂಪದಾಂ ಪದಮ್ ॥**
> **ಜ್ಞಾತವ್ಯೋ ನಾತ್ರ ಸಂದೇಹಃ ಪುತ್ರಕಾರ್ಯಂ ತ್ವಯೇದೃಶಮ್ ।**
> **ಮಾ ರೂಪಂ ಮಾ ವಯೋ ದ್ರಾಕ್ಷೀಃ ಕುಲಂ ಶೀಲಂ ಪರಾಕ್ರಮಮ್ ॥**
> **ಧಿದ್ಯಾಂ ವಿತ್ತಂ ವಿಲಂಬಂ ಮಾಮಿತ್ರಸ್ಯಾಸ್ಯ ಕುರು ಧ್ರುವಮ್ ।**
> **ವಿಷಮಸ್ಮೈ ಪ್ರದಾತವ್ಯಂ ತ್ವಯಾ ಮದನಶತ್ರವೇ ॥**
> **ಪಾರ್ವತೀಶಮಿತಿ ಧ್ಯಾತ್ವಾ ಕೃತಾರ್ಥಾಃ ಸ್ಯಾಮ ಯದ್ವಯಮ್ ॥"**

"ಸ್ವಸ್ತಿ ಶ್ರೀರಸ್ತು. ಮದನ, ಈ ಪತ್ರವನ್ನು ಬರೆದು ತಿಳಿಸಲು ಕಾರಣವು ಈ ರೀತಿ ಇದೆ. ಚಂದ್ರಹಾಸನು ನಮಗೆ ಬಹಳ ಅಹಿತನಾಗಿದ್ದಾನೆ. ಈತನು ನನ್ನ ಸಂಪತ್ತುಗಳಿಗೆ ಮುಂದೆ ಅಧಿಕಾರಿಯಾಗತಕ್ಕವನಿದ್ದಾನೆಂದು ತಿಳಿ. ಇದರಲ್ಲಿ ಸಂದೇಹವೇ ಬೇಡ. ಆದ್ದರಿಂದ ಪುತ್ರ, ನೀನು ಈ ರೀತಿಯಲ್ಲಿ ಮಾಡಬೇಕು. ಈತನ ರೂಪವನ್ನಾಗಲಿ ವಯಸ್ಸನ್ನಾಗಲಿ ಕುಲಶೀಲ ಪರಾಕ್ರಮಗಳನ್ನಾಗಲಿ ವಿದ್ಯಾವಿತ್ತಗಳನ್ನಾಲಿ ನೀನು ನೋಡಬೇಕಾದ್ದಿಲ್ಲ. ಸ್ವಲ್ಪವೂ ತಡಮಾಡಬೇಡ. ಮದನ, ಪಾರ್ವತೀಪತಿಯನ್ನು ಧ್ಯಾನ ಮಾಡಿ ಶತ್ರುವಾದ ಈತನಿಗೆ ವಿಷವನ್ನು ನಿಶ್ಚಯವಾಗಿಯೂ ಕೊಟ್ಟುಬಿಡು! ಅದರಿಂದ ನಾವು ಕೃತಾರ್ಥರಾಗುತ್ತೇವೆ."

ಅನಂತರ ಚಂದ್ರಹಾಸನನ್ನು ಕರೆದು "ಚಂದ್ರಹಾಸ, ನನ್ನ ಮಾತೊಂದನ್ನು ನಡೆಸು, ಕುಂತಲಪುರದಲ್ಲಿ ಒಂದು ಮಹತ್ತರವಾದ ಕಾರ್ಯವಿದೆ. ನೀನು ಹೋಗಿ ಈ ಪತ್ರವನ್ನು ನನ್ನ ಮಗನಾದ ಮದನನಿಗೆ ಕೊಡು. ನನ್ನ ಮೊಹರಿನಿಂದ ಈ ಪತ್ರವನ್ನು ಮುದ್ರಿಸಿದ್ದೇನೆ.

ಇದನ್ನು ತೆರೆಯಬೇಡ. ನನ್ನ ಮಗನಿಗೆ ಈ ಪತ್ರವನ್ನು ಕೊಟ್ಟರೆ ನಿನಗೆ ಗೂಢವಾದ ಒಂದು ಶ್ರೇಯಸ್ಸು ಪ್ರಾಪ್ತವಾಗುವುದು. ಪತ್ರದ ಮುದ್ರೆಯನ್ನೇನಾದರೂ ಒಡೆದರೆ ನಿನಗೆ ಪಾಪವುಂಟಾಗುವುದು. ಪಾರ್ವತೀಪರಮೇಶ್ವರರಲ್ಲಿ ಭೇದವನ್ನೆಣಿಸಿದಷ್ಟು ದೋಷ ಒದಗೀತು. ಕುದುರೆಯನ್ನೇರಿ ನಾಲ್ವರು ಸೇವಕರೊಡನೆ ಶೀಘ್ರವಾಗಿ ಪ್ರಯಾಣ ಮಾಡಿ, ವತ್ಸ, ಧರ್ಮನಿಷ್ಠನಾದ ನನ್ನ ಮಗನನ್ನು ಕಾಣು" ಎಂದು ತಿಳಿಸಿದನು. ಚಂದ್ರಹಾಸನು ಹಾಗೆಯೇ ಆಗಲೆಂದು ಹೇಳಿ ಪತ್ರವನ್ನು ತೆಗೆದುಕೊಂಡು ಮಂತ್ರಿಯಾದ ಧೃಷ್ಟಬುದ್ಧಿಯೂ ತಂದೆಯಾದ ಕುಲಿಂದನಿಗೂ ನಮಸ್ಕರಿಸಿ ತಾಯಿಯಾದ ಮೇಧಾವತಿಯನ್ನು ಕಾಣಲು ತ್ವರೆಯಿಂದ ಹೋದನು. ಅವಳನ್ನು ಕಂಡು ನಮಸ್ಕರಿಸಿ ತಾನು ಕುಲಿಂದಪುರಕ್ಕೆ ಹೋಗಬೇಕಾಗಿಬಂದ ಸಂದರ್ಭವನ್ನು ತಿಳಿಸಿದನು. ಮೇಧಾವತಿಯು ಮಗನಿಗೆ ಸೇಸೆಯನ್ನೆತ್ತಿ ಮೊಸರು ದೂರ್ವೆ ಅಕ್ಷತೆಗಳಿಂದ ಸಂಮಿಶ್ರವಾದ ತಿಲಕವನ್ನಿಟ್ಟು ಈ ರೀತಿಯಲ್ಲಿ ಆಶೀರ್ವದಿಸಿದಳು: "ಮಗು, ಪಂಥಾನಃ ಸಂತು ತೇ ಶಿವಾಃ. ಶ್ರೀಮನ್ನಾರಾಯಣನು ಸರ್ವದಾ ನಿನ್ನ ಮುಖವನ್ನು ಪಾಲಿಸಲಿ! ನಿನ್ನ ಬಾಹುಗಳನ್ನು ಜನಾರ್ದನನೂ ಎದೆಯನ್ನು ಹೃಷಿಕೇಶನೂ ಉದರವನ್ನು ಮಾಧವನೂ ನಾಭಿಯನ್ನು ಪದ್ಮನಾಭನೂ ರಕ್ಷಿಸಲಿ. ಕಿಬ್ಬೊಟ್ಟೆಯನ್ನು ನೃಸಿಂಹನೂ ಕಟಿಯನ್ನು ಕಮಲಾಕ್ಷನೂ ತೊಡೆಗಳನ್ನು ಮಧುಸೂದನನೂ ಮೊಳಕಾಲುಗಳನ್ನು ಯಜ್ಞಭೋಕ್ತನೂ ಕಾಲಿನ ಹರಟುಗಳನ್ನು ದಾಮೋದರನೂ ಕಾಪಾಡಲಿ. ಸಹಸ್ರಪಾದನು ನಿನ್ನ ಪಾದಗಳನ್ನೂ ಸಹಸ್ರಾಕ್ಷನು ಕಣ್ಣುಗಳನ್ನೂ ಪಾಲಿಸಲಿ. ವತ್ಸ, ತ್ರಿವಿಕ್ರಮನು ಸರ್ವಶರೀರವನ್ನೂ ರಕ್ಷಿಸಲಿ. ಸಹಜವಾದ ಕಾಂತಿಯೊಡನೆ ಹೇಗೆ ನೀನು ಮಹಾರಾಜನ ಕುಕ್ಷಿಗೆ ಬಂದು ಸೇರಿದೆಯೋ ಹಾಗೆಯೇ ಶೀಘ್ರದಲ್ಲಿ ನೀನು ಅನುರೂಪಳಾದ ಪತ್ನಿಯೊಡನೆ ವಿಹರಿಸುವಂತಾಗಲಿ!" ಎಂದು ಹರಸಿದಳು. ಚಂದ್ರಹಾಸನು ತಾಯಿಗೆ ಪ್ರದಕ್ಷಿಣೆ ಮಾಡಿ ನಮಸ್ಕರಿಸಿದನು. ಆಮೇಲೆ ಅಶ್ವಾರೂಢನಾಗಿ ನೆಚ್ಚಿದ ಸೇವಕರೊಡನೆ ಪ್ರಯಾಣ ಮಾಡಿದನು. ನಗರದಿಂದ ಹೊರಡುವಾಗಲೇ ಅರಿಶಿನ ಕುಂಕುಮಗಳನ್ನು ಲೇಪಿಸಿಕೊಂಡು ಗ್ರಾಮಾಂತರದಿಂದ ಬರುತ್ತಿದ್ದ ಸುಂದರರಾದ ನವದಂಪತಿಗಳನ್ನು ಕಂಡನು. ಸ್ವಲ್ಪ ದೂರದಲ್ಲಿಯೇ ಮೊದಲನೆಯದಾಗಿ ಪ್ರಸವಿಸಿ ಕರುವಿನೊಡನೆ ನಿಂತಿದ್ದ ಗೋವನ್ನು ವೀಕ್ಷಿಸಿದನು. ದಾರಿಯಲ್ಲಿ ಉದ್ಯಾನಪಾಲಕರು ಚಂದ್ರಹಾಸನಿಗೆ ದಾಳಿಂಬರೆ ಹಣ್ಣುಗಳನ್ನು ಕಾಣಿಕೆಯಾಗಿ ಕೊಟ್ಟರು. ಕೆಲವರು ಸಂಪಗೆಯ ಮಾಲೆಯನ್ನರ್ಪಿಸಿದರು. ಕೆಲವರು ಹೂಗಳಿಂದ ರಚಿಸಿದ ಬಾಸಿಗವನ್ನು ಅವನ ಹಣೆಯ ಮೇಲ್ಗಡೆ ತೊಡಿಸಿದರು. ಸುಂದರಾಂಗನಾದ ಚಂದ್ರಹಾಸನು ನೂತನ ವರನೋ ಎಂಬಂತೆ ರಂಜಿಸಿದನು!

ಕುಂತಲಪುರವು ಸಮೀಪಿಸಿತು. ಅದರ ಸಮೀಪದಲ್ಲಿದ್ದ ಉದ್ಯಾನವನದಲ್ಲಿ ರಮ್ಯವಾದ ಒಂದು ಸರೋವರವಿತ್ತು. ಅಲ್ಲಿ ಹಂಸಿಗಳು ಹಂಸಗಳೊಡನೆ ಗೃಹಸ್ಥಧರ್ಮವನ್ನು ಪಾಲಿಸುತ್ತಿದ್ದವು! ತಾವರೆಗಳ ಸಮೃದ್ಧಿಯಿಂದ ಬಿಳಿಯ ರಾಜಹಂಸಗಳು ರಂಜಿಸುತ್ತಿದ್ದವು. ತಿಳಿನೀರಿನ ಕಾಸಾರದ ಸುತ್ತಲೂ ಕಮಲನೀಲವಾದ ವನವನ್ನು ಚಂದ್ರಹಾಸನು ಕಂಡನು.

ಪರಮರಮಣೀಯವಾದ ಆ ಉದ್ಯಾನವನದಲ್ಲಿ ವಸಂತನು ನೆಲೆಯೂರಿರುವನೆಂದು ಚಂದ್ರಹಾಸನು ಭಾವಿಸಿದನು. ಅರಳಿದ ಮುತ್ತುಗದ ಹೂವನ್ನು ನೋಡಿದರೆ, ವಸಂತನು ವನಲಕ್ಷ್ಮಿಯೊಡನೆ ವಿಹರಿಸಿದ್ದರಿಂದ ಅವನ ಮುಖದಲ್ಲಿ ಅವಳ ಕುಂಕುಮವು ಹತ್ತಿದೆಯೆಂದೂ, ತಮಾಲ ನೀಲಚ್ಛಾಯೆಯನ್ನು ನೋಡಿದರೆ, ಅವಳ ಕಣ್ಣಿನ ಕಾಡಿಗೆಯು ಬಳಿದಿದೆಯೆಂದೂ, ಎಲೆಬಳ್ಳಿಗಳನ್ನು ನೋಡಿದರೆ ವಸಂತಲಕ್ಷ್ಮಿಯ ಕೆನ್ನೆಯಲ್ಲಿದ್ದ ಪತ್ರವಲ್ಲಿಯು ಲಿಪ್ತವಾಗಿದೆಯೆಂದೂ ಹೇಳಬಹುದಾಗಿತ್ತು! ಆ ವಸಂತಕಾಲದಲ್ಲಿ ಮರಗಳೆಲ್ಲವೂ ಚಿಗುರಿದ್ದವು. ಮಾವಿನ ಮರಗಳಲ್ಲಿ ಸುಂದರವಾದ ಚಿಗುರೆಲೆಗಳೂ ಹೂವಿನ ತೆನೆಗಳೂ ತೂಗಾಡುತ್ತಿದ್ದವು. ಮಾವಿನ ಮರದಲ್ಲಿ ಕೋಗಿಲೆಯು ಕುಳಿತು ಮನ್ಮಥನ ದೂತಿಯಂತೆ ಕಾಮಿಗಳ ಮನಸ್ಸನ್ನು ಆಕರ್ಷಿಸುತ್ತ ಇಂಪಾದ ಧ್ವನಿಯಿಂದ ಕೂಗುತ್ತಿತ್ತು. ಪುನ್ನಾಗ, ಬಕುಳ, ಅಶೋಕ, ಸಂಪಗೆಗಳು ಅರಳಿದ್ದವು. ಮಲ್ಲಿಗೆ, ಕಾಡುಮಲ್ಲಿಗೆ, ಜಾಜಿ, ಕೇದಗೆಗಳು ಪುಷ್ಪಸ್ತಬಕಗಳೆಂಬ ಸ್ತನಗಳ ಭಾರದಿಂದ ಬಗ್ಗಿದ್ದವು. ಅವು ಹೂಗಳ ಪರಿಮಳವನ್ನು ಬೀರುತ್ತ ಅಡಗಿದ ದುಂಬಿಗಳೆಂಬ ನೇತ್ರ ಉಳ್ಳವುಗಳಾಗಿ ಹೂಮಳೆಗರೆದು ತಮ್ಮ ಕಾಂತನಾದ ವಸಂತನನ್ನು ಪೂಜಿಸುತ್ತಿದ್ದವು!

ಅರ್ಜುನ, ಚಂದ್ರಹಾಸನು ಆ ವಸಂತೋತ್ಸವವನ್ನು ವೀಕ್ಷಿಸಿ ಆನಂದಿಸಿದನು. "ಆಹಾ! ಶ್ರೀಹರಿಯ ಮಹಿಮೆ ಎಂತಹುದು!" ಎಂದುಕೊಳ್ಳುತ್ತ ಕೊಳದಲ್ಲಿ ಸ್ನಾನ ಮಾಡಿ ಅಲ್ಲಿ ಬೆಳೆದಿದ್ದ ಹೂಗಳಿಂದ ಭಗವಂತನನ್ನು ಪೂಜಿಸಿ ತಂದಿದ್ದ ಪಾಥೇಯವನ್ನು ಭುಜಿಸಿದನು. ಅವನ ಸೇವಕರು ಕುದುರೆಯನ್ನು ಒಂದು ಮಾವಿನ ಮರಕ್ಕೆ ಕಟ್ಟಿ, ಹಸಿರು ಹುಲ್ಲು ಮುಂತಾದ್ದನ್ನು ಅದಕ್ಕೆ ಕೊಟ್ಟರು. ಚಂದ್ರಹಾಸನು ವಿಶ್ರಾಂತಿಗಾಗಿ ಮಲಗಿ ನಿದ್ರಿಸಿದನು.

ಕುಂತಲರಾಜನಿಗೆ ಚಂಪಕಮಾಲಿನಿಯೆಂಬ ಮಗಳಿದ್ದಳು. ಧೃಷ್ಟಬುದ್ಧಿಯ ಮಗಳಾದ ವಿಷಯೆಯು ಸೌಂದರ್ಯದಲ್ಲಿ ರತಿಯನ್ನು ಮೀರಿಸತಕ್ಕವಳಾಗಿದ್ದಳು. ಅವರಿಬ್ಬರೂ ನೂರಾರು ಗೆಳತಿಯರಿಂದ ಪರಿವೃತರಾಗಿ, ವಸಂತಾಗಮನದಿಂದ ಪುಷ್ಪಾಢ್ಯವಾಗಿ ರಮಣೀಯವಾದ ನಗರೋದ್ಯಾನಕ್ಕೆ ಬಂದರು. ಹೂಗಳನ್ನು ಕೀಳಬೇಕೆಂಬುದು ಅವರ ಬಯಕೆಯಾಗಿತ್ತು. ಆ ಬಾಲೆಯರು ಸುಮಾರು ಹದಿಮೂರು ಹದಿಮೂರುವರೆ ವರ್ಷದವರು. ತಾರುಣ್ಯವು ಉದಿಸಿದ್ದರಿಂದ ಚಂಚಲೆಯರಾಗಿದ್ದರು. ಎಲ್ಲರೂ ಕುಸುಬೆ ಹೂವಿನ ಬಣ್ಣದ ಸೀರೆಯನ್ನುಟ್ಟು ಮೃದುವಾದ ರವಿಕೆಗಳನ್ನು ಧರಿಸಿ ಬಿಲ್ವಫಲಗಳಂತಿರುವ ಸ್ತನಗಳಿಂದ ಭೂಷಿತರಾಗಿದ್ದರು. ಮುತ್ತಿನ ಹಾರಗಳನ್ನು ಧರಿಸಿದ್ದರು. ಆ ಬಾಲೆಯರು ಕಾಲಂದುಗೆಯ ಝಣತ್ಕಾರದೊಡನೆ ನರ್ತಿಸುತ್ತ, ಚಪ್ಪಾಳೆ ತಟ್ಟಿ ಹಾಡುತ್ತ, ನಗುತ್ತ, ತಾಂಬೂಲ ರಸವನ್ನು ಸುರಿಸುತ್ತ, ಕೋಕಿಲಾಲಾಪದಿಂದ ಮುಖರಿತವಾದ ಉದ್ಯಾನವನಕ್ಕೆ ಬಂದರು. ಅವರಲ್ಲಿ ಹಸ್ತಿನಿ ಎಂಬ ಒಬ್ಬ ತರುಣಿಯು ಹೂಗಳನ್ನು ನೋಡುವ ಕುತೂಹಲದಿಂದ ಮುಂದೆ ಹೋದಳು. ಅವಳನ್ನು ನೋಡಿ ಬಿಲ್ವಸ್ತನಿಯಾದ ಇನ್ನೊಬ್ಬಳು ಹೆದರಿದವಳಂತೆ "ಎಲೆ ಹಸ್ತಿನಿ, ಹೂಗಳಿಗಾಗಿ ಒಬ್ಬಳೇ ಪೊದೆಯ ಬಳಿಗೆ

ಹೋಗಬೇಡ, ಮುಕ್ತಾಫಲಾಲಂಕೃತವಾದ ನಿನ್ನ ಕುಚಕುಂಭಗಳನ್ನು ಮನುಷ್ಯರೂಪದ ಸಿಂಹವು ಗೀರಿಬಿಟ್ಟೀತು?" ಎಂದು ಹಾಸ್ಯಮಾಡಿದಳು. ಅವರೆಲ್ಲರೂ ನಗುನಗುತ್ತ ಮಾಲತಿ ಯೂಥಿಕಾ ಜಾತಿಮೋಗರ-ಮುಂತಾದ ಬಳ್ಳಿಗಳಿಂದ ಹೂಗಳನ್ನು ಕಿತ್ತರು. ಆ ಬಾಲೆಯರು ಹೂಗಳಿಂದ ಮಾಲೆಗಳನ್ನು ರಚಿಸಿ ಕೊರಳಲ್ಲಿ ಧರಿಸಿದರು. ಆಗ ಚಂಪಕಮಾಲಿನಿಯು ಹೂಗಳಿಂದ ಕೂಡಿದ ಒಂದು ದಾಳಂಬರೆ ಮರವನ್ನು ಮಂತ್ರಿಪುತ್ರಿಯಾದ ವಿಷಯೆಗೆ ತೋರಿಸುತ್ತ "ಸುಂದರಿ-ವಿಷಯೆ, ಎದುರಿಗಿರುವ ಒಂದು ಅದ್ಭುತವನ್ನು ನೋಡು! ಮೊದಲು ಪುಷ್ಪವು ಕಾಣಿಸುತ್ತದೆ. ಆಮೇಲೆ ಫಲವು ಜನಿಸುತ್ತದೆ! ಎಲೆ ಬಿಲ್ವಫಲಸ್ತನಿ, ನಿನ್ನಲ್ಲಿ ಮಾತ್ರ ಈ ಕ್ರಮವು ಹಿಂದುಮುಂದಾಯಿತೇಕೆ?" ಎಂದು ನುಡಿದಳು. ಅದಕ್ಕೆ ವಿಷಯೆಯು "ಅದು ವನಸ್ಪತಿಗಳ ಸ್ವಭಾವ!" ಎಂದು ಉತ್ತರವಿತ್ತಳು. ಹೀಗೆ ವಿನೋದಿಸುತ್ತ ಹೂಗಳನ್ನು ಕಿತ್ತು ರಾಜಪುತ್ರಿಯಾದ ಚಂಪಕಮಾಲಿನಿಯು ಬಳಲಿದಳು. ಅವಳು ಆಯಾಸದಿಂದ ಬೆವರಿ ತಲೆಯ ಕಡೆಯಲ್ಲಿ ಹೂಗಳ ರಾಶಿಯನ್ನಿಟ್ಟುಕೊಂಡು ಮಲಗಿದಳು. ಆಗ ವಿಷಯೆಯು ರಾಜಪುತ್ರಿಯನ್ನು ಕುರಿತು "ಸುಂದರಿ, ಹೀಗೆ ಹೂಗಳನ್ನು ತಲೆಯ ಬಳಿಯಲ್ಲಿಟ್ಟು ಮಲಗಬೇಡ. ವನದಲ್ಲಿ ಸಂಚರಿಸುವ ಭೋಗಿಯಾದ ಕುಂಡಲಿಯು* ನಿನ್ನ ಬಳಿಗೆ ಬಂದುಬಿಡುವ ಸಂಭವವುಂಟು!" ಎಂದು ಹಾಸ್ಯ ಮಾಡಿದಳು. ಅದಕ್ಕೆ ರಾಜಪುತ್ರಿಯು ಹೀಗೆಂದಳು: "ವಿಷಯೆ, ನಿನ್ನ ಮುಖದಲ್ಲಿ ಚಂದ್ರನನ್ನು ಜಯಿಸುವ ಕಾಂತಿಯುಂಟು. ವಕ್ಷಃಸ್ಥಳದಲ್ಲಿ ಸ್ತನಗಳು ವಿರಾಜಿಸುತ್ತಿವೆ. ನಿನ್ನ ಭಕ್ತಿಗೆ ಮೆಚ್ಚಿ ರತಿಮನ್ಮಥರು ಸ್ವಪ್ನದಲ್ಲಿ ಕಾಣಿಸಿಕೊಂಡು, ಈಗ ನಿನ್ನ ಎದೆಯಲ್ಲಿ ಲಿಂಗರೂಪವನ್ನು ಧರಿಸಿ ಪ್ರಕಟವಾದರೋ ಹೇಗೆ? ಸಖಿ, ಈ ಲಿಂಗಗಳನ್ನು ಪೂಜಿಸಲು ಯೋಗ್ಯನಾದ ಒಬ್ಬ ತರುಣನನ್ನು ನೇಮಿಸಿಕೊ! ಪರಿಮಳಯುಕ್ತವಾದ ಚಂದನ, ಕೇಸರ, ಚಂದ್ರ, ವಿಚಿತ್ರವಾದ ಪತ್ರಾಳಿಗಳು-ಇವುಗಳಿಂದ ಅರ್ಚಿಸಲು ಆತನು ಸಮರ್ಥನಾಗಿರಲಿ! ಬೇಸರವಿಲ್ಲದೆ ಹಗಲು ರಾತ್ರಿಯೂ ಅವನು ಇವುಗಳನ್ನು ಅರ್ಚಿಸುವಂತಿರಬೇಕು! ನಿನ್ನ ಪ್ರಾಣಗಳನ್ನಾದರೂ ಒತ್ತೆ ಇಟ್ಟು ಅಂತಹ ಪೂಜಾರಿಯನ್ನು ವಶಪಡಿಸಿಕೊ. ಓಹೊ! ಗೆಳತಿ, ನಿನ್ನ ಎಡಗಣ್ಣು ಹಾರುತ್ತಿದೆ. ಮಾವಿನ ಮರದಲ್ಲಿ ಕಾಗೆಯು ಕೂಗುತ್ತಿದೆ! ನಿನ್ನ ಇಬ್ಬರು ದೇವತೆಗಳನ್ನು ಪೂಜಿಸತಕ್ಕ ಪ್ರಿಯಕರನಾದ ಅರ್ಚಕನು ಬಂದನೆಂದು ಸೂಚನೆಯಾಗುತ್ತಿದೆ!" ಎಂದಳು. ಚಂಪಕಮಾಲಿನಿಯ ಕೊಂಕುನುಡಿಯನ್ನು ಕೇಳಿ ವಿಷಯೆಯು ಲಜ್ಜೆಯಿಂದ ನಕ್ಕಳು. ಆಮೇಲೆ ಸಖಿಯರನ್ನು ನೋಡಿ "ಇನ್ನು ಹೂಗಳನ್ನು ಕೀಳುವುದು ಸಾಕು. ಸೂರ್ಯನ ಬಿಸಿಲಿನಿಂದ ಸಂತಪ್ತರಾದೆವು. ತಣ್ಣೀರಿಂದ ತುಂಬಿದ ಆ ತಾವರೆಯ ಕೊಳಕ್ಕೆ ಹೋಗೋಣ" ಎಂದಳು. ಅವಳ ಮಾತನ್ನು ಕೇಳಿ ಕನ್ಯಕೆಯರೆಲ್ಲರೂ ಉದ್ಯಾನವನದಿಂದ ಹೊರಟರು. ಆ ಸಮಯದಲ್ಲಿ ಇಬ್ಬರು ಬಾಲೆಯರು ಉಯ್ಯಾಲೆಯಲ್ಲಿ ಕುಳಿತು ಇಂಪಾಗಿ ಹಾಡುತ್ತ ಒಬ್ಬರಿಗೊಬ್ಬರು ಕುಚಮಂಡಲದ ಮೇಲೆ ಹೊಡೆಯುತ್ತಿದ್ದರು. ಆಗ ಮುತ್ತಿನ ಸರವು ಹರಿದುಹೋಯಿತೆಂದು ಅವರಿಬ್ಬರೂ ಉಯ್ಯಾಲೆಯಿಂದ ಇಳಿದರು. ಅಷ್ಟರಲ್ಲಿ ಒಬ್ಬಳು ಹೂಗಳನ್ನು ರಾಶಿಯಾಗಿ ಕಿತ್ತು ತಂದು ರಾಜಪುತ್ರಿಯ ಮೇಲೂ ಮಂತ್ರಿಪುತ್ರಿಯ ಮೇಲೂ

* ಭೋಗಿ, ಕುಂಡಲಿ = ಸರ್ಪ; ಭೋಗಶೀಲನೂ ಕುಂಡಲಧಾರಿಯೂ ಆದ ತರುಣ.

ಸುರಿದಳು. ಹೀಗೆ ಕ್ರೀಡಿಸುತ್ತ ಅವರೆಲ್ಲರೂ ತಾವರೆಯ ಕೊಳಕ್ಕೆ ಬಂದರು. ಬಾಲೆಯರ ನೂಪುರಧ್ವನಿಯನ್ನು ಕೇಳಿ ಸರೋವರದಲ್ಲಿದ್ದ ಹಂಸಗಳು ಹೆದರಿದವು. "ಪುಷ್ಪವತಿಯರಾದ ಕಾಮಿನಿಯರು ಬರುತ್ತಿದ್ದಾರೆ! ನಮಗೆ ಚಿತ್ತೋಲ್ಲಾಸಕರವಾದ ಈ ಕೊಳವನ್ನು ಮಲಿನಗೊಳಿಸುತ್ತಾರೆ!" ಎಂಬ ಭಯದಿಂದ ಹಂಸಗಳು ಹಾರಿ ಹೋದವು!

ಅರ್ಜುನ, ಸರಸ್ತೀರದಲ್ಲಿ ಆ ಹುಡುಗಿಯರು ರೇಷ್ಮೆಯ ದುಕೂಲಗಳನ್ನೂ ರವಿಕೆಗಳನ್ನೂ ಬಿಚ್ಚುತ್ತಿರಲು, 'ಈ ಸುಂದರಿಯರು ನಮ್ಮನ್ನು ತ್ಯಜಿಸುತ್ತಾರೆ!' ಎಂಬ ದುಃಖದಿಂದ ಆ ವಸ್ತ್ರಗಳು 'ಮರ್ಮರ' ಎಂದು ಆಕ್ರೋಶಿಸಿದವು! ತೆಳುವಾದ ದುಕೂಲಗಳನ್ನು ಸಹ ಹಾರಿಸಲು ವಾಯುವಿಗೆ ಶಕ್ಯವಾಗಲಿಲ್ಲ. ಗುಣಮಯ[೧] ಪಾಶಗಳಿಂದ ಬದ್ಧನಾಗಿ ಅವನು ನಿಶ್ಚಲನಾದನು! ಸಂಪಗೆಯ ಹೂವಿನಂತೆ ಮೈಬಣ್ಣ ಉಳ್ಳವರೂ ಚಿನ್ನದ ಪದಕಗಳನ್ನು ಕೊರಳಲ್ಲಿ ಧರಿಸಿದವರೂ ಆದ ಬಾಲೆಯರು ಶಿವಲೀಲೆಯಿಂದ[೨] (ದಿಗಂಬರರಾಗಿ) ಸರಸ್ಸಿನಲ್ಲಿ ಇಳಿದರು. ಆಳವಿಲ್ಲದ್ದೂ ಮಲೀನವೂ ಆದ ಆ ಕೊಳವು ಆಗ ಅಗಾಧವೂ ನಿರ್ಮಲವೂ ಆಯಿತು! ಆ ಬಾಲೆಯರು ಅನ್ಯೋನ್ಯವಾಗಿ ಹಾಸ್ಯದ ಮಾತುಗಳನ್ನಾಡುತ್ತ ಜಲಕೇಳಿಯನ್ನಾಡಿದರು. ಆಟಕ್ಕಾಗಿ ನೀರನ್ನು ಬಡಿಯುವಾಗ ಮುತ್ತಿನ ಸರಗಳು ಹರಿದು, ಮುತ್ತುಗಳು ಕೊಳದಲ್ಲಿ ತೂರಾಡಿದವು. ಮಣಿಕಟ್ಟಿನಲ್ಲಿದ್ದ ಹವಳಗಳಿಂದ ಕೊಳವು ಚಿತ್ರವರ್ಣವಾಯಿತು.

ಅಲ್ಲದೆ ಅನಂತಶ್ರೀಧರವಾಗಿ* ಹುಡುಗಿಯರ ಮುಖಚಂದ್ರಗಳಿಂದ ಅಲಂಕೃತವಾದ ಆ ಸರೋವರವು ಸ್ಪಷ್ಟವಾಗಿ ರತ್ನಾಕರದಂತೆ ಶೋಭಿಸಿತು! ಆ ತರುಣಿಯರು ತಮ್ಮ ಸ್ತನಗಳ ಕುಂಕುಮ, ಕಸ್ತೂರಿ, ಚಂದನ, ಅಗರುಗಳ ಪರಿಮಳದಿಂದ ಸುಗಂಧಿಯಾದ

---

೧. ಗುಣ = ವಸ್ತ್ರದ ಎಳೆ : ಸೌಂದರ್ಯಾದಿ ಗುಣ.

೨. ಇಲ್ಲಿ ಮೂಲವು ಹೀಗಿದೆ :

ತಾಶ್ಚಂಪಕಾಂಗ್ಯೋ ವಿವಿಶುಸ್ತತ್ಸರಃ ಶಿವಲೀಲಯಾ ।
ಅಗಾಧಂ ನಿರ್ಮಲಂ ಗಾಧಂ ಕಲುಷಂ ತತ್ಸರೋಽಭವತ್ ॥
ಕನ್ಯಾಭಿರ್ನಿಷ್ಕಂಠೀಭಿಸ್ತಾದೃಶೀಭಿರಧಿಷ್ಠಿತಮ್ ॥

ಗಾಧವೂ ಕಲುಷವೂ ಆದ ಕೊಳವು ಶಿವನ ಮಾಯಾಲೀಲೆಯಿಂದ ಅಗಾಧವೂ ನಿರ್ಮಲವೂ ಆಯಿತೆಂಬ ಇನ್ನೊಂದು ಅರ್ಥವೂ ಕವಿಗೆ ವಿವಕ್ಷಿತವಿರಬಹುದು. ಕೊಳವು ಕಲುಷವಾಗಿತ್ತೆಂದರೆ ಕೊಳೆಯಾದ ನೀರು ಇದ್ದಿತೆಂದು ಅಭಿಪ್ರಾಯವಲ್ಲ. ತಿಳಿನೀರು ನೀಲವರ್ಣವಾಗಿ ಕಾಣುತ್ತಿತ್ತು. ಸ್ತ್ರೀಯರ ದೇಹಕಾಂತಿ ಮತ್ತು ಚಿನ್ನದ ಪದಕಗಳ ಕಾಂತಿಗಳಿಂದ ನೀರು ವರ್ಣಾಂತರಗೊಂಡು ನಿರ್ಮಲವಾಗಿ ಹೊಳೆಯಿತು. ಮತ್ತು ಅವರ ಜಲಕೇಳಿಯಿಂದ ನೀರು ಉಕ್ಕಿ ಅಗಾಧವಾಗಿ ಕಾಣಿಸಿತು. ಹಿಂದೀ ಭಾಷೆಯ ಅನುವಾದಕರು ಶಿವಲೀಲೆಯೆಂದರೆ ಸುಖಲೀಲೆಯೆಂದೂ ಅಗಾಧವೂ ನಿರ್ಮಲವೂ ಆದ ಕೊಳವು ಆ ಸಮಯದಲ್ಲಿ ಗಾಧವೂ ಕಲುಷವೂ ಆಗಿತ್ತು ಎಂದೂ ಅನುವಾದಿಸಿದ್ದಾರೆ.

* ಅನಂತಶ್ರೀಧರ = ಕೊಳದ ಪಕ್ಷದಲ್ಲಿ ಅಪರಿಮಿತವಾದ ಕಾಂತಿಯನ್ನು ಪಡೆದ ಎಂದರ್ಥ. ರತ್ನಾಕರ (ಸಮುದ್ರದ) ಪಕ್ಷದಲ್ಲಿ ಅನಂತನಾದ ಶ್ರೀಧರನನ್ನುಳ್ಳ ಅಥವಾ ವಿಷ್ಣುವನ್ನೂ ಲಕ್ಷ್ಮಿಯನ್ನೂ ಧರಿಸಿದ ಅಥವಾ ಆದಿಶೇಷನನ್ನೂ ಲಕ್ಷ್ಮಿಯನ್ನೂ ಧರಿಸಿದ ಎಂದು ಅರ್ಥ.

ನೀರನ್ನು ಎರಚಾಡಿದರು. ಎರಚಾಟದಿಂದ ಮೇಲೆ ತೂರಾಡಿದ ಜಲಬಿಂದುಗಳ ನೆವದಿಂದ, ಜಲದೇವತೆಗಳೇ ಮುತ್ತುಗಳನ್ನೆರಚಿ ಆಟವಾಡುತ್ತಿರುವರೋ ಎಂಬಂತೆ ಆ ಕನ್ನಿಕೆಯರು ಶೋಭಿಸಿದರು. ನೀರಿನ ಹನಿಗಳು ಗಗನದಲ್ಲಿ ತೂರಾಡುತ್ತಿರಲು, ಮಳೆ ಬರುತ್ತಿದೆಯೆಂದು ಭಾವಿಸಿ ಚಾತಕಪಕ್ಷಿಗಳು ಬಾಯ್ದೆರೆದು ಮೋಡಗಳನ್ನು ನೋಡತೊಡಗಿದವು! ಕೆಲವು ಬಾಲೆಯರು ಚಿನ್ನದಂತಹ ಸುಂದರವಾದ ತಾವರೆಯ ದಂಟುಗಳಿಂದ ಗೆಳತಿಯರನ್ನು ಕಟ್ಟಿದರು. ನಕ್ಕರು; ಗಿರ್ರನೆ ತಿರುಗಿದರು; ಡಿಂಡಿಮದಂತೆ ಕೂಗಿದರು; ಹಾಡಿದರು.

ಈ ಪ್ರಕಾರವಾಗಿ ಅಬಲೆಯರು ಕುಂಕುಮಜಲವಿರುವಂತೆ ಕಾಣಿಸಿದ ಕೊಳದಲ್ಲಿ ಜಲಕೇಳಿಯನ್ನಾಡಿ ಮೇಲೆ ಬಂದು, ತಮ್ಮ ತಮ್ಮ ವಸ್ತ್ರಗಳನ್ನು ಧರಿಸಿದರು. ಆಮೇಲೆ ಕಿವಿಯೋಲೆ, ಮುತ್ತಿನಸರ-ಮುಂತಾದವುಗಳನ್ನು ತೊಟ್ಟು ತಿಲಕದಿಂದ ಅಲಂಕರಿಸಿ ಕೊಂಡರು. ಧೃಷ್ಟಬುದ್ಧಿಯ ಮಗಳಾದ ವಿಷಯೆ ಮಾತ್ರ ಜಲಕೇಳಿಗೆ ಹೋಗದೆ ದಡದಲ್ಲಿ ಸಂಚರಿಸುತ್ತಿದ್ದಳು. ಹಾಗೆ ಸಂಚರಿಸುತ್ತಿರುವಾಗ ವಿಷ್ಣುವು ಗೋಚರಿಸಿದಂತೆ, ಅವಳಿಗೆ ಚಂದ್ರಹಾಸನು ಕಾಣಿಸಿದನು. ಹದಿನಾರು ವರ್ಷದ ವಯಸ್ಸಿನವನೂ ಸುಕುಮಾರನೂ ಮೀಸೆ ಹುಟ್ಟಿದವನೂ ವಿಮಲವೂ ದೀರ್ಘವೂ ಆದ ಹಣೆಯುಳ್ಳವನೂ ರೇಷ್ಮೆಯ ಶಲ್ಯದಿಂದ ಕುದುರೆಯನ್ನು ಕಟ್ಟಿಹಾಕಿ ಮಲಗಿದವನೂ ಆದ ಚಂದ್ರಹಾಸನನ್ನು ವಿಷಯೆ ಕಂಡಳು.

# ಮದನ ಚಂದ್ರಹಾಸರ ಸಂಭಾಷಣೆ

ನಾರದಮುನಿಯು ಹೇಳಿದನು : ಅರ್ಜುನ, ಜಲಕ್ರೀಡೆಯಿಂದ ಕೆಂಪಡರಿದ ಕಣ್ಣುಳ್ಳವರಾಗಿ ಆ ಬಾಲೆಯರು ಮನೆಗೆ ಹೊರಟರು. ವಿಷಯೆಯು ಚಂದ್ರಹಾಸನ ಸೌಂದರ್ಯದಿಂದ ಮೋಹಿತಳಾಗಿ ಹಿಂದೆ ಉಳಿದಳು. ಹೋಗುತ್ತಿರುವ ಜನರ ಗುಂಪಿನಲ್ಲಿ ಒಬ್ಬನಿಗೆ ನಿಧಿಯೊಂದು ಕಂಡರೆ, ಅವನು ಹೇಗೆ ಗುಂಪನ್ನು ಬಿಟ್ಟು ನಿಶ್ಚಲನಾಗಿ ನಿಲ್ಲುವನೋ ಹಾಗೆ ವಿಷಯೆಯು ಹಿಂದೆ ನಿಂತಳು. 'ಆ ಸುಂದರಪುರುಷನ ಬಳಿಗೆ ಹಿಂದಿರುಗಿ ಹೋಗಲೆ? ಬೇಡವೆ?' ಎಂಬ ಅವಳ ವಿವೇಚನೆಯನ್ನು ಮನ್ಮಥನು ಶರಗಳಿಂದ ಕತ್ತರಿಸತೊಡಗಿದನು. ಅವಳು ತನ್ನ ಕಾಲಂದುಗೆಗಳನ್ನು ದಾಸಿಯ ಕೈಯಲ್ಲಿತ್ತು ಸೀರೆಯೂ ಶಬ್ದಮಾಡೀತೆಂಬ ಭಯದಿಂದ ಹೆಜ್ಜೆಯ ಮೇಲೆ ಹೆಜ್ಜೆ ಇಡುತ್ತ ಮೆಲ್ಲನೆ, ಹಂಸಿಯು ಹಂಸದ ಬಳಿಗೆ ಹೋಗುವಂತೆ, ಚಂದ್ರಹಾಸನಿದ್ದಲ್ಲಿಗೆ ಹೋದಳು. ಅಲ್ಲಿ ಕುದುರೆಯು ಹಸಿರು ಹುಲ್ಲನ್ನು ತಿನ್ನುತ್ತಿರುವುದು ಕಾಣಿಸಿತು. ವಿಷಯೆಯು 'ಅಶ್ವರಾಜ, ನನ್ನ ಪ್ರಾಣವು ಪ್ರಿಯನಲ್ಲಿ ನೆಟ್ಟಿದೆ. ಶಬ್ದಮಾಡಿ ಅದನ್ನು ಅಗಲಿಸಬೇಡ!' ಎಂದು ಕುದುರೆಗೆ ಕೈ ಮುಗಿಯುತ್ತ ಮೆಲ್ಲನೆ ಚಂದ್ರಹಾಸನ ಬಳಿಗೆ ಬಂದಳು. ತನ್ನ ಪತಿಯೋ ಎಂಬಂತೆ ಅವನನ್ನು ನೆಟ್ಟ ಕಣ್ಗಳಿಂದ ನೋಡಿದಳು. ಅವನ ಅಂಗಿಯಿಂದ ಹೊರಗೆ ಚಾಚಿದ್ದ ಪತ್ರವು ಅವಳಿಗೆ ಕಾಣಿಸಿತು. ವಿಷಯೆಯು ಆ ಪತ್ರವನ್ನು ಕೈಗೆ ತೆಗೆದುಕೊಂಡು ಅದರ ಮೇಲೆ ತನ್ನ ತಂದೆಯ ಮುದ್ರೆಯೇ ಇದ್ದುದನ್ನು ಕಂಡು ವಿಸ್ಮಿತಳಾಗಿ ಬೇಗನೆ ಅದನ್ನು ಒಡೆದು ಓದಲಾರಂಭಿಸಿದಳು. ಪತ್ರದ ಒಕ್ಕಣೆ ಹಿಂದೆ ಹೇಳಿದಂತೆ "ಸ್ವಸ್ತಿ ಶ್ರೀರಸ್ತು ಮದನ..............." ಎಂದಿತ್ತು. ಅವಳು ಪತ್ರದ ತಾತ್ಪರ್ಯವನ್ನು ಈ ರೀತಿಯಲ್ಲಿ ಗ್ರಹಿಸಿದಳು. "ಸ್ವಸ್ತಿ ಶ್ರೀರಸ್ತು. ಮದನ, ಈ ಪತ್ರವನ್ನು ಬರೆಯಲು ಕಾರಣವೇನೆಂದರೆ, ಚಂದ್ರಹಾಸೋ ಹಿತೋಽತೀವ = ಚಂದ್ರಹಾಸನು ನಮಗೆ ಅತ್ಯಂತ ಹಿತಕರನಾಗಿದ್ದಾನೆ. ಮಮಾಯಂ ಸಂಪದಾಂ ಪ್ರಭುಃ = ಇವನು ನನ್ನ ಸಂಪತ್ತುಗಳಿಗೆ ಪ್ರಭುವಾಗಲು ಅರ್ಹನು. ಇದರಲ್ಲಿ ಸಂದೇಹ ಬೇಡ. ಇವನ ರೂಪ, ವಯಸ್ಸು ಮುಂತಾದ್ದನ್ನು ವಿಚಾರಿಸಬೇಕಾಗಿಯೇ ಇಲ್ಲ. ಎಲ್ಲವೂ ಉತ್ತಮವಾಗಿದೆ. ವಿಲಂಬಂ ಮಾ ಮಿತ್ರಸ್ಯಾಸ್ಯ ಕುರುಧ್ರುವಮ್ = ಮಿತ್ರನಾದ ಈತನ ವಿಷಯದಲ್ಲಿ ವಿಳಂಬವನ್ನು ಮಾಡದೆ ನಾನು ಹೇಳಿದಂತೆ ಮಾಡು. ಮದನ ಶತ್ರುವೇ = ಮನ್ಮಥಶತ್ರವಾದ-ಸೌಂದರ್ಯದಲ್ಲಿ ಮನ್ಮಥನಿಗೂ ಮಿಗಿಲಾದ, ವಿಷಮಸ್ಮೈ ಪ್ರದಾತವ್ಯಮ್ = ಈತನಿಗೆ ವಿಷವನ್ನು ಕೊಡಬೇಕು!" ಎಲಾ! ಇದೇನು? ಬರವಣಿಗೆಯಲ್ಲಿ ಹೊಂದಾಣಿಕೆ ಇಲ್ಲ. 'ಇದರಿಂದ ನಾವು ಕೃತಾರ್ಥರಾಗುತ್ತೇವೆ' ಎಂದಿದೆ. ಓಹೋ! ಒಳ್ಳೆಯ ವರನು ದೊರಕಿದನೆಂಬ ಹರ್ಷೋದ್ರೇಕದಲ್ಲಿ ನನ್ನ ತಂದೆ ಅಕ್ಷರಸ್ಖಾಲಿತ್ಯವನ್ನು ಮಾಡಿದ್ದಾನೆ. ವಿಷಮಸ್ಮೈಪ್ರದಾತವ್ಯಂ ಎಂಬುದು ವಿಷಯಾಸ್ಮೈಪ್ರದಾತವ್ಯಾ ಎಂದಿರಬೇಕು. ಹೀಗೆ ಆಲೋಚಿಸಿ 'ಪತ್ರದ ಅಕ್ಷರವು ಈ ರೀತಿಯಲ್ಲಿದ್ದರೆ ಮದನನು ಇವನಿಗೆ ವಿಷವನ್ನು ಕೊಟ್ಟುಬಿಡುವನು' ಎಂದು ಚಿಂತಿಸಿದಳು. ತರುವಾಯ ಆ ಸುಂದರಿಯು ಮಾವಿನಮರದ ಜಿಗುಟನ್ನು ತೆಗೆದು ಉಗುರಿನಿಂದ 'ವಿಷಯಾಸ್ಮೈ ಪ್ರದಾತವ್ಯಾ' ಎಂದು ತಿದ್ದಿಬಿಟ್ಟಳು!

ಆಮೇಲೆ ಪತ್ರವನ್ನು ಹಾಗೆಯೇ ಅಂಟಿಸಿ ಚಂದ್ರಹಾಸನ ಅಂಗಿಯಲ್ಲಿ ಮೊದಲಿದ್ದಂತೆ ಇರಿಸಿ ಮನೆಯ ಕಡೆಗೆ ಹೊರಟಳು. ಹೋಗುವಾಗ ಮತ್ತೆ ಮತ್ತೆ ತಿರುಗಿ ಚಂದ್ರಹಾಸನನ್ನೇ ನೋಡುತ್ತ ಹೋದಳು.

ವಿಷಯೆಯು ಹಿಂದಿರುಗುವಾಗ ದಾರಿಯಲ್ಲಿ ಅವಳ ಗೆಳತಿಯರು ಕಂಡು "ಸಖಿ, ಇದೇಕೆ ತಡವಾಯಿತು? ನಿನಗೆ ಬಹಳ ಹರ್ಷವಾಗಿರುವಂತೆ ಕಾಣುವುದಲ್ಲ, ಅದೇಕೆ? ಹಿಂದಿರುಗಿ ನೋಡುತ್ತೀಯೆ, ನೃಸಿಂಹನನ್ನು ನೋಡಿದೆಯಾ? ಸಿಂಹವನ್ನು ಕಂಡರೆ ಅಗಲಿ ಬಂದುದು ಹೇಗೆ? ಪ್ರಾಯಶಃ ನಿದ್ರಿಸುತ್ತಿರುವ ಸಿಂಹವನ್ನು ನೋಡಿರಬಹುದು! ಸಿಂಹದ ಸರ್ವಸ್ವವನ್ನೂ ನೀನು ಅಪಹರಿಸಿ ತಂದಿರಬೇಕು! ಓಹೋ! ಹೌದು! ಗುಟ್ಟು ಮಾಡುತ್ತಿದ್ದೀಯೆ!" ಎಂದು ಬಗೆಬಗೆಯಲ್ಲಿ ಹಾಸ್ಯಮಾಡುತ್ತ ತಮ್ಮ ತಮ್ಮ ಮನೆಗಳಿಗೆ ತೆರಳಿದರು. ವಿಷಯೆಯು ನಕ್ಕುಬಿಟ್ಟಳು. ಅವಳು ಕುಂತಲನಗರವನ್ನು ಪ್ರವೇಶಿಸುತ್ತಿರುವಾಗ ವಿವಾಹದ ಮಂಗಳವಾದ್ಯವೂ ಮುತ್ತೈದೆಯರು ಹಾಡುವುದೂ ಕೇಳಿಸಿತು. ವಿಷಯೆಯು ಸೂರ್ಯನನ್ನು ನೋಡಿ "ಸ್ವಾಮಿ, ನನಗೆ ಪ್ರಿಯನಾದ ಪತಿಯನ್ನು ಅನುಗ್ರಹಿಸು" ಎಂದು ಬೇಡುತ್ತ ಗೃಹವನ್ನು ಸೇರಿದಳು. ತನ್ನ ಕಾಂತನನ್ನು ನೋಡಿದ್ದರಿಂದ ಅವಳಿಗೆ ಬಹಳ ಆನಂದವಾಗಿತ್ತು. ಏಳು ಉಪ್ಪರಿಗೆಗಳಿದ್ದ ತನ್ನ ಮನೆಯ ಮಹಡಿಯನ್ನೇರಿ ಚಂದ್ರಹಾಸನಿದ್ದ ದಿಕ್ಕನ್ನು ನೋಡುತ್ತಿದ್ದಳು.

ಇತ್ತ ಸಾಯಂಕಾಲದ ಹೊತ್ತಿಗೆ ಸಿಂಹವಿಕ್ರಮನಾದ ಚಂದ್ರಹಾಸನಿಗೆ ಎಚ್ಚರವಾಯಿತು. ಅವನು ಮುಖವನ್ನು ತೊಳೆದು ಬಾಯಿ ಮುಕ್ಕುಳಿಸಿ ಕುದುರೆಯನ್ನೇರಿದನು. ತನ್ನ ನಾಲ್ವರು ಭೃತ್ಯರೊಡನೆ ಆ ವೀರನು ಕುಂತಲನಗರವನ್ನು ಪ್ರವೇಶಿಸಿದನು. ಆ ನಗರದ ರಾಜನು ಧರ್ಮನಿಷ್ಠನೂ ಒಳ್ಳೆಯ ಮಂತ್ರಾಲೋಚನಾತತ್ಪರನೂ ಈಶ್ವರಧ್ಯಾನನಿರತನೂ ಆಗಿದ್ದನು. ಪುರೋಹಿತನಾದ ಗಾಲವನ ಸೂಕ್ತಿಮುಕ್ತಾಫಲಗಳನ್ನು ಸದಾ ಸಂಗ್ರಹಿಸುತ್ತಿದ್ದನು. ಚಂದ್ರಹಾಸನು ಬೇಗ ಬೇಗನೆ ಧೃಷ್ಟಬುದ್ಧಿಯ ಭವನಕ್ಕೆ ಹೋದನು. ಅಲ್ಲಿ ಅಶ್ವದಿಂದಿಳಿದು ದ್ವಾರಪಾಲಕನನ್ನು ಕುರಿತು "ಎಲೈ ದ್ವಾರಪಾಲಕನೆ, ಒಳಗೆ ಹೋಗಿ ಮದನನಿಗೆ ಈ ಮಾತನ್ನು ತಿಳಿಸು. ಶ್ರೀಮಾನ್ ಧೃಷ್ಟಬುದ್ಧಿಯ ಆದೇಶದಂತೆ ಚಂದ್ರಹಾಸನೆಂಬವನು ಆತನ ಪತ್ರವನ್ನು ತೆಗೆದುಕೊಂಡು ಬಂದು ಹೊರಗಡೆ ನಿಂತಿದ್ದಾನೆ ಎಂಬುದಾಗಿ ಹೇಳು" ಎಂದನು. ದ್ವಾರಪಾಲಕನು ತಲೆಬಾಗಿ ನಮಸ್ಕರಿಸಿ ತನ್ನ ಸ್ವಾಮಿಯಾದ ಮದನನಿಗೆ ಈ ವೃತ್ತಾಂತವನ್ನರುಹಲು ಹೋದನು. ಅರ್ಜುನ, ಆಶ್ಚರ್ಯಕರವಾದ ಮುಂದಿನ ಕ್ರಮವನ್ನು ಕೇಳು. ಆ ದ್ವಾರಪಾಲನು ಒಳಗೆ ಹೋಗಿ ಇನ್ನೊಬ್ಬ ದ್ವಾರಪಾಲನಿಗೆ ಈ ವೃತ್ತಾಂತವನ್ನು ಮದನನಿಗೆ ಮುಟ್ಟಿಸಬೇಕೆಂದು ತಿಳಿಸಿದನು. ಅವನು ಮೂರನೆಯ ದ್ವಾರಪಾಲನಿಗೂ ಆತನು ನಾಲ್ಕನೆಯವನಿಗೂ ನಾಲ್ಕನೆಯವನು ಐದನೆಯವನಿಗೂ ಹೀಗೆಯೇ ಹೇಳಿದನು! ಐದನೆಯ ದ್ವಾರಪಾಲಕನು ಆರನೆಯವನ ಬಳಿಗೆ ಹೋದನು. ಆರನೆಯವನ ಹೆಸರು ವಿವೇಕ. ಆತನು ಮದನನಿಗೆ ಪ್ರಿಯನಾದವನು. ವಿವೇಕನು ಶ್ರದ್ಧಾರೂಪವಾದ ದಂಡವನ್ನು ಹಿಡಿದು ಒಳಗೆ ಹೋಗಿ

ಮದನನನ್ನು ಕಂಡನು. ಶಿವಭಕ್ತನಾದ ಮದನನು ಸಿಂಹಾಸನದಲ್ಲಿ ಕುಳಿತಿದ್ದನು. ಆತನ ಬಲಭಾಗದಲ್ಲಿ ವೇದಶಾಸ್ತ್ರ ಪಂಡಿತರೂ ಸತ್ಕಾವ್ಯಗಳನ್ನು ರಚಿಸುವ ಕವಿಗಳೂ ಕುಳಿತಿದ್ದರು. ಶ್ರೀಕೃಷ್ಣನ ಗುಣಗಳನ್ನು ವರ್ಣಿಸುತ್ತಿದ್ದರು. ಕೆಲವರು ಶ್ರೀ ಕೃಷ್ಣನ ವೇಷವನ್ನು ಧರಿಸಿ ಕೃಷ್ಣನಂತೆ ಹಾಡುತ್ತ ನರ್ತಿಸುತ್ತಿದ್ದರು. ಬಂದಿಗಳು ಶ್ರೀಕೃಷ್ಣನ ಮತ್ತು ಅವನ ಭಕ್ತರ ಮಹಿಮೆಗಳನ್ನು ವರ್ಣಿಸುತ್ತಿದ್ದರು. ಮದನನ ಎಡಭಾಗದಲ್ಲಿ ಕೃಷ್ಣಭಕ್ತರಾದ ಕ್ಷತ್ರಿಯರೂ ನಾನಾದೇಶಗಳಿಂದ ಬಂದಿದ್ದ ರಾಜದೂತರೂ ರಾಜ್ಯಶಾಸ್ತ್ರವಿಶಾರದರೂ ಕುಳಿತಿದ್ದರು. ಧೃಷ್ಟಬುದ್ಧಿಯ ಪುತ್ರನಾದ ಮದನನಿಗೆ ಸೇವಕರು ಚಾಮರವನ್ನು ಬೀಸುತ್ತಿದ್ದರು. ದ್ವಾರಪಾಲಕನಾದ ವಿವೇಕನು ಮದನನಿಗೆ ನಮಸ್ಕಾರವನ್ನು ಮಾಡಿ "ಸ್ವಾಮಿ, ನಾನು ನಿನ್ನ ಪ್ರೀತಿಗೆ ಪಾತ್ರನಾದ ಭೃತ್ಯನಾಗಿದ್ದೇನೆ. ಆದರೆ ನಿನ್ನ ತಂದೆಗೆ ನಾನು ಪ್ರಿಯನಾಗಿಲ್ಲ! ಆತನಿಗೆ ಹಿಂಸಾರೂಪವಾದ ದಂಡವನ್ನು ಹಿಡಿದಿರುವ ಕ್ರೋಧನೆಂಬುವನು ಪ್ರಿಯನಾಗಿದ್ದಾನೆ. ಕ್ರೋಧನು ಅವನ ಸ್ವಾಮಿಯ ಪ್ರಿಯಭಕ್ತ! ಆತನು ಈ ಸಭೆಗೆ ಬರುವುದಕ್ಕೆ ಮೊದಲು ನಾನಾಡುವ ನುಡಿಯನ್ನು ಕೇಳೋಣವಾಗಬೇಕು. ಏನೆಂದರೆ, ಶಾಂತರಾದ ಯೋಗಿಗಳು ಯಾವ ಮಧುಸೂದನನನ್ನು ಸದಾ ಧ್ಯಾನಿಸುವರೋ ಆ ಸ್ವಾಮಿಯ ಭಕ್ತನಾದ ಚಂದ್ರಹಾಸನು ಗೃಹದ್ವಾರದಲ್ಲಿ ಬಂದು ನಿಂತಿದ್ದಾನೆ. ನಾನು ನಿನ್ನ ತಂದೆಗೂ ಭೃತ್ಯನಾದ ಕ್ರೋಧನಿಗೂ ಹೆದರಿಹೋಗಿದ್ದೇನೆ. ನಿನ್ನ ತಂದೆಗೆ ಏನನ್ನೂ ಹೇಳುವುದಿಲ್ಲ. ನಿನ್ನ ಬಳಿಗೆ ಬಂದವನ ವಿಷಯವನ್ನು ಆತನಿಗೆ ತಿಳಿಸುವುದಿಲ್ಲ; ಈ ಸಂಗತಿಯು ಗೊತ್ತಾದರೆ ಭೃತ್ಯನಾದ ಕ್ರೋಧನಾಗಲಿ ನಿನ್ನ ತಂದೆಯೇ ಆಗಲಿ ನನ್ನನ್ನು ಕೊಂದು ಬಿಟ್ಟಾರು!" ಎಂದು ತಿಳಿಸಿದನು. ವಿವೇಕನ ಮಾತನ್ನು ಕೇಳಿದೊಡನೆ ಮದನನು ಪೀಠದಿಂದ ಎದ್ದನು. ಸಭೆಯಲ್ಲಿ ನೆರೆದವರೆಲ್ಲರೂ ಒಡನೆಯೇ ಎದ್ದು ನಿಂತರು. ಮದನನು ತ್ವರೆಯಿಂದ ಹೊರಟು, ಜಾರುತ್ತಿದ್ದ ತನ್ನ ದುಕೂಲವನ್ನೂ ಅದರ ಅಂಚನ್ನೂ ಒಡವೆಗಳನ್ನೂ ಸರಿಪಡಿಸಿಕೊಳ್ಳುತ್ತ, ಭವನದಿಂದ ಹೊರಗೆ ಬಂದು ಹರಿಭಕ್ತನಾದ ಚಂದ್ರಹಾಸನನ್ನು ಕಂಡನು. ಅವನನ್ನು ವಂದಿಸಿ ಆಲಂಗಿಸಿಕೊಂಡು ರಮ್ಯವಾದ ತನ್ನ ಸಭೆಗೆ ಕರೆತಂದನು. ಆಮೇಲೆ ಮದನನು ಚಂದ್ರಹಾಸನನ್ನು ಉತ್ತಮವಾದ ಪೀಠದಲ್ಲಿ ಕುಳ್ಳಿರಿಸಿ ಸತ್ಕರಿಸಿದನು. ಅನಂತರ "ಚಂದ್ರಹಾಸ, ಕುಲಿಂದನೂ ಅವನ ಪತ್ನಿಯೂ ಕುಶಲದಿಂದಿರುವರೆ? ನಿನ್ನ ದೇಶದಲ್ಲಿ ವಿಪ್ರರ ವೇದಾಭ್ಯಾಸವು ಚೆನ್ನಾಗಿ ನಡೆಯುತ್ತಿದೆಯೆ? ಕ್ಷತ್ರಿಯರೂ ವೈಶ್ಯಶೂದ್ರರೂ ವಿಪ್ರರನ್ನು ಸಂಮಾನಿಸುತ್ತಾರೆಯೆ? ಚಾಡಿಖೋರರಿಂದಾಗಲಿ ತೆರಿಗೆಯ ಭಾರದಿಂದಾಗಲಿ ಪ್ರಜೆಗಳಿಗೆ ಹಿಂಸೆಯೇನೂ ಆಗುತ್ತಿಲ್ಲವಷ್ಟೆ? ಶ್ರೀಹರಿಯನ್ನು ಧ್ಯಾನಿಸುತ್ತಿರುವ ನೀನು ಕ್ಷೇಮವಾಗಿ ಪ್ರಯಾಣ ಮಾಡಿ ಬಂದೆಯಷ್ಟೆ? ಇಲ್ಲಿಗೆ ಬಂದ ಉದ್ದೇಶವೇನು? ಜನಪ್ರಿಯವಾದ ಕಾರ್ಯ ಯಾವುದು?" ಎಂದು ವಿಚಾರಿಸಿದನು. ಚಂದ್ರಹಾಸನು "ಮದನ, ನಿಮ್ಮಂತಹ ಸಜ್ಜನರ ಸಹವಾಸದಿಂದ ಸಕಲ ವಿಪತ್ತುಗಳೂ ಮರೆಯಾಗುತ್ತವೆ. ಮೋಕ್ಷದಾಯಕವಾದ ಭಕ್ತಿಯು ಶ್ರೀಕೃಷ್ಣನಲ್ಲಿ ದೃಢವಾಗುತ್ತದೆ. ನಿನ್ನ ತಂದೆಯ ಆದೇಶದಂತೆ ಬಂದಿದ್ದೇನೆ. ಈ ಪತ್ರವನ್ನು ತೆಗೆದುಕೊ, ಏಕಾಂತದಲ್ಲಿ ಓದಿ ನೋಡು. ಯಾವುದೋ ಮಹತ್ತರವಾದ

ರಹಸ್ಯಕಾರ್ಯವಿರುವಂತೆ ಕಾಣುತ್ತದೆ. ಅದು ಯಾವುದೋ ನನಗೆ ತಿಳಿಯದು" ಎಂದು ಹೇಳಿ ಆ ಪತ್ರವನ್ನು ಮದನನಿಗೆ ಕೊಟ್ಟನು. ಮದನನು ಅದನ್ನು ಕೈಯಲ್ಲಿ ಹಿಡಿದುಕೊಂಡು ವಿಸ್ಮಿತನಾಗಿ "ಸಕಲರೂ ಕೇಳಿರಿ! ಏಕಾಂತದಲ್ಲಿ ಇದನ್ನೋದಿ ನಾನು ಮಾಡಬೇಕಾದ್ದೇನಿದೆ? ಸಭಾಮಧ್ಯದಲ್ಲಿಯೇ ಇದನ್ನೋದುವೆನು!" ಎಂದು ನುಡಿದು ಎಲ್ಲರಿಗೂ ಕೇಳುವಂತೆ ಪತ್ರವನ್ನೋದಿದನು. ಅದರ ಸಾರಾಂಶವು

**ಸ್ವಸ್ತ್ಯಸ್ತು ಮದನಾಯಾಶು ವಿಷಯಾಸ್ಮೈಪ್ರದೀಯತಾಮ್ ।**
**ನ ರೂಪಂ ನ ಕುಲಂ ಶೌರ್ಯಂ ಮಾ ವಿದ್ಯಾಂ ಚಾವಲೋಕಯ ॥**

'ಮದನನಿಗೆ ಶುಭವಾಗಲಿ ಈತನಿಗೆ ವಿಷಯೆಯನ್ನು ಕೊಟ್ಟು ಬೇಗನೆ ಮದುವೆ ಮಾಡತಕ್ಕದ್ದು! ಇವನ ರೂಪ ಕುಲ ಶೌರ್ಯಗಳನ್ನಾಗಲಿ ವಿದ್ಯೆಯನ್ನಾಗಲಿ ನೀನು ಪರಿಶೀಲಿಸಬೇಕಾದ್ದಿಲ್ಲ' ಎಂಬುದಾಗಿತ್ತು. ಹೀಗೆ ಪತ್ರದಲ್ಲಿರುವುದನ್ನು ಕಂಡು ಮದನನು ಸಂತುಷ್ಟನಾಗಿ "ನನ್ನ ತಂದೆಯು ಈ ಕಾರ್ಯದಿಂದ ನಮ್ಮ ವಂಶವು ಇಂದು ಪವಿತ್ರವಾಯಿತು! ಸಕಲ ಬಂಧುಗಳೂ ಧನ್ಯರಾದರು. ಪ್ರತಿದಿನವೂ ನಾವು ಯಾವುದನ್ನು ಆಲೋಚಿಸುತ್ತಿದ್ದೆನೋ ಅದು ತಾನಾಗಿಯೇ ನೆರವೇರಿತು" ಎಂದು ಉದ್ಗರಿಸಿದನು.

ನಾರದನು ಹೇಳಿದನು: ಅರ್ಜುನ, ಕಾಮಮೋಹಿತಳಾದ ವಿಷಯೆಯು ತನ್ನ ಮಂದಿರದ ಏಳನೆಯ ಮಹಡಿಯಲ್ಲಿ ಸಮಾನವಯಸ್ಕರಾದ ಸಖಿಯರೊಡನೆ ಕುಳಿತು ಚಂದ್ರಹಾಸನನ್ನು ನೋಡುತ್ತಿದ್ದಳು. ಅವಳು ತನ್ನ ಹೃದಯದಲ್ಲಿ ಶಿವಪತ್ನಿಯಾದ ಪಾರ್ವತೀದೇವಿಯನ್ನು ಧ್ಯಾನಿಸುತ್ತ "ಹೇ ದಾಕ್ಷಾಯಣಿ ನಿನಗೆ ನಮೋ ನಮಃ. ಈತನನ್ನೇ ನನಗೆ ಪತಿಯನ್ನಾಗಿ ಅನುಗ್ರಹಿಸು. ಬರುವ ಶ್ರಾವಣ ಮಾಸದ ಕೃಷ್ಣಪಕ್ಷದ ತದಿಗೆಯಲ್ಲಿ ನಿನ್ನ ಪ್ರೀತ್ಯರ್ಥವಾಗಿ ವ್ರತವನ್ನು ಆಚರಿಸುವೆನು! ಗಂಧಧೂಪ ಪಕ್ವಾನ್ನಾದಿಗಳಿಂದ ನಿನ್ನನ್ನು ಪೂಜಿಸುವೆನು. ಹೂವಿನ ಮಂಟಪದಲ್ಲಿ ಅಲಂಕೃತವಾದ ನಿನ್ನ ಶುಭಮೂರ್ತಿಯನ್ನು ಸ್ಥಾಪಿಸಿ ರಾತ್ರಿಯೆಲ್ಲವೂ ಜಾಗರಣೆಮಾಡಿ ನಿನ್ನನ್ನು ಆರಾಧಿಸುವೆನು. ಅಣ್ಣನಾದ ಮದನನ ಮುಖದಿಂದ ವೇದದಂತೆ ಸತ್ಯವಾದ ವಾಣಿಯು ಹೊರಬರಲಿ!" ಎಂದು ಪ್ರಾರ್ಥಿಸುತ್ತಿದ್ದಳು. ಹೀಗೆ ಧ್ಯಾನಮಗ್ನಳಾದ ವಿಷಯೆಯನ್ನು ನೋಡಿ ಅವಳ ಗೆಳತಿಯೊಬ್ಬಳು ಹೀಗೆಂದಳು: "ಸುಂದರಿ, ನಿನ್ನ ಮನೋರಥವು ನಡೆಯಿತೆ? ಏನನ್ನು ಚಿಂತಿಸುತ್ತಿರುವೆ? ಚಂಪಕಮಾಲಿನಿಯು ನಗುತ್ತ ಹೇಳಿದಳಲ್ಲವೆ "ನಿನ್ನ ಭಕ್ತಿಗೆ ಮೆಚ್ಚಿ ರತಿಮನ್ಮಥರು ನಿನ್ನ ವಕ್ಷಸ್ಥಳದಲ್ಲಿ ಆವಿರ್ಭವಿಸಿದರೋ ಹೇಗೆ? ಇವರನ್ನು ಪೂಜಿಸುವ ತಾಪಸನಾದ ಒಬ್ಬ ಅರ್ಚಕನನ್ನು ಸಂಪಾದಿಸು!" ಎಂದು. ಅಂತಹ ತಾಪಸನನ್ನೇನಾದರೂ ಕಂಡೆಯೊ? ಕಂಡರೆ ನಿನ್ನ ಪ್ರಾಣವನ್ನಾದರೂ ಒಪ್ಪಿಸಿ ಅವನನ್ನು ಪಡೆದುಕೊ!" ಎಂದಳು. ಈ ಪ್ರಕಾರವಾಗಿ ಸಖಿಯರು ಹಾಸ್ಯಮಾಡುತ್ತಿರಲು ಆ ಬಾಲೆಯು ಸಂತುಷ್ಟಳಾಗಿ ಲಜ್ಜೆಯಿಂದ ತಲೆ ಬಾಗಿಸಿ ನೆಲವನ್ನು ಕಾಲ್ಬೆರಳಿನಿಂದ ಗೀರುತ್ತಿದ್ದಳು. ಅವಳು ಆಗ ತನ್ನ ಕಾಂತನ ಗುಣಗಳನ್ನು ಬರೆಯುತ್ತಿರುವಳೋ ಎಂಬಂತೆ ಕಾಣಿಸಿತು.

# ಚಂದ್ರಹಾಸನ ವಿವಾಹ

ಜೈಮಿನಿ ಮುನಿಗಳು ಹೇಳಿದರು: ಜನಮೇಜಯ, ಆಗ ಅರ್ಜುನನು "ನಾರದರೆ, ಅಲ್ಲಿಂದ ಮುಂದೆ ಏನಾಯಿತು! ಮದನನು ವಿಷಯಾಚಂದ್ರಹಾಸರ ಮದುವೆಯನ್ನು ಹೇಗೆ ಮಾಡಿದನು? ಮಂತ್ರಿಯು ಚಂದನಾವತಿಯಿಂದ ತನ್ನ ನಗರಕ್ಕೆ ಯಾವ ಬಗೆಯಲ್ಲಿ ಬಂದನು? ಅವನು ಮದನನಿಗೆ ಏನು ಹೇಳಿದನು? ಈ ವಿವರವೆಲ್ಲವನ್ನೂ ಹೇಳಿರಿ" ಎಂದು ಕೇಳಿದನು. ನಾರದಮುನಿಯು ಇಂತೆಂದನು:

ಅರ್ಜುನ, ಆಮೇಲೆ ಮದನನು ಜ್ಯೋತಿಃಶಾಸ್ತ್ರವಿಶಾರದರನ್ನು ಕರೆದು ವಿಷಯಾಚಂದ್ರಹಾಸರ ಪರಿಣಯಕ್ಕೆ ಯೋಗ್ಯವಾದ ಲಗ್ನವು ಯಾವುದೆಂದು ವಿಚಾರಿಸಿದನು. ಅವರು ಮೂಹೂರ್ತವನ್ನು ಪರಿಶೀಲಿಸಿ "ಮದನ, ವಧೂವರರಿಗೆ ಮಾಂಗಲ್ಯಾಧಿಪತಿಗಳಾದ ಗುರು ಶುಕ್ರರು ಈಗಿನ ಗೋಧೂಳಿ ಲಗ್ನಕ್ಕೆ ತೃತೀಯ ಮತ್ತು ಏಕಾದಶದಲ್ಲಿದ್ದಾರೆ. ನಿನ್ನ ಭಾಗ್ಯಾತಿಶಯದಿಂದ ಈಗ ಗೋಧೂಳಿ ಲಗ್ನವು ಬಂದಿದೆ. ಗೋವುಗಳು ಬಾಲಗಳನ್ನು ಪತಾಕೆಗಳಂತೆ ಎತ್ತಿಕೊಂಡು ಪುರಾಭಿಮುಖವಾಗಿ ಬರುತ್ತಿವೆ. ತಮ್ಮ ಕರುಗಳನ್ನು ನೋಡುವ ಆಸೆಯಿಂದ ಓಡುತ್ತಿವೆ. ಕೊಟ್ಟಿಗೆಯಲ್ಲಿ ಹಗ್ಗದಿಂದ ಕಟ್ಟಲ್ಪಟ್ಟಿರುವ ಕರುಗಳು ತಾಯಿಯ ದರ್ಶನಕ್ಕಾಗಿ ಹಾತೊರೆಯುತ್ತಿವೆ. ವತ್ಸ, ವಿಷ್ಣುಭಕ್ತನು ಆಗಮಿಸಿದ್ದರಿಂದ ಆದ ಭಾಗ್ಯೋದಯವನ್ನು ನೋಡು. ಈ ಲಗ್ನವು ಸಕಲದೋಷ ಗಳಿಂದಲೂ ವಿವರ್ಜಿತವಾಗಿದೆ. ಗೋಧೂಳಿಲಗ್ನವು ಉತ್ತಮ ಫಲವನ್ನು ಕೊಡುತ್ತದೆಯೆಂದು ವರಹಾಮಿಹಿರಾದ್ಯಾಚಾರ್ಯರು ಹೇಳಿದ್ದಾರೆ" ಎಂದು ತಿಳಿಸಿದರು. ಜ್ಯೋತಿಷ್ಕರ ಮಾತನ್ನು ಕೇಳಿ ಮದನನು ಅತ್ಯಾನಂದದಿಂದ ಪತಿವ್ರತೆಯಾದ ಸುಮಂಗಲೆಯರನ್ನು ನೋಡಿ "ಈಗ ವಿಷಯೆಗೂ ಚಂದ್ರಹಾಸನಿಗೂ ಬೇರೆ ಬೇರೆಯಾಗಿ ಮಜ್ಜನಕಾರ್ಯವನ್ನು ನಡೆಸಿರಿ. ಚಿಗುರೆಲೆಗಳಿಂದಲೂ ನೂಲಿನಿಂದಲೂ ಯುಕ್ತವಾದ ಜಲಕಲಶಗಳಿಂದ ಇವರಿಬ್ಬರಿಗೂ ಸ್ನಾನ ಮಾಡಿಸಿ ಉತ್ತಮ ವಸ್ತ್ರಗಳನ್ನುಡಿಸಿ ಕರೆತನ್ನಿರಿ" ಎಂದು ಹೇಳಿದನು. ರಕ್ತಚಂದನದಂತೆ ನಸುಗೆಂಪು ಬಣ್ಣದ ಮದನನು ಚಂದ್ರಹಾಸನ ಬಳಿಗೆ ಬಂದು "ಚಂದ್ರಹಾಸ, ಎದ್ದೇಳು. ನಿನಗೆ ಶುಭವಾಗಲಿ. ಸುಮಂಗಲಿಯರ ಕೈಯಲ್ಲಿರುವ ಕಲಶಗಳ ಜಲದಿಂದ ಸ್ನಾನಮಾಡು" ಎಂದನು. ಅನಂತರ ಅದರಂತೆ ಸ್ನಾನ ಮಾಡಿ ಬಂದ ಚಂದ್ರಹಾಸನನ್ನು ರಮ್ಯವಾದ ಮಂದಿರದಲ್ಲಿ ಕುಳ್ಳಿರಿಸಿ ಮಂಗಳ ಧ್ವನಿಯೊಡನೆ ಮಧುಪರ್ಕವನ್ನು ಒಪ್ಪಿಸಿದನು. ಅವನ ಪತ್ನಿಯಾದ ತಾರಕಾಕ್ಷಿಯು ವರನ ಪಾದಗಳನ್ನು ತೊಳೆದಳು. ಆಮೇಲೆ ಮದನನು ರಮಣೀಯವಾದ ಉಡುಪನ್ನು ಧರಿಸಿದ ಚಂದ್ರಹಾಸನನ್ನು ಗೃಹದ ಒಳಗೆ ಇನ್ನೊಂದು ಭಾಗಕ್ಕೆ ಕರೆದೊಯ್ದು ಅಲ್ಲಿ ಕನ್ಯೆಯಾದ ವಿಷಯೆಯನ್ನು ಕರೆತಂದು, ಅವರೀರ್ವರ ನಡುವೆ ಮಂತ್ರಪೂರ್ವಕವಾಗಿ ಅಂತಃಪಟವನ್ನು ಹಿಡಿಸಿದನು. ಮದನನು ಚಂದ್ರಹಾಸನ ಗೋತ್ರವನ್ನೂ ಅವನ ಪಿತೃಪಿತಾಮಹರ ನಾಮಧೇಯವನ್ನೂ ಕೇಳಿದನು. ಅದಕ್ಕೆ ಚಂದ್ರಹಾಸನು "ನನ್ನದು ಹರಿಗೋತ್ರ! ನನ್ನ ತಂದೆಯ ಹೆಸರು ಶ್ರೀಹರಿ! ಪಿತಾಮಹನೂ ಪ್ರಪಿತಾಮಹನೂ ಆತನೇ! ನನಗೆ ಪೂಜ್ಯನಾದ

ಕುಲಿಂದನನ್ನೂ ನನ್ನ ಆಧಾರಶಕ್ತಿಯಾದ ಆತನ ಪತ್ನಿಯನ್ನೂ ಬಿಟ್ಟರೆ, ನನ್ನ ಬಂಧುವೆಂದರೆ ಶ್ರೀಹರಿಯೊಬ್ಬನೇ" ಎಂದು ಹೇಳಿದನು. ಚಂದ್ರಹಾಸನ ದೃಢವಾದ ಈ ಮಾತನ್ನು ಕೇಳಿ ಶ್ರೀಮಂತನಾದ ಮದನನು ತನ್ನ ಇಚ್ಛೆಯಿಂದ "ಈ ಕನ್ಯಾದಾನದಿಂದ ಲಕ್ಷ್ಮೀಪತಿಯು ತೃಪ್ತನಾಗಲಿ!" ಎಂದು ಉಚ್ಚಸ್ವರದಿಂದ ನುಡಿದು ತನ್ನ ತಂಗಿಯನ್ನು ವಿಧಿಪೂರ್ವಕವಾಗಿ ಚಂದ್ರಹಾಸನಿಗೆ ಅರ್ಪಿಸಿದನು. ಶ್ರೀಗಂಧದಿಂದ ಲಿಪ್ತರಾದ ಆ ನೂತನ ದಂಪತಿಗಳು ವೇದಿಯ ಬಳಿಗೆ ಕೈಮುಗಿದುಕೊಂಡು ಬಂದರು. ಆಜ್ಯಾಹುತಿಗಳಿಂದ ಅಗ್ನಿಯು ತೃಪ್ತನಾದನು. ದಂಪತಿಗಳು ಸಪ್ತಪದೀಕ್ರಮವನ್ನನುಸರಿಸಿ ಅಗ್ನಿಯನ್ನು ಪ್ರದಕ್ಷಿಣೆ ಮಾಡಿದರು. ಆಮೇಲೆ ಬ್ರಾಹ್ಮಣರಿಗೆ ವಂದಿಸಿ ಅವರ ಆಶೀರ್ವಾದಗಳನ್ನು ಸ್ವೀಕರಿಸಿ ಮತ್ತಷ್ಟು ಕಾಂತಿಯುಕ್ತರಾದರು. ಮುತ್ತೈದೆಯರು ದಂಪತಿಗಳ ಹಣೆಯಲ್ಲಿ ತಿಲಕವನ್ನಿಟ್ಟು ಕೈಯಲ್ಲಿ ತಾಂಬೂಲವನ್ನೂ ಫಲವನ್ನೂ ಕೊಟ್ಟರು. ಸಂತುಷ್ಟನಾದ ಮದನನು ವಧೂವರರಿಗೆ ಪಾರಿತೋಷಕವಾಗಿ ನಾನಾ ಬಗೆಯ ಒಡವೆಗಳನ್ನೂ ಹಾಲು ಕರೆಯುವ ಹಸುಗಳನ್ನೂ ಕ್ಷೀರಸಮುದ್ರಗಳೆನಿಸಿದ ಎಮ್ಮೆಗಳನ್ನೂ ಕರ್ಪೂರ ಚಂದನಾದಿಗಳನ್ನೂ ಅರ್ಪಿಸಿದರು. ಆದರೂ ಮದನನು ತೃಪ್ತನಾಗದೆ "ಈ ಪುಣ್ಯಾತ್ಮನಿಗೆ ನಾನು ಏನನ್ನು ತಾನೇ ಕೊಟ್ಟೇನು! ಚಂದ್ರಹಾಸನಿಗೆ ನನ್ನನ್ನೇ ಅರ್ಪಿಸಿಕೊಳ್ಳಬೇಕೆಂದು ಮನಸ್ಸಾಗುತ್ತಿದೆ!" ಎಂದು ಆಲೋಚಿಸಿದನು. ಅನಂತರ ಎಲ್ಲರೆದುರಿಗೆ "ಈ ನನ್ನ ಶಿರಃಕಮಲವು ಚಂದ್ರಹಾಸ ನಿಗೋಸ್ಕರ ಯಮನಿಗಾದರೂ ಅರ್ಪಿತವಾಗುವುದು! ಅಂತಹ ಸಮಯ ಬಂದರೆ ಲೀಲೆಯಿಂದ ಈತನ ಪಾಣಿಪದ್ಮದಲ್ಲಿ ನನ್ನ ಶಿರಸ್ಸನ್ನಿಡುವೆನು. ನಮ್ಮ ಅಳಿಯನಾದ ಚಂದ್ರಹಾಸನು ವಿಷಯೆಯಿಂದ ಸಮೇತನಾಗಿ ಪುತ್ರಪೌತ್ರರೊಡನೆ ಚಿರಕಾಲದವರೆಗೂ ಈ ಧರೆಯನ್ನಾಳಲಿ! ವಿಷ್ಣುವಿನ ಆರಾಧನೆಯಿಂದಾದ ಪುಣ್ಯದಿಂದ ಹಾಗೆಯೇ ಆಗಲೆಂದು ಆಶಿಸುವೆನು" ಎಂದು ಘೋಷಿಸಿದನು. ಆಮೇಲೆ ಮದನನು ವಸ್ತ್ರಾಲಂಕಾರಗಳಿಂದ ಪುರೋಹಿತನಾದ ಗಾಲವನನ್ನು ಸತ್ಕರಿಸಿ ನೆರೆದಿದ್ದ ಬ್ರಾಹ್ಮಣರನ್ನೂ ಇತರ ಯಾಚಕರನ್ನೂ ನೋಡಿ "ನಾಳೆ ಪ್ರಾತಃಕಾಲದಲ್ಲಿ ಪೂಜ್ಯರಾದ ನೀವೆಲ್ಲರೂ ಬಂದು ನನ್ನ ಗೃಹವನ್ನಲಂಕರಿಸಬೇಕು. ಕಿಂಕರನಾದ ನಾನು ಯಥಾಶಕ್ತಿಯಾಗಿ ತಮ್ಮೆಲ್ಲರನ್ನೂ ಅರ್ಚಿಸುವೆನು" ಎಂದು ಹೇಳಿದನು. ಅವರೆಲ್ಲರೂ ಬೀಳ್ಗೊಂಡು ಹೊರಟು ಹೋದರು. ಆಮೇಲೆ ಮದನನು ಚಂದ್ರಹಾಸನಿಗೂ ವಿಷಯೆಗೂ ಭೋಜನ ಮಾಡಿಸಿ, ತಾನು ಸ್ವಜನರೊಡನೆ ಊಟ ಮಾಡಿದನು. ಆ ರಾತ್ರಿಯಲ್ಲಿ ಸ್ವಲ್ಪ ಹೊತ್ತು ನಿದ್ರಿಸಿ ಬ್ರಾಹ್ಮಮುಹೂರ್ತದಲ್ಲಿ ಎದ್ದನು. ಎದ್ದು ಪರಮಾತ್ಮನನ್ನು ಚಿಂತಿಸಿ ತರುವಾಯ ಸೇವಕರನ್ನು ಕರೆಸಿ "ಈಗ ನೀವು ಸುಂದರವಾದ ಮಂಟಪವನ್ನು ನಿರ್ಮಿಸಬೇಕು. ಭವನವನ್ನು ಅಲಂಕರಿಸಬೇಕು. ಕೆಲವರು ಚಂದನೋದಕದಿಂದ ಭವನಾಂಗಣವನ್ನು ಸಿಂಪಡಿಸಲಿ, ಧ್ವಜಪಟಗಳು ಉನ್ನತವಾಗಿ ಹಾರಾಡಲಿ" ಎಂದು ಆಜ್ಞಾಪಿಸಿದನು.

ಪಾರ್ಥ, ಆ ಸೇವಕರು ಅದೇ ರೀತಿಯಲ್ಲಿ ಎಲ್ಲ ಕೆಲಸಗಳನ್ನೂ ನಿರ್ವಹಿಸಿದರು. ವಿನತಾತನಯನಾದ ಅರುಣನು ದಿಕ್ಕುಗಳನ್ನು ನಿರ್ಮಲಗೊಳಿಸುತ್ತ "ಎಲೈ ಜನರೆ, ಏಳಿರಿ.

ನನ್ನ ಸ್ವಾಮಿಯಾದ ಸೂರ್ಯದೇವನು ಬರುತ್ತಿದ್ದಾನೆ. ಸರ್ವರೂ ವೇದೋಕ್ತವಾದ ಆಚಾರವನ್ನು ನಡೆಸಿರಿ!" ಎಂದು ತಿಳಿಸುವನೋ ಎಂಬಂತೆ ಉದಿಸಿದನು. ಅಷ್ಟರಲ್ಲಿ ಸೂರ್ಯನು ಉದಯಾಚಲದ ಶಿಖರವನ್ನು ಅಡರಿದನು. ಚಂದ್ರಹಾಸನು ರಾತ್ರಿಯಲ್ಲಿ ಜೀವಿಗಳಿಗೆ ಚಿತ್ತಮೋಹವನ್ನುಂಟುಮಾಡುವ ನಿದ್ರೆಯಿಂದ ಎಚ್ಚತ್ತನು. ಅನಂತರ ಸುಮಂಗಲಿಯರು ವಿಷಯೆಗೂ ಚಂದ್ರಹಾಸನಿಗೂ ಅರಿಸಿಣವನ್ನೂ ಸಂಪಗೆಯ ತೈಲವನ್ನೂ ಹಚ್ಚಿ ಸ್ವಚ್ಛವಾದ ನೀರಿನಿಂದ ಸ್ನಾನ ಮಾಡಿಸಿದರು. ವಸ್ತ್ರಗಳನ್ನು ತೊಡಿಸಿ ಬಾಸಿಗಗಳಿಂದ ಸಿಂಗರಿಸಿದರು. ಆ ದಂಪತಿಗಳು ಸ್ತ್ರೀಯರನ್ನು ಮುಂದಿಟ್ಟುಕೊಂಡು ವೇದಿಯ ಬಳಿಗೆ ಬಂದರು. ವಿಪ್ರರು ಮಂಗಲಸೂಕ್ತಗಳಿಂದ ಆಶೀರ್ವದಿಸಿದ ಮೇಲೆ ದಂಪತಿಗಳು ಉತ್ತಮವಾದ ಆಸನದಲ್ಲಿ ಮಂಡಿಸಿದರು. ವೇದಶಾಸ್ತ್ರವಿಶಾರದರಾದ ಬ್ರಾಹ್ಮಣರು ಬಂದು ಸೇರಿದರು. ಮನುಷ್ಯರಿಗೂ ಕುದುರೆಗಳಿಗೂ ಆನೆಗಳಿಗೂ ಚಿಕಿತ್ಸೆಯನ್ನು ಮಾಡುವ ವೈದ್ಯರೂ ಹೊಗಳುಭಟರೂ ನರ್ತಕರೂ ಸಂಗೀತ ಶಿಕ್ಷಕರೂ ಕೊಳಲೂದುವವರೂ ಆಗಮಿಸಿದರು. ಮೃದಂಗದವರೂ ವೇಶ್ಯೆಯರೂ ನಟರೂ ಜಲಚಿತ್ರಕರೂ (?) ಸಭೆಗೆ ಬಂದರು. ಬಿದಿರ ಗಳುವನ್ನು ಹತ್ತಿ ಆಟವಾಡುವ ಡೊಂಬರೂ ಬಾಯಿಂದ ಬೆಂಕಿಯನ್ನುಗುಳುವ ಇಂದ್ರಜಾಲದವರೂ ಢಕ್ಕೆ ಡಮರಗಳನ್ನು ಬಾರಿಸುವವರೂ ಇಂಪಾದ ಸ್ವರದಿಂದ ಹಾಡುವ ಗಾಯಕರೂ ನೆರೆದರು. ಪುರಾಣಗಳಲ್ಲಿ ವರ್ಣಿಸಿರುವ ರಾಜರನ್ನು ಕೀರ್ತಿಸುವ ಸೂತರೂ ಮೃತರಾದ ಶೂರರನ್ನು ವರ್ಣಿಸುವ ಮಾಗಧರೂ ಬದುಕಿರುವ ವೀರರಾದ ಭೂಪಾಲರನ್ನು ಬಣ್ಣಿಸುವ ಬಂದಿಗಳೂ ಬಗೆಬಗೆಯ ಪಟ್ಟುಗಳಲ್ಲಿ ಪ್ರವೀಣರಾದ ಜಟ್ಟಿಗಳೂ ವಟುಗಳೂ ಬಂದರು. ಹೀಗೆ ನಾನಾ ಜನರಿಂದ ಮದನನ ಮನೆಯು ತುಂಬಿಹೋಯಿತು. ತೃಷ್ಣೆ ಎಂಬವಳು ಮಾತ್ರ ಅಲ್ಲಿಗೆ ಬರಲಿಲ್ಲ. ಉಳಿದ ಸಕಲ ಜನರೂ ಬಂದರು. ಕೆಲವರಿಗೆ ಲಾಭದ ಆಸೆ; ಕೆಲವರಿಗೆ ಕೌತುಕವನ್ನು ನೋಡುವ ಇಚ್ಛೆ. ಮದನನೂ ಎಲ್ಲರೊಡನೆಯೂ ವಿನಯಪೂರ್ಣವಾದ ಮಾತುಗಳಿಂದ ಸಂಭಾಷಿಸುತ್ತ ಅವರವರ ಅರ್ಹತಾನುಗುಣವಾಗಿ ರತ್ನಗಳನ್ನೂ ವಸ್ತ್ರಗಳನ್ನೂ ಸುವರ್ಣನಾಣ್ಯಗಳನ್ನೂ ಕೊಟ್ಟು ಸತ್ಕರಿಸಿದನು. ಸಕಲ ಮಿತ್ರರನ್ನೂ ಸಂತೋಷಪಡಿಸಿದನು. ವಿಷ್ಣುಭಕ್ತನಾದ ಚಂದ್ರಹಾಸನು ಆಗಮಿಸಿದ್ದರಿಂದ, ಅರ್ಜುನ, ಕುಂತಲಪುರವು ಸಂತೋಷ ಸಮೃದ್ಧಿಗಳಿಂದ ಉಲ್ಲಸಿತವಾಯಿತು. ವಿಷ್ಣುಭಕ್ತಿಯ ಫಲವನ್ನು ಕೇಳು: ಯಾರು ನಿರ್ಮಲ ಹೃದಯದಿಂದ ಹೃಷೀಕೇಶನನ್ನು ಧ್ಯಾನಿಸುವರೋ ಅವರನ್ನು ದುರ್ಬಲವಾದ ವಿಘ್ನಗಣಗಳು ಏನು ಮಾಡಿಯಾವು? ಮಂತ್ರಿಯಾದ ಧೃಷ್ಟಬುದ್ಧಿಯು ಚಂದ್ರಹಾಸನಿಗೆ ವಿಷವನ್ನು ಕೊಡಬೇಕೆಂದು ಬಯಸಿದರೆ, ಅವನಿಗೆ ವಿಷಕ್ಕೆ ಬದಲಾಗಿ ವಿಷಯೆ ಲಭಿಸಿದಳು! ಮನುಷ್ಯನು ದೈವಕ್ಕೆ ಅಧೀನನೇ ಸರಿ. ಇವನು ದುರಭಿಮಾನದಿಂದ ವ್ಯರ್ಥವಾಗಿ ಹಾರಾಡುತ್ತಾನೆ. ಹಠದಿಂದ ಮಾಡಲು ಹೋದರೆ ಅದು ಎಂದಿಗೂ ಸಿದ್ಧಿಸದು. ಅರ್ಜುನ, ಈ ರೀತಿಯಲ್ಲಿ ಚಂದ್ರಹಾಸನಿಗೂ ವಿಷಯೆಗೂ ವಿವಾಹವಾಗಿ ಹೋಯಿತು. ಮುಂದೆ ಏನು ನಡೆಯಿತೆಂಬುದನ್ನು ಏಕಾಗ್ರಚಿತ್ತನಾಗಿ ಕೇಳು. ಮನುಷ್ಯರಲ್ಲಿರುವ ಭಕ್ತಿ-ಅಭಕ್ತಿಗಳ ಮಹಿಮೆ ವಿಸ್ಮಯಕರವಾದದ್ದು.

# ಧೃಷ್ಟಬುದ್ಧಿಯ ಸಂತಾಪ

ಇತ್ತಲಾಗಿ ಚಂದನಾವತಿಯಲ್ಲಿ ಧೃಷ್ಟಬುದ್ಧಿಯು ಕುಲಿಂದನನ್ನು ದೃಢವಾದ ಸಂಕೋಲೆಗಳಿಂದ ಬಂಧಿಸಿ ಪ್ರಜೆಗಳನ್ನು ದಂಡಿಸಲಾರಂಭಿಸಿದನು. ಪ್ರಜೆಗಳ ಕೊರಳಿಗೆ ಒಂಡೆಯನ್ನು ಕಟ್ಟಿ ನೀರಿನಲ್ಲಿ ಅದ್ದಿ, ಇರುವ ಹಣವೆಲ್ಲವನ್ನೂ ಕೊಡಬೇಕೆಂದು ಪೀಡಿಸಿದನು. ಉರಿಯುವ ಬೆಂಕಿಯ ಮೇಲೆ ಅವರನ್ನು ತೂಗುಹಾಕಿದನು. ಶಸ್ತ್ರಗಳಿಂದ ಮಾಂಸವನ್ನು ಕೀಳಿಸಿದನು. ಚೂರ್ಣವನ್ನು ಕದಡಿದ ನೀರನ್ನು ಆ ಪ್ರಜೆಗಳ ಮೂಗಿನಲ್ಲಿ ಹೊಯ್ಸಿದನು! ಈ ಪ್ರಕಾರವಾಗಿ ಪ್ರಜೆಗಳನ್ನು ಪೀಡಿಸಿ ಹಣವನ್ನು ವಸೂಲುಮಾಡಿ ಕುಳಿಂದನನ್ನು ನೋಡಿ "ಹೇ ಕುಳಿಂದ, ನಾನು ಎಂತಹ ಭೀಕರ ಮನುಷ್ಯನೆಂಬುದು ನಿನಗೆ ತಿಳಿಯದು! ಚಂದ್ರಹಾಸನ ಆಶ್ರಯದಿಂದ ಧನವೆನ್ನು ಸಂಪಾದಿಸಿ ಕೊಬ್ಬಿಹೋಗಿದ್ದೀಯೆ! ಮೂಢಾತ್ಮ ಹಣವನ್ನು ನನಗೆ ಕಳಿಸಿಬಿಟ್ಟೆಯಲ್ಲ, ಅದನ್ನು ತೆಗೆದುಕೊಂಡು ನೀನೇಕೆ ಬರಲಿಲ್ಲ? ಸೇವಕರನ್ನು ಕಳಿಸಿದೆಯಾ? ಅವರಿಗಾದರೂ ಎಷ್ಟು ಅಹಂಕಾರ? ನಾನು ಹಾಕಿದ ಅನ್ನವನ್ನು ತಿನ್ನುವುದಿಲ್ಲವೆಂದರು! ಧನಗರ್ವದಿಂದ ಈಗ ವ್ರತದಾನಗಳನ್ನು ಮಾಡಲು ತೊಡಗಿದ್ದೀಯೆ! ಅದು ಯಾರ ಧನ? ಸ್ಥಿರವಾದ ನನ್ನ ಐಶ್ವರ್ಯವನ್ನು ದಾನದ ಹೆಸರಿನಿಂದ ನಾಶ ಮಾಡಿಬಿಟ್ಟದ್ದೀಯೆ! ನಾನು ಬಾಲ್ಯದಿಂದಲೂ ನೋಡುತ್ತಿದ್ದೇನೆ-ನನಗೆ ಸೇರಿದ ಈ ಪಟ್ಟಣದಲ್ಲಿ ಶಿವದೇವಾಲಯವಾಗಲಿ ವಿಷ್ಣು ದೇವಾಲಯವಾಗಲಿ ಇರಲಿಲ್ಲ. ಕೆರೆಗಳೂ ವಾಪೀಕೂಪಗಳೂ ಮಠಗಳೂ ಅರವಟ್ಟಿಗೆಗಳೂ ಇರಲಿಲ್ಲ. ಈಗ ನೋಡಿದರೆ ದೇವಾಲಯಾದಿಗಳು ತುಂಬಿಹೋಗಿವೆ. ಪಟ್ಟಣವೇ ತನ್ಮಯವಾಗಿಬಿಟ್ಟಿದೆ! ಇವೆಲ್ಲವೂ ನನ್ನ ಹಣದ ದುರ್ವ್ಯಯದಿಂದ ಆದದ್ದು! ಈ ಮನೆಗಳೆಲ್ಲವನ್ನೂ ಕಟ್ಟಿದವರು ಎಲ್ಲಿ ಹೋದರು? ಶಿಲ್ಪಿಗಳು ಎಲ್ಲಿದ್ದಾರೆ? ಆ ದುರಾತ್ಮರು ನನ್ನ ಹಣವೆಲ್ಲವನ್ನೂ ತಿಂದು ತೇಗಿದ್ದಾರೆ! ಇಲ್ಲಿ ಅಧಿಕಾರಿಗಳಾಗಿದ್ದ ಬ್ರಾಹ್ಮಣರು ಎಲ್ಲಿಗೆ ಹೋದರು?" ಎಂದು ಗದರಿಸಿದನು. ಅನಂತರ ತನ್ನ ಸೇವಕನಾದ ಲೋಭನನ್ನು ಕರೆದು "ಎಲೈ ಲೋಭ, ನಿನ್ನ ಮಡದಿಯಾದ ತೃಷ್ಣೆಯೊಡನೆ ಈ ಚಂದನಾವತಿಯನ್ನು ರಕ್ಷಿಸುತ್ತಿರು" ಎಂದು ನಿಯಮಿಸಿ ಕುಂತಲಪುರಕ್ಕೆ ಹೊರಟನು. ಆತನು ತನ್ನ ಮನಸ್ಸಿನಲ್ಲಿ "ನನ್ನ ಮಗನಾದ ಮದನನು ಚಂದ್ರಹಾಸನಿಗೆ ವಿಷವನ್ನು ಕೊಡುತ್ತಾನೆ. ಚಂದ್ರಹಾಸನು ಹೋಗಿ ಮೂರು ದಿನಗಳಾದವು. ಒಂದು ದಿನದಲ್ಲಿಯೇ ನನ್ನ ವೈರಿಯು ಕುಂತಲಪುರಕ್ಕೆ ಹೋಗುತ್ತಾನೆ. ಎರಡನೆಯ ದಿನವೇ ಅವನು ಮದನನನ್ನು ಕಂಡಿರಬೇಕು. ಆ ದಿನ ಸಾಯಂಕಾಲದೊಳಗೆ ಮದನನು ಆ ಕೆಲಸವನ್ನು ಮಾಡಿಯೇ ಇರುತ್ತಾನೆ. ಇನ್ನು ಒಂದು ಯಾಮದೊಳಗೆ ನಾನು ನಗರಕ್ಕೆ ಹೋಗಿ ಸೇರುವೆನು" ಎಂದುಕೊಂಡನು. ಅನಂತರ ಶಿಬಿಕೆಯನ್ನೇರಿದನು. ಆ ಶಿಬಿಕೆಯನ್ನು ಮತ್ಸ್ಯಾಹಾರಿಗಳೂ ಬಲಾಢ್ಯರೂ ಆದ

ಮುನ್ನೂರು ಮಂದಿ ಬೆಸ್ತರು ಹೊತ್ತುಕೊಂಡು ನಡೆದರು! ಧೃಷ್ಟಬುದ್ಧಿಯು ಗಿಣ್ಣೆನಿಂದ ಕೂಡಿದ ಉದ್ದವಾದ ಬಿದರಿನ ದೊಣ್ಣೆಯನ್ನು ಬೀಸಿ 'ಎಲೈ ದುಷ್ಟರೆ-ಮೀನು ತಿನ್ನುವವರೆ! ನಡೆಯಿರಿ ಬೇಗನೆ!" ಎಂದು ಗರ್ಜಿಸಿ ಅವರನ್ನು ಹೊಡೆಯುತ್ತಿದ್ದನು. ಆ ಬೆಸ್ತರು "ಪ್ರಭು ಮಂತ್ರೀಶ್ವರ, ಬೇಗನೆ ಹೋಗುತ್ತೇವೆ. ನಮ್ಮನ್ನು ಹೊಡೆಯಬೇಡ. ಈ ಪ್ರಕಾರವಾಗಿ ಹೊಡೆಯುತ್ತೀಯಲ್ಲ, ನೀನು ನಹುಷನ ಕುಲದಲ್ಲಿ ಹುಟ್ಟಿದೆಯಾ? ನಾವು ಮುನೀಶ್ವರರಲ್ಲವಾದ್ದರಿಂದ ಶಾಪವನ್ನಿತ್ತು ನಿನ್ನನ್ನು ಸರ್ಪವಾಗಿ ಮಾಡಲಾರೆವು!" ಎಂದು ಗೊಣಗುತ್ತಿದ್ದರು. ಅನುಕೂಲವಾದ ಗಾಳಿಯು ಬೀಸಿದಾಗ ದೋಣಿಯು ಹೋಗುವಂತೆ ಆ ಧೀರರೂ* ಢೀರರೂ ಶಿಬಿಕೆಯನ್ನು ಹೊತ್ತುಕೊಂಡು ಧಾವಿಸುತ್ತ ಹೋದರು. ಆ ಸಮಯದಲ್ಲಿ ಕಾಗೆಗಳು ಶಿಬಿಕೆಯ ಮೇಲ್ಗಡೆ ಹಾರಾಡುತ್ತ ಹಠದಿಂದ ಮತ್ತೆ ಮತ್ತೆ ಎರಗಿ, ಶಿಬಿಕೆಯನ್ನು ಕೊಕ್ಕುಗಳಿಂದ ಕುಕ್ಕಿ ರೆಕ್ಕೆಗಳಿಂದ ಬಡಿದು ಉಗುರುಗಳಿಂದ ಪರಚುತ್ತಿದ್ದವು. ಅರ್ಜುನ, ಈ ರೀತಿಯಲ್ಲಿ ಧೃಷ್ಟಬುದ್ಧಿಗೆ ಅಪಶಕುನಗಳಾದವು. ಪಾಪದ ಚೇಷ್ಟೆ ಹೇಗಿರುವುದೆಂದು ನೋಡು. ಎದುರಿಗೆ ಒಂದು ಮಹಾಸರ್ಪವು ಆಕಾಶವನ್ನು ನೆಕ್ಕುವಂತೆ ಹೆಡೆಗಳನ್ನು ಮೇಲೆತ್ತಿ ಬಾಲವನ್ನು ನೆಲದ ಮೇಲೂರಿ ಕಾಣಿಸಿಕೊಂಡಿತು. ಅದು ಧೃಷ್ಟಬುದ್ಧಿಯನ್ನು ನೋಡುತ್ತ "ನಿನ್ನ ಸುವರ್ಣ ಕಲಶಗಳನ್ನು ಸದಾ ರಕ್ಷಿಸುತ್ತ ಇದುವರೆಗೆ ವಾಸವಾಗಿದ್ದೆನು. ನಿನ್ನ ಮಗನು ನನ್ನ ವಾಸಸ್ಥಾನವನ್ನು ನಾಶ ಮಾಡಿದನು. ಆದ್ದರಿಂದ ನಾನು ಹೋಗುತ್ತೇನೆ. ಸ್ವಸ್ತಿ! ವಿಷಾದ ಬೇಡ!" ಎಂದು ನುಡಿದು ಪಾತಾಳವನ್ನು ಪ್ರವೇಶಿಸಿತು. ಮೂಢನಾದ ಆ ಮಂತ್ರಿಗೆ ಆಶ್ಚರ್ಯವೇನೋ ಆಯಿತು. ಆದರೆ ಸರ್ಪದ ಗೂಢಾಶಯವು ಅವನಿಗೆ ಹೊಳೆಯಲಿಲ್ಲ. ಧೃಷ್ಟಬುದ್ಧಿಯು ಎದ್ದು ನಿಂತು ಆ ಬೆಸ್ತರನ್ನು ದೊಣ್ಣೆಯಿಂದ ಬಡಿಯುತ್ತ, ಹಲ್ಲು ಕಡಿಯುತ್ತ "ನಡೆಯಿರಿ ಬೇಗನೆ! ಊರಿಗೆ ಹೋದ ಮೇಲೆ ನಿಮ್ಮ ಕಾಲುಗಳನ್ನು ಕಡಿಸಿ ಹಾಕುವೆನು!" ಎಂದು ಬಯ್ಯುತ್ತ ಕುಂತಲಪುರವನ್ನು ತಲುಪಿದನು. ಅವನು ಆಲೋಚಿಸಿದಂತೆ ಒಂದು ಯಾಮದಲ್ಲಿ ಬಂದು ಸೇರಿದನು.

ಪುರದೊಳಗೆ ಬರುತ್ತಿರುವಾಗ ಆ ಧೃಷ್ಟಬುದ್ಧಿಗೆ ವಾದ್ಯಧ್ವನಿಯು ಕೇಳಿಸಿತು. ಆತನು ಮನಸ್ಸಿನಲ್ಲಿ "ನನ್ನ ಪುತ್ರನು ಆ ಕಾರ್ಯವನ್ನು ಮಾಡಿರಬೇಕು" ಎಂದೇ ಆಲೋಚಿಸುತ್ತಿದ್ದನು. ಅವನು ಶಿಬಿಕೆಯಿಂದಿಳಿದು ನಡೆಯುತ್ತಲೇ ಬೇಗಬೇಗನೆ ಮನೆಗೆ ಹೋದನು. ಬಾಗಿಲಲ್ಲಿ ಸೂತ ಮಾಗಧರೇ ಮೊದಲಾದವರು ಉತ್ತಮವಸ್ತ್ರಗಳಿಂದ ಅಲಂಕೃತವಾಗಿರುವುದು ಗೋಚರಿಸಿತು. ಬಂದಿಗಳು ಮಂತ್ರಿಯನ್ನು ನೋಡಿ

---

* ಧೀವರಾ ಢೀವರಾಶ್ಚತೇ ಎಂದು ಮೂಲವಿದೆ. * ಧೀವರ = ಬೆಸ್ತ, ಅಂಬಿಗ. ಢೀವರ ಎಂಬುದು ಚಮತ್ಕಾರಕ್ಕಾಗಿ ಹೇಳಿದವಿರೂಪ ಶಬ್ದವಿರಬಹುದು. ಅಥವಾ 'ಧೀವರಾ ಧೀವರಾಶ್ಚತೇ' ಎಂದು ಮೂಲಪಾಠವಿರಬಹುದು. ಆ ಪಕ್ಷದಲ್ಲಿ ಧೀವರಾಃ = ಬುದ್ಧಿಶಾಲಿಗಳಾದ, ಧೀವರಾಃ = ಬೆಸ್ತರು ಎಂದು ಅರ್ಥಮಾಡಲು ಸಾಧ್ಯ.

"ಮಂತ್ರಿಶ್ರೇಷ್ಠ, ಪ್ರಾಜ್ಞನಾದ ನಿನ್ನ ಪುತ್ರನು ಸಕಲಕಾರ್ಯಗಳನ್ನೂ ನೆರವೇರಿಸಿದ್ದಾನೆ, ಬಂದು ನೋಡು. ನಿನಗೂ ಚಂದ್ರಹಾಸನಿಗೂ ಉದಾರಿಯಾದ ಮದನನಿಗೂ ಬ್ರಹ್ಮನಂತೆ ದೀರ್ಘಾಯು ವಾಗಲಿ!" ಎಂದು ಹೊಗಳಿದರು. ಧೃಷ್ಟಬುದ್ಧಿಯು "ಆಃ ಪಾಪಿಗಳೆ! ಯಾವನವನು ಚಂದ್ರಹಾಸನೆಂಬವನು? ತೊಲಗಿರಿ ದೂರ, ಬೆತ್ತದಿಂದ ಬಡಿದೇನು!" ಎಂದು ಗದರಿಸಿ ಮನೆಯೊಳಗೆ ಹೋದನು. ಎದುರಿಗೆ ಶ್ರೀಗಂಧವನ್ನು ಬಳಿದುಕೊಂಡು ವಸ್ತ್ರಭೂಷಣಗಳಿಂದ ಆಲಂಕೃತರಾಗಿ ಅತಿಥಿ ಸತ್ಕಾರವನ್ನು ಪಡೆದಿದ್ದ ಬ್ರಾಹ್ಮಣರು ತನ್ನ ಗೃಹಕ್ಕೆ ಬಂದಿರುವುದನ್ನು ಕಂಡನು. ಆ ಬ್ರಾಹ್ಮಣರು ಧೃಷ್ಟಬುದ್ಧಿಯನ್ನು ನೋಡಿ "ಧೃಷ್ಟಬುದ್ಧಿ, ಹೀಗೆಯೇ ನಿನಗೆ ಶುಭವಾಗುತ್ತಿರಲಿ! ವರನಾದ ಚಂದ್ರಹಾಸನು ಹೇಗೆ ಲಭಿಸಿದನು? ನಿನ್ನ ಭಾಗ್ಯವು ಬಹು ಸೊಗಸಾಗಿದೆ! ನಿನ್ನ ಕೀರ್ತಿಯು ಎಲ್ಲೆಲ್ಲಿಯೂ ಹರಡಿತು" ಎಂದು ಮೆಚ್ಚುಗೆಯನ್ನು ಸೂಚಿಸಿದರು. ಅವರ ನುಡಿಯನ್ನು ಕೇಳಿ ದುರಾತ್ಮನಾದ ಮಂತ್ರಿಯು ಬಡಬಾಗ್ನಿಯಂತೆ ಉರಿದೆದ್ದನು. ಅವನು ದೊಣ್ಣೆಯನ್ನೆತ್ತಿ "ಎಲ್ಲಿಗೆ ಹೋಗುತ್ತಿದ್ದೀರಿ?" ಎಂದು ಅಬ್ಬರಿಸಿದನು. ಒಡನೆಯೇ ಬ್ರಾಹ್ಮಣರು ಬಟ್ಟೆಯನ್ನೂ ಕೃಷ್ಣಾಜಿನವನ್ನೂ ಅಲ್ಲಿಯೇ ಬಿಟ್ಟು ಓಡಿದರು! ಅವರ ಕೇಶವು ಕೆದರಿತು. ಉತ್ತರೀಯವು ಬಿದ್ದಿತು. ಯಜ್ಞೋಪವೀತವು ಜಾರಿತು. ಎಡವುತ್ತ ಏದುತ್ತ ಅವರು ಓಡಿಹೋದರು! ಅನಂತರ ಎದುರಿಗೆ ಸಂಪ್ರೀತರಾದ ಗಾಯಕರು ಬಂದರು. ಅವರು "ಸಚಿವೋತ್ತಮ, ಇನ್ನು ಮೇಲೆ ಚಂದ್ರಹಾಸನು ರಾಜಕಾರ್ಯವನ್ನು ವಹಿಸಿಕೊಳ್ಳಲಿ!" ಎಂದರು. ಧೃಷ್ಟಬುದ್ಧಿಯು ಅವರ ವೀಣೆ ಮೃದಂಗ ಕೊಳಲು ಮುಂತಾದವುಗಳನ್ನು ಒಡೆದು ಹಾಕಿದನು! ಆಮೇಲೆ ಮಂತ್ರಿಯು ಬಾಗಿಲಿಗೆ ಮಾಡಿದ ಅಲಂಕಾರಗಳನ್ನು ನೋಡುತ್ತ ಇನ್ನೂ ಒಳಗೆ ಹೋಗಲು ಕುಂಕುಮವನ್ನು ಹಚ್ಚಿಕೊಂಡಿದ್ದ ಸುಂದರಸ್ತ್ರೀಯರು ಮಂತ್ರಿಗೆ ಆರತಿಯನ್ನು ಬೆಳಗುವುದಕ್ಕಾಗಿ ಎದುರಿಗೆ ಬಂದರು. ಮಂತ್ರಿಯು "ಏತಕ್ಕಾಗಿ ಈ ಉತ್ಸವ? ಮಗನಿಗೆ ಯಾವುದಾದರೂ ಭಾಗ್ಯವು ದೊರಕಿತೆ?" ಎಂದು ಕೇಳಿದನು. ಆ ಸ್ತ್ರೀಯರು "ನಿನ್ನ ಮಗನಿಗೆ ವಂಶದ ಭಾಗ್ಯೋದಯವೆನಿಸಿದ ಚಂದ್ರಹಾಸನು ಅತಿಥಿಯಾಗಿ ಲಭಿಸಿದ್ದಾನೆ!" ಎಂದರು. ದಿಙ್ಮೂಢನಾದ ಧೃಷ್ಟಬುದ್ಧಿಯು "ಅತಿಥಿಗೆ ನನ್ನ ಮಗನು ಬೇಕಾದಷ್ಟು ಹಣವನ್ನು ಕೊಟ್ಟನೆ?" ಎಂದು ಕೇಳಿದನು. ಸ್ತ್ರೀಯರು "ಹಾಗೆ ಹೇಳಬಾರದು! ನಿನ್ನ ಮಗಳಾದ ವಿಷಯೆಯನ್ನೇ ಆತನು ಚಂದ್ರಹಾಸನಿಗೆ ಕೊಟ್ಟಿದ್ದಾನೆ!" ಎಂದರು. ಅವರ ನುಡಿಯನ್ನು ಕೇಳಿ ಮಂತ್ರಿಗೆ ಈಟಿಯಿಂದ ತಿವಿದಂತಾಯಿತು. ಕೋಪದಿಂದ ಕಣ್ಣುಗಳು ಕೆಂಪಾದವು. ನೇರವಾಗಿ ಏಳನೆಯ ಬಾಗಿಲ ಬಳಿಗೆ ಹೋದನು. ಅಲ್ಲಿಯೇ ವಿವೇಕನೆಂಬ ದ್ವಾರಪಾಲನು ಶ್ರದ್ಧಾರೂಪವಾದ ಯಷ್ಟಿಯನ್ನು ಹಿಡಿದು ನಿಲ್ಲುತ್ತಿದ್ದುದು. ಧೃಷ್ಟಬುದ್ಧಿಯನ್ನು ನೋಡಿದೊಡನೆ ವಿವೇಕನು ಕಾಣದಂತೆ ಸರಿದನು. ಕ್ರೋಧದೆದುರಿಗೆ ವಿವೇಕವೆಲ್ಲಿದ್ದೀತು?

ಸಚಿವನು ಒಳಗೆ ಪ್ರವೇಶಿಸಿದನು. ವೇದಿಯ ಬಳಿಯಲ್ಲಿ ವಿಷಯೆಯು ತನ್ನ ಸೀರೆಯ ಸೆರಗನ್ನು ಚಂದ್ರಹಾಸನ ವಸ್ತ್ರದೊಡನೆ ಕಟ್ಟಿಕೊಂಡು ಕುಳಿತಿರುವುದು ಕಾಣಿಸಿತು! ಇಬ್ಬರೂ ಹೂವಿನ ಬಾಸಿಂಗವನ್ನು ಮುಡಿದಿದ್ದರು! ಆಗಲಂತೂ ಧೃಷ್ಟಬುದ್ಧಿಯು ಬೆವರಿ ಹೋದನು. ಅವನ ದೇಹವು ನಡುಗಿತು. ಬಾಯಿ ಒಣಗಿತು! "ಎಲಾ! ಇದೇನು? ನನ್ನ ಮಗನು ಏನು ಮಾಡಿದನು? ರಹಸ್ಯವಾದ ಪತ್ರವನ್ನು ಓದಲಿಲ್ಲವೆ?" ಎಂದು ಚಿಂತಾಕ್ರಾಂತನಾದನು. ಅಳಿಯನು ಮಾವನನ್ನು ನೋಡಿ ಮಡದಿಯೊಡನೆ ಎದ್ದು ನಿಂತು, ಜಿಂಕೆಯು ಹುಲಿಗೆ ವಂದಿಸುವಂತೆ, ಧೃಷ್ಟಬುದ್ಧಿಗೆ ಅಭಿವಾದನೆ ಮಾಡಿದನು! ಮಾವನು ಮಾತಿನಿಂದಲೂ ಅಭಿನಂದಿಸಲಿಲ್ಲ! ಅಷ್ಟರಲ್ಲಿ ಮದನನು ಬಂದು ವಿನಯದಿಂದ ತಂದೆಗೆ ನಮಸ್ಕರಿಸಿದನು. ಧೃಷ್ಟಬುದ್ಧಿಯು "ಲೇ ದುರಾತ್ಮ, ಏನು ಮಾಡಿದೆ? ನನ್ನ ಮನಸ್ಸಿಗೆ ಹಿತವಾಗಲಿಲ್ಲ!" ಎಂದು ಆಕ್ಷೇಪಿಸಿದನು. ಮದನನು "ತಂದೆಯೆ, ನಿನ್ನ ಪತ್ರವನ್ನೋದಿ ಅದರಲ್ಲಿ ತಿಳಿಸಿದಂತೆ ತಂಗಿಯನ್ನು ಚಂದ್ರಹಾಸನಿಗೆ ಮದುವೆ ಮಾಡಿಕೊಟ್ಟೆನು. ಅಲ್ಲದೆ ಹಸುಗಳನ್ನೂ ವಸ್ತುಗಳನ್ನೂ ಚಿನ್ನವನ್ನೂ ಹಾಲು ಕರೆಯುವ ಎಮ್ಮೆಗಳನ್ನೂ ಪಾರಿತೋಷಿಕವಾಗಿ ಅರ್ಪಿಸಿದ್ದೇನೆ. ಹೀಗಿರುವಾಗ ನನ್ನನ್ನು ನೋಡಿ ಕೋಪವುಂಟಾಗಲು ಕಾರಣವೇನು? ಹಣದ ಭಂಡಾರವು ಬರಿದಾಗಿದೆ, ಹೋಗಿ ನೋಡು! ಬಂದಿದ್ದ ದ್ವಿಜರಿಗೂ ಯಾಚಕರಿಗೂ ಸಕಲರಿಗೂ ಧನವನ್ನು ನೀಡಿದ್ದೇನೆ" ಎಂದು ತಿಳಿಸಿದನು. ಆ ಮಾತನ್ನು ಕೇಳಿ ದುರುಳನಾದ ಧೃಷ್ಟಬುದ್ಧಿಯು ತಲೆಯಲ್ಲಾಡಿಸಿ ಕೈ ಹಿಸುಕಿ ನಿಟ್ಟುಸಿರು ಬಿಡುತ್ತ "ಎಲೈ, ನೀನು ಗೊಂಡಾರಣ್ಯಕ್ಕೆ ಹೋಗು! ಕೃಷ್ಣಾಜಿನವನ್ನುಟ್ಟು ಭಿಕ್ಷೆ ಬೇಡುತ್ತಿರು!" ಎಂದನು. ಅದಕ್ಕೆ ಮದನನು "ಅಪ್ಪ, ಇದು ಹೊಸದೇನಲ್ಲ. ಪುಣ್ಯಶ್ಲೋಕನಾದ ಶ್ರೀರಾಮನು ತಂದೆಯ ಆಜ್ಞೆಯಂತೆ ವನಕ್ಕೆ ಹೋಗಲಿಲ್ಲವೆ? ಹಾಗೆಯೇ ನಿನ್ನ ಆದೇಶದಂತೆ ನಾನು ವನಕ್ಕೆ ಹೋಗುವೆನು. ಆದರೆ ನಾನು ಮಾಡಿದ ವಿವಾಹಕಾರ್ಯದಲ್ಲಿ ನ್ಯೂನತೆ ಏನೆಂಬುದನ್ನು ಹೇಳು! ದೇಶಪಾಲನಾದ ಕುಲಿಂದನನ್ನೂ ಅವನ ಪತ್ನಿಯನ್ನೂ ಕರೆಸಿಕೊಳ್ಳಲಾಗಲಿಲ್ಲ. ಅಷ್ಟು ಅಲ್ಪಕಾಲದಲ್ಲಿ ಅದು ಸಾಧ್ಯವಾಗಲಿಲ್ಲ, ಏನು ಮಾಡಲಿ? ಆತನ ಮಗನಾದ ಚಂದ್ರಹಾಸನು ಬಂದನು. ನೀನು ಆ ರೀತಿಯಲ್ಲಿ ಶೀಘ್ರವಾಗಿ ವಿವಾಹವನ್ನು ನಡೆಸಬೇಕೆಂದು ಪತ್ರವನ್ನು ಬರೆದಿದ್ದೀಯೆ. ಅಷ್ಟು ಉತ್ತಮವಾದ ಮುಹೂರ್ತವು ಆಮೇಲೆ ದೊರಕುತ್ತಿರಲಿಲ್ಲ. ಈಗ ಇನ್ನೇನು ಮಾಡಲಾದೀತು? ನಾನೇ ಹೋಗಿ ಕುಲಿಂದನನ್ನು ಇಲ್ಲಿಗೆ ಕರೆತಂದು ನಮಸ್ಕರಿಸಿ ಮನ್ನಿಸಬೇಕೆಂದು ಕೇಳಿಕೊಳ್ಳುವೆನು! ಈ ಅಂಶ ಒಂದನ್ನು ಬಿಟ್ಟರೆ ವಿಷಯೆಯ ವಿವಾಹದಲ್ಲಿ ಇನ್ನಾವ ನ್ಯೂನತೆಯೂ ಸಂಭವಿಸಲಿಲ್ಲ. ಸಮಸ್ತ ಅಶ್ವಗಳನ್ನೂ ಗಜಗಳನ್ನೂ ವರನಿಗೆ ಕೊಟ್ಟೆನು. ಕೃಷ್ಣಭಕ್ತನೂ ಪೂಜ್ಯನೂ ಆದ ಈ ವರನಿಗೆ, ತಂದೆಯೆ, ನನ್ನ ಭುಜಗಳನ್ನೂ ಶಿರಸ್ಸನ್ನೂ ಅರ್ಪಿಸಿದ್ದೇನೆ!" ಎಂದು ನುಡಿದನು. ಧೃಷ್ಟಬುದ್ಧಿಯು "ತೊಲಗು ದೂರ! ಮುಖವನ್ನು

ತೋರಿಸಬೇಡ. ನಾನು ಬರೆದ ಪತ್ರವನ್ನು ತಂದು ಅದರಲ್ಲೇನಿದೆ ಎಂದು ನೋಡು!" ಎಂದು ಗಜರಿದನು. ಮದನನು ಪತ್ರವನ್ನು ತಂದು ತಂದೆಗೆ ಕೊಟ್ಟನು. ಮಂತ್ರಿಯು ಆ ಪತ್ರದಲ್ಲಿ 'ವಿಷಯಾಸ್ಮೈ ಪ್ರದಾತವ್ಯಾ' ಎಂದಿರುವುದನ್ನು ನೋಡಿ 'ಇದು ವಿಧಿಯ ಬರೆಹ!' ಎಂದುಕೊಂಡನು. ಒಂದು ಕ್ಷಣಕಾಲ ಚಿಂತಿಸಿ "ನೀನು ಹೇಳುವುದು ಸತ್ಯ. ಸರಿಯಾಗಿ ಓದಿಕೊಂಡಿದ್ದೀಯೆ. ನಾನು ಒಂದು ಗೂಢಾಶಯದಿಂದ ಪತ್ರವನ್ನು ಬರೆದು ಚಂದ್ರಹಾಸನನ್ನು ಕಳಿಸಿದೆನು. ದೈವೇಚ್ಛೆಯಿಂದ ವಿಷಯೆಯ ವಿವಾಹವು ನಡೆಯಿತು. ಇದಕ್ಕೆ ನಾನು ಕರ್ತನಲ್ಲ. ನೀನಾಗಲಿ ಬೇರಾವನಾಗಲಿ ಅಲ್ಲ" ಎಂದು ಮಗನನ್ನು ಸಂತೈಸಿದನು. ಆ ದುರುಳನು ಡಂಭಾಚಾರಕ್ಕಾಗಿ ಚಂದ್ರಹಾಸನನ್ನು ಸತ್ಕರಿಸಿ ನಾಲ್ಕನೆಯ ದಿನ ಮನಃಶುದ್ಧಿಯಿಲ್ಲದೆ ನೆಪಮಾತ್ರಕ್ಕಾಗಿ ಚತುರ್ಥೀ ಕರ್ಮವನ್ನು ನಡೆಸಿದನು. ಅಂತರಂಗದಲ್ಲಿ ಅವನಿಗೆ ಬಹಳ ಖೇದವಾಯಿತು. "ನಾನು ಉದ್ದೇಶಿಸಿದ್ದೊಂದು, ಆದದ್ದು ಮತ್ತೊಂದು. ಈ ಶತ್ರುವಿಗೆ ಏನು ಮಾಡಲು ಸಾಧ್ಯ!" ಎಂಬುದಾಗಿ ಆ ದುರ್ಬುದ್ಧಿಯಾದ ಧೃಷ್ಟಬುದ್ಧಿಯು ಕರ್ತವ್ಯ ನೌಕೆಯಿಲ್ಲದ ಶೋಕಸಾಗರದಲ್ಲಿ ಮುಳುಗಿ ತೊಳಲಾಡಿದನು.

# ಕುಂತಲ ರಾಜ್ಯ ಪ್ರಾಪ್ತಿ

ನಾರದಮುನಿಯು ಹೇಳಿದನು : ಅರ್ಜುನ, ಧೃಷ್ಟಬುದ್ಧಿಯು ಮನಸ್ಸಿನಲ್ಲಿ "ಎಲ್ಲವೂ ವಿಪರೀತವಾಯಿತು. ವಧಾರ್ಹನಾದ ವೈರಿಗೆ ಮಗಳಾದ ವಿಷಯೆಯನ್ನು ಕೊಟ್ಟು ಮದುವೆಯಾಗಿಬಿಟ್ಟಿತು! ಇನ್ನು ನಾನು ಮಾಡುವುದೇನು? ಯಾವ ಬಾಂಧವನನ್ನು ಮರೆಹೊಗಲಿ? ಪುತ್ರರಾದ ಮದನ ಅಮಲ ಇಬ್ಬರೂ ನನ್ನ ಇಚ್ಛೆಯಂತೆ ವರ್ತಿಸುವುದಿಲ್ಲ. ಇವರಿಬ್ಬರು ಸೇರಿ ನನ್ನ ಕುಲವನ್ನೇ ಅವನತಸ್ಥಿತಿಗೆ ತಂದರು! ಇನ್ನು ಚಂದ್ರಹಾಸನು ಇದನ್ನು ನಿಶ್ಚಯವಾಗಿಯೂ ನಾಶಗೊಳಿಸುವನು. ಇರಲಿ; ವಿಷಯೆಯು ವಿಧವೆಯಾಗಲಿ! ಮುನಿಗಳ ಮಾತನ್ನು ಸಟೆಯನ್ನಾಗಿಯೇ ಮಾಡುವೆನು!" ಎಂದು ಆಲೋಚಿಸಿ ಚಂಡಾಲರನ್ನು ರಹಸ್ಯವಾಗಿ ಕರೆಸಿದನು. ಏಕಾಂತದಲ್ಲಿ ಅವರನ್ನು ಕುರಿತು ಆ ದುರುಳನು "ಎಲೈ ಚಂಡಾಲರೆ, ಈ ಪಟ್ಟಣದ ಹೊರಗೆ ಚಂಡಿಕಾದೇವಾಲಯವಿದೆಯಷ್ಟೆ. ನೀವೆಲ್ಲರೂ ಖಡ್ಗಧಾರಿಗಳಾಗಿ ಹೋಗಿ ಶಬ್ದಮಾಡದೆ ರಹಸ್ಯವಾಗಿ ದೇವಾಲಯದ ಎರಡು ಮೂಲೆಗಳಲ್ಲಿ ಅಡಗಿಕೊಂಡಿರಿ. ಬಹಳ ಎಚ್ಚರಿಕೆಯಿಂದ ಗಮನಿಸುತ್ತಿರಿ. ಸಾಯಂಕಾಲವಾದ ಮೇಲೆ ಯಾವನು ದೇವಾಲಯವನ್ನು ಪ್ರವೇಶಿಸುವನೊ, ಅವನನ್ನು ನೀವು ನಿಶ್ಶಂಕೆಯಿಂದ ಕೊಂದುಹಾಕಿರಿ. ಯಾವುದನ್ನೂ ವಿಚಾರಿಸಬೇಕಾದ್ದಿಲ್ಲ. ಹಿಂದೆ ಮಾಡಿದಂತೆ ಈ ಸಲವೂ ನನ್ನನ್ನು ವಂಚಿಸಬೇಡಿರಿ! ನನ್ನ ಮಗನಾದ ಮದನನ ಪಾಲಿಗೆ ಬರುವಷ್ಟು ನನ್ನ ಸಂಪತ್ತನ್ನು ನಿಮಗೆ ಕೊಡುತ್ತೇನೆ" ಎಂದು ಆಜ್ಞಾಪಿಸಿದನು. ಮಂತ್ರಿಯ ಮಾತಿನಂತೆ ಆ ಚಂಡಾಲರು ಗುಪ್ತವೇಷದಲ್ಲಿ ಅಪರಾಹ್ಣದ ವೇಳೆಗೆ ಚಂಡಿಕಾ ದೇವಾಲಯಕ್ಕೆ ಹೋದರು.

ಧೃಷ್ಟಬುದ್ಧಿಯು ಚಂದ್ರಹಾಸನನ್ನು ಕಂಡು ನಯದಿಂದಲೇ "ವತ್ಸ-ಚಂದ್ರಹಾಸ, ನೀನು ಮಹಾಪ್ರಾಜ್ಞನಾದವನು. ನಾನು ಹೇಳುವುದನ್ನು ಆಲಿಸು. ನಿನ್ನ ಹಿತಕ್ಕಾಗಿ ಹೇಳುತ್ತಿದ್ದೇನೆ. ನಮ್ಮ ವಂಶದಲ್ಲಿ ಚಂಡಿಕಾದೇವಿಯನ್ನು ಪೂಜಿಸುವ ಪದ್ಧತಿಯುಂಟು. ನೀನು ವಿವಾಹಿತನಾದ್ದರಿಂದ ಆಚಾರದಂತೆ ದೇವಿಯ ದರ್ಶನವನ್ನು ಮಾಡಿ ಪೂಜಿಸಬೇಕು. ಆದ್ದರಿಂದ ಈ ದಿನ ಸಂಜೆ ಸಂಧ್ಯಾವಂದನೆಯನ್ನು ಮುಗಿಸಿ ಗಂಧಪುಷ್ಪಾದಿಗಳನ್ನು ತೆಗೆದುಕೊಂಡು ಏಕಾಕಿಯಾಗಿ ಚಂಡಿಕಾ ದೇವಾಲಯಕ್ಕೆ ಹೋಗು! ದೇವಾಲಯವು ನಗರದ ಹೊರಗಡೆ ಇದೆ" ಎಂದು ತಿಳಿಸಿದನು. ವಂಚನೆಯನ್ನರಿಯದ ಋಜುಬುದ್ಧಿಯಾದ ಚಂದ್ರಹಾಸನು ಹಾಗೆಯೇ ಮಾಡುವೆನೆಂದು ಹೇಳಿ, ಸಂಜೆ ಸಂಧ್ಯಾವಂದನೆಯನ್ನಾಚರಿಸಿ ದೇವಾಲಯಕ್ಕೆ ಹೋಗಲು ಸಿದ್ಧನಾದನು.

ಪಾರ್ಥ, ಈ ಸಮಯದಲ್ಲಿ ಏನಾಯಿತೆಂದರೆ; ಧೀಮಂತನಾದ ಕುಂತಲರಾಜನು ತನ್ನ ದೇಹದಲ್ಲಾಗುವ ಪರಿವರ್ತನವನ್ನು ಕಂಡು ಪುರೋಹಿತನಾದ ಗಾಲವನನ್ನು ಕರೆಸಿ ಹೀಗೆಂದನು-"ಪೂಜ್ಯರಾದ ಗಾಲವರೆ, ಇದುವರೆಗೂ ರಾಜ್ಯಭಾರವನ್ನು ನಿರ್ವಹಿಸುತ್ತಿದ್ದ ನನಗೆ ಇನ್ನು ಭೂಲೋಕದಲ್ಲಿ ಸೌಖ್ಯವಿಲ್ಲವೆಂದು ಕಾಣುತ್ತದೆ. ನನ್ನ ದೇಹದ ನೆರಳಿಗೆ ತಲೆಯ ಭಾಗವೇ ಇರುವುದಿಲ್ಲ! ಆದ್ದರಿಂದ ನನಗೆ ಉತ್ಕ್ರಾಂತಿ ಸಮಯವು ಬಂದಿತು.

ಇದರಲ್ಲಿ ಸಂದೇಹವಿಲ್ಲ. ಅರಿಷ್ಟಾಧ್ಯಾಯವನ್ನು ನನಗೆ ಶ್ರವಣ ಮಾಡಿಸಿರಿ. ಅದನ್ನು ಕೇಳಿ ಮನಃಶಾಂತಿಯನ್ನು ಪಡೆಯುವೆನು". ಆಗ ಗಾಲವನು ಹೇಳಿದನು : "ಮಹಾರಾಜ, ಅರಿಷ್ಟಗಳ ವಿಷಯವನ್ನು ಹೇಳುತ್ತೇನೆ, ಕೇಳು. ಇದನ್ನು ದತ್ತಾತ್ರೇಯನು ಮಹಾತ್ಮನಾದ ಅಲರ್ಕನಿಗೆ ತಿಳಿಸಿದನು. ಯೋಗಿಯು ಅರಿಷ್ಟಗಳನ್ನು ಕಂಡು ಮೃತ್ಯುಸಮಯವನ್ನು ಅರಿತುಕೊಳ್ಳುತ್ತಾನೆ. ಆಕಾಶದಲ್ಲಿ ಧ್ರುವನಕ್ಷತ್ರವನ್ನು ಶುಕ್ರನನ್ನೂ ಚಂದ್ರಕಲೆಯನ್ನೂ ಅರುಂಧತೀ ನಕ್ಷತ್ರವನ್ನೂ ಯಾವನು ಕಾಣಲಾರನೋ ಅವನು ಒಂದು ವರ್ಷಕ್ಕಿಂತ ಹೆಚ್ಚಾಗಿ ಬದುಕುವುದಿಲ್ಲ. ಸೂರ್ಯಮಂಡಲವು ಕಿರಣರಹಿತವಾಗಿ ಕಂಡರೆ ಅಥವಾ ಸೂರ್ಯನು ಅಗ್ನಿಜ್ವಾಲೆಯಂತೆ ಕಂಡರೆ, ಆ ಮನುಷ್ಯನು ಹನ್ನೊಂದು ತಿಂಗಳಿಗಿಂತ ಅಧಿಕವಾಗಿ ಜೀವಿಸುವುದಿಲ್ಲ. ಯಾರಿಗೆ ಮರಗಳೆಲ್ಲವೂ ಚಿನ್ನದ ಬಣ್ಣದವುಗಳಾಗಿ ಕಾಣುವವೋ ಅವನು ಒಂಭತ್ತು ತಿಂಗಳು ಮಾತ್ರ ಬದುಕುತ್ತಾನೆ. ಸ್ಥೂಲಕಾಯನು ಇದ್ದಕ್ಕಿದ್ದಂತೆ ಕೃಶನಾದರೆ ಅಥವಾ ಕೃಶನಾದವನು ಬಹುಬೇಗನೆ ಸ್ಥೂಲನಾದರೆ ಅಥವಾ ಅವನ ಸ್ವಭಾವದಲ್ಲಿ ದೊಡ್ಡ ಬದಲಾವಣೆಯಾದರೆ, ಆತನು ಎಂಟು ತಿಂಗಳು ಬದುಕುತ್ತಾನೆ. ಧೂಳಿಯಲ್ಲಾಗಲಿ ಕೆಸರಲ್ಲಾಗಲಿ ಹೆಜ್ಜೆಯಿಟ್ಟಾಗ ಹೆಜ್ಜೆಯ ಹಿಮ್ಮಡಿಯಾಗಲಿ ತುದಿಯಾಗಲಿ ಎರಡು ಸೀಳಾಗಿ ಕಾಣಿಸಿದರೆ, ಅವನು ಏಳು ತಿಂಗಳು ಬದುಕುತ್ತಾನೆ. ತಲೆಯ ಮೇಲೆ ಪಾರಿವಾಳ, ಹದ್ದು, ಗೂಬೆ, ಕಾಗೆ ಅಥವಾ ಮಾಂಸಹಾರಿಯಾದ ಯಾವುದಾದರೊಂದು ಹಕ್ಕಿಯು ಕುಳಿತರೆ, ಆ ಮನುಷ್ಯನ ಆಯಸ್ಸು ಆರು ತಿಂಗಳು. ಕಾಗೆಗಳು ಯಾರ ಮೇಲೆ ಧೂಳನ್ನು ಎರಚುತ್ತವೆಯೋ ಯಾವನ ಎದೆಯಲ್ಲಿ ಸ್ತನಭಾಗದ ಮೇಲಿನ ಚರ್ಮವು ಅದರುತ್ತದೆಯೋ ಅವನಿಗೆ ಐದು ತಿಂಗಳೊಳಗೆ ಮರಣವಾಗುವುದೆಂದು ತಿಳಿಯಬೇಕು. ತನ್ನ ನೆರಳು ವಿಕೃತವಾಗಿ ಅನ್ಯಥಾ ಕಂಡುಬಂದರೆ ನಾಲ್ಕು ತಿಂಗಳು ಬದುಕುತ್ತಾನೆ. ಮೋಡವಿಲ್ಲದಾಗ ದಕ್ಷಿಣ ದಿಕ್ಕಿನಲ್ಲಿ ಮಿಂಚು ಗೋಚರಿಸಿದರೆ, ರಾತ್ರಿಯಲ್ಲಿ ಕಾಮನ ಬಿಲ್ಲು ಗೋಚರಿಸಿದರೆ, ಅವನು ಎರಡುಮೂರು ತಿಂಗಳು ಜೀವಿಸುವನೆಂದರಿಯಬೇಕು. ತುಪ್ಪದಲ್ಲಿ, ಎಣ್ಣೆಯಲ್ಲಿ ಅಥವಾ ಕನ್ನಡಿಯಲ್ಲಿ ಶಿರಸ್ಸಿಲ್ಲದ ತನ್ನ ಪ್ರತಿಬಿಂಬವು ಕಾಣಿಸಿದರೆ, ಹದಿನೈದು ದಿನಗಳವರೆಗೂ ಅವನು ಬದುಕುವುದಿಲ್ಲ. ಯಾವನ ದೇಹದಲ್ಲಿ ಮೂಳೆ ಅಥವಾ ಹೆಣದ ವಾಸನೆ ಬರುವುದೋ, ಮಹಾರಾಜ, ಅವನು ಅರ್ಧಮಾಸದವರೆಗು ಜೀವಿಸುವನೆಂದು ತಿಳಿ. ಯಾರಿಗೆ ಸ್ನಾನಮಾಡಿದೊಡನೆ ಬಾಯಾರಿಕೆಯಾಗುವುದೋ ನೀರನ್ನು ಕುಡಿದರೂ ಬಾಯಿ ಒಣಗುವುದೋ ಅವನು ಹತ್ತು ದಿವಸ ಬದುಕಬಹುದು. ಕರಡಿ ಅಥವಾ ಕಪಿಯ ಮೇಲೆ ಕುಳಿತು ಹಾಡುತ್ತ ದಕ್ಷಿಣ ದಿಕ್ಕಿಗೆ ಹೋದಂತೆ ಸ್ವಪ್ನವಾದರೆ, ಅವನಿಗೆ ಒಡನೆಯೇ ಮರಣವು ಸಮೀಪಿಸಿತೆಂದು ತಿಳಿಯಬೇಕು. ಕೆಂಪು ಅಥವಾ ಕಪ್ಪು ಬಟ್ಟೆಯನ್ನುಟ್ಟ ಹೆಂಗಸು ಹಾಡುತ್ತಲೋ ನಗುತ್ತಲೋ ತನ್ನನ್ನು ದಕ್ಷಿಣ ದಿಕ್ಕಿಗೆ ಕರೆದುಕೊಂಡು ಹೋದಂತೆ ಕನಸಾದರೆ, ಆತನು ಬದುಕುವುದಿಲ್ಲ. ಬತ್ತಲೆಯಿರುವ ಕ್ಷಪಣಕನು ಸ್ವಪ್ನದಲ್ಲಿ ಕಾಣಿಸಿದರೆ, ಕ್ಷಿಪ್ರದಲ್ಲಿಯೇ ಸಾವು ಬಂದಿತೆಂದು ನಿಶ್ಚಯಿಸಬೇಕು. ಯಾರಿಗೆ ಸ್ವಪ್ನದಲ್ಲಿ

ತಲೆಯವರೆಗೂ ತಾನು ಕೆಸರಿನಲ್ಲಿ ಹೂತುಹೋದಂತೆ ಕಾಣುವುದೋ ಅವನು ಕೂಡಲೆ ಸಾಯುತ್ತಾನೆ. ಖಜಾನೆಯನ್ನೋ ರಥಶಾಲೆಯನ್ನೋ ಅಥವಾ ತನ್ನ ತಲೆಯನ್ನು ಬೆಂಕಿಯಿಂದ ಸುಡುತ್ತಿರುವ ಮನುಷ್ಯನು ಕನಸಿನಲ್ಲಿ ಗೋಚರಿಸಿದರೆ, ಹತ್ತು ದಿನಗಳೊಳಗೆ ಮೃತ್ಯು ಒದಗುವುದು. ಕರಾಳರೂ ವಿಕಾರಿಗಳೂ ಆದ ಕರಿಯ ಬಣ್ಣದ ಜನರು ಆಯುಧಗಳಿಂದಲೂ ಕಲ್ಲುಗಳಿಂದಲೂ ತನ್ನನ್ನು ಹೊಡೆದಂತೆ ಸ್ವಪ್ನವಾದರೆ, ಶೀಘ್ರದಲ್ಲಿ ಅವನು ಸಾವನ್ನಪ್ಪುವನು. ಕಿವಿಗಳನ್ನು ಮುಚ್ಚಿಕೊಂಡಾಗ ತನ್ನಲ್ಲಿಯೇ ಉಂಟಾಗುವ ಶಬ್ದವು ಯಾರಿಗೆ ಕೇಳಿಸುವುದಿಲ್ಲವೋ, ಯಾರ ನಡತೆಯು ಇದ್ದಕ್ಕಿದ್ದಂತೆ ಬದಲಾಯಿಸಿ ಬಿಡುವುದೋ ಆತನು ಸದ್ಯದಲ್ಲಿಯೇ ಮೃತಿಯನ್ನೈದುವನು. ಯಾವನು ದೇವತಾರ್ಚನೆಯನ್ನು ಇದ್ದಕ್ಕಿದ್ದಂತೆ ತ್ಯಜಿಸುವನೋ ವಿಪ್ರರನ್ನು ಗುರುಗಳನ್ನೂ ಹಿರಿಯರನ್ನೂ ನಿಂದಿಸುವನೋ ತಾಯಿತಂದೆಗಳನ್ನೂ ಅಳಿಯಂದಿರನ್ನೂ ಹಳಿಯುವನೋ ಯೋಗಿಗಳನ್ನೂ ಜ್ಞಾನಿಗಳನ್ನೂ ತಿರಸ್ಕರಿಸುವನೋ ಅವನ ಮೃತ್ಯುಕಾಲವು ಸಮೀಪಿಸಿತೆಂದೇ ತಿಳಿಯಬೇಕು. ಮಹಾರಾಜ, ಈ ಬಗೆಯ ದುರ್ನಿಮಿತ್ತವು ಕಾಣಿಸಿದಾಗ ವಿವೇಕಿಯಾದವನು ಶಾಂತನಾಗಿ ಆಸನದಲ್ಲಿ ಕುಳಿತು ಪರಮಾತ್ಮನನ್ನು ಧ್ಯಾನಿಸುತ್ತಿರಬೇಕು. ಪುರುಷಾರ್ಥಕ್ಕೆ ಸಾಧನವಾಗಿಯೂ ಸಾರಭೂತವಾಗಿಯೂ ಇರುವ ಜ್ಞಾನವನ್ನು ಪಡೆಯಲು ಯತ್ನಿಸಬೇಕು. 'ಇದನ್ನು ತಿಳಿಯಬೇಕು, ಅದನ್ನು ಕಲಿಯಬೇಕು' ಎಂದು ಹಂಬಲಿಸುತ್ತ ಯಾವನು ಪರದಾಡುವನೋ ಅವರು ಸಾವಿರಕಲ್ಪಪರ್ಯಂತ ಜೀವಿಸಿದ್ದರೂ ಜ್ಞಾನಿಯಾಗಲಾರನು. ಆದ್ದರಿಂದ ಸಂಗವನ್ನು ವರ್ಜಿಸಿ ಅಲ್ಪಾಹಾರವನ್ನು ಸೇವಿಸುತ್ತ ಕ್ರೋಧವನ್ನು ಗೆದ್ದು ಜಿತೇಂದ್ರಿಯನಾಗಿ ವಿಷಯವಾಸನೆಯಿಂದ ಮನಸ್ಸನ್ನು ದೂರಮಾಡಿ ಭಗವಂತನ ಧ್ಯಾನದಲ್ಲಿ ನಿರತನಾಗಬೇಕು".

ಈ ಪ್ರಕಾರವಾದ ಯೋಗಸಾರವನ್ನು ಮುನಿಪುಂಗವನಾದ ಗಾಲವನ ಬಾಯಿಂದ ಕೇಳಿ, ಕುಂತಲೇಶ್ವರನು, ಸರ್ಪವು ಜೀರ್ಣವಾದ ಪೊರೆಯನ್ನು ಬಿಡುವಂತೆ, ದೇಹವನ್ನು ತ್ಯಜಿಸಬೇಕೆಂದು ನಿರ್ಧರಿಸಿದನು. ಆತನು ಸಮೀಪದಲ್ಲಿದ್ದ ಮದನನನ್ನು ಕರೆದು "ಮದನ, ನಿಮ್ಮ ಅಳಿಯನಾದ ಚಂದ್ರಹಾಸನನ್ನು ಕೂಡಲೆ ಬರಮಾಡು. ನನಗೆ ಹಿತಕರವಾದ್ದನ್ನು ಮಾಡುವೆನು" ಎಂದನು. ಆಗಲೆಂದು ಹೇಳಿ ಮದನನು ಚಂದ್ರಹಾಸನನ್ನು ಕರೆತರಲು ಹೊರಟನು. ಸೂರ್ಯನು ದಾಸವಾಳದ ಹೂವಿನಂತೆ ರಕ್ತವರ್ಣವಾಗಿ ಅಸ್ತಾಚಲವನ್ನು ಸೇರಿದ್ದನು. ಚಂದ್ರಹಾಸನು ಶುಚಿಯಾಗಿ ಸಂಧ್ಯಾವಂದನೆಯನ್ನು ಮುಗಿಸಿ, ಹೂ ಕರ್ಪೂರ ಕಸ್ತೂರಿ ಚಂದನ ವಸ್ತ್ರ ಅರಿಸಿಣ ಕುಂಕುಮಗಳನ್ನು ತೆಗೆದುಕೊಂಡು, ಕಿರೀಟಧಾರಿಯಾಗಿ ಒಬ್ಬನೇ ದಾರಿಯಲ್ಲಿ ಬರುತ್ತಿದ್ದನು. ಮದನನು ಅವನನ್ನು ಕಂಡೊಡನೆ "ಓ ಚಂದ್ರಹಾಸ, ಎಲ್ಲಿಗೆ ಹೊರಟಿದ್ದೀಯೆ?" ಎಂದು ಕೇಳಿದನು. ಚಂದ್ರಹಾಸನು "ನಿನ್ನ ತಂದೆ ಕಳಿಸಿದ್ದಾನೆ. ಚಂಡಿಕಾ ದೇವಾಲಯಕ್ಕೆ ಹೋಗುತ್ತಿದ್ದೇನೆ. ನಗರದ ಹೊರಗಡೆ ಇರುವ ಮಹಿಷಾಸುರ ಮರ್ದಿನಿಯನ್ನು ಸಂದರ್ಶಿಸಿ ನಮಸ್ಕರಿಸಬೇಕೆಂದು ಹೊರಟಿದ್ದೇನೆ" ಎಂದು ಉತ್ತರಿಸಿದನು. ಮದನನು ಅವನನ್ನು ತಡೆದು "ನೀನು ತ್ವರೆಯಿಂದ ಅರಮನೆಗೆ ಹೋಗು. ಮಹಾರಾಜನು

ಬರಹೇಳಿದ್ದಾನೆ. ಪೂಜಾಸಾಮಗ್ರಿಯನ್ನು ನನಗೆ ಕೊಡು" ಎಂದು ಹೇಳಿ ಚಂದ್ರಹಾಸನ ಕೈಯಲ್ಲಿದ್ದ ಪೂಜಾಪಾತ್ರೆಯನ್ನು ತೆಗೆದುಕೊಂಡನು. ವ್ರತಭಂಗವಾಗುವುದೆಂಬ ಭಯದಿಂದ ಮದನನು ಕುದುರೆಯಿಂದಿಳಿದು ಸೇವಕರನ್ನು ಛತ್ರಚಾಮರಾದಿಗಳನ್ನೂ ಅಲ್ಲಿಯೇ ತಡೆದು ತಾನೊಬ್ಬನೇ ದೇವಾಲಯಕ್ಕೆ ಹೊರಟನು. ಮದನನ ಒತ್ತಾಯಕ್ಕಾಗಿ ಚಂದ್ರಹಾಸನು ಅಶ್ವವನ್ನೇರಿ ಅದೇ ಸೇವಕರೊಡನೆ ಛತ್ರಚಾಮರ ಸಹಿತನಾಗಿ ಅರಮನೆಗೆ ಹೋದನು. ಅಲ್ಲಿ ಕುಂತಲರಾಜನನ್ನು ಕಂಡು ನಮಸ್ಕರಿಸಿ ಎದುರಿಗೆ ನಿಂತುಕೊಂಡನು. ರಾಜನು ಚಂದ್ರಹಾಸನನ್ನು ನೋಡಿ ಗಾಲವನನ್ನು ಕುರಿತು "ಸ್ವಾಮಿ, ಗಾಲವರೆ, ಸಕಲ ಪರಿವಾರವನ್ನೂ ತ್ಯಜಿಸಿ ನಾನು ಅರಣ್ಯಕ್ಕೆ ಹೋಗುವೆನು. ವಿಷ್ಣುಭಕ್ತನೂ ಸತ್ಪಾತ್ರನೂ ಆದ ಚಂದ್ರಹಾಸನಿಗೆ ನನ್ನ ಹೊಣೆಯೆಲ್ಲವನ್ನೂ ವಹಿಸಿಕೊಡುತ್ತೇನೆ!" ಎಂದು ತಿಳಿಸಿದನು. ಗಾಲವಮುನಿಯು 'ಓಮ್-ಆಗಬಹುದು' ಎಂದನು. ಒಡನೆಯೇ ರಾಜನು ಮಗಳಾದ ಚಂಪಕಮಾಲಿನಿಯನ್ನು ಚಂದ್ರಹಾಸನಿಗೆ ಪತ್ನಿಯನ್ನಾಗಿ ಒಪ್ಪಿಸಿ ತನ್ನ ಸಕಲ ರಾಜ್ಯವನ್ನೂ ಆತನಿಗೆ ವಹಿಸಿಕೊಟ್ಟನು. ಅನಂತರ ಕುಂತಲೇಶ್ವರನು ಅಧೋಮುಖನಾಗಿ ತೋಳನ್ನೆತ್ತಿ ತೊಟ್ಟಿದ್ದ ವಸ್ತುಗಳನ್ನು ಕಳಚಿಟ್ಟು ನಗ್ನನಾಗಿ, ಮಣ್ಣುಹೆಂಟೆ ಕಲ್ಲು ಚಿನ್ನಗಳೆಲ್ಲವೂ ಸಮವೆಂಬ ನಿಸ್ಸಂಗಭಾವನೆಯನ್ನು ತಳೆದು ವನಾಭಿಮುಖನಾಗಿ ಹೊರಟುಬಿಟ್ಟನು. ನಿರ್ವಾಣವೆಂಬ ಅತುಲವಾದ ಯೋಗಸಿದ್ಧಿಯನ್ನು ಪಡೆದನು. 'ದೇವಾ ಸುರಮಾನುಷರೆಲ್ಲರೂ ಗುಣಮಯ ಪಾಶಗಳಿಂದ ಬದ್ಧರಾಗಿ ಮತ್ತೆ ಮತ್ತೆ ಬಂಧನದಲ್ಲಿಯೇ ಸಿಕ್ಕಿಕೊಳ್ಳುತ್ತಿದ್ದಾರೆ. ಮಕ್ಕಳು, ಹಣ, ಸೋದರ, ಮೊಮ್ಮಕ್ಕಳು, ನನ್ನವರು, ಪರಕೀಯರು-ಇತ್ಯಾದಿ ಕಲ್ಪನೆಗಳಿಂದಲೂ ಇಂದ್ರಿಯಗಳ ಸೆಳೆತದಿಂದಲೂ ದುಃಖಾರ್ತರಾಗಿ ದ್ವೈತಭಾವನೆಯಲ್ಲಿ ಸಿಲುಕಿದ್ದಾರೆ. ಅಜ್ಞಾನವೆಂಬ ಕೆಸರಿನ ಗರ್ತದಲ್ಲಿ ಸಿಕ್ಕಿಕೊಂಡಿದ್ದಾರೆ" ಎಂದು ನಿಶ್ಚಯಿಸಿ ಎಲ್ಲವನ್ನೂ ತುಚ್ಛವಾಗಿ ಕಂಡನು. ತಾನು ಉತ್ತೀರ್ಣನಾದೆನೆಂಬ ಆನಂದದಿಂದ ಹೀಗೆ ಹಾಡಿದನು:

**ಅಹೋ ಕಷ್ಟಂ ಯದಸ್ಮಾಭಿಃ ಪೂರ್ವಂ ರಾಜ್ಯಮನುಷ್ಠಿತಮ್ ।**
**ಅಪಿ ಪಶ್ಚಾನ್ಮಯಾ ಜ್ಞಾತಂ ಯೋಗಾನ್ನಾಸ್ತಿ ಪರಂ ಸುಖಮ್ ॥**

'ಅಹೋ! ಕಷ್ಟ! ಹಿಂದೆ ನಾವು ರಾಜ್ಯವನ್ನು ಪಾಲಿಸಿದೆವು. ಯೋಗಕ್ಕಿಂತಲೂ ಹೆಚ್ಚಿನ ಸುಖವಿಲ್ಲವೆಂದು ಆಮೇಲೆ ನನಗೆ ತಿಳಿಯಿತು!'

ಅರ್ಜುನ, ಈ ರೀತಿಯಾಗಿ ಕುಂತಲರಾಜನು ಸಂಸಾರಪಾಶಗಳಿಂದ ಬಿಡುಗಡೆಹೊಂದಿದನು. ಇತ್ತಲಾಗಿ ಗಾಲವನು ಚಂದ್ರಹಾಸನನ್ನು ಸಿಂಹಾಸನದಲ್ಲಿ ಕುಳ್ಳಿರಿಸಿ ಅಭಿಷೇಕ ಮಾಡಿದನು. ಚಂದ್ರಹಾಸನು ಗಾಂಧರ್ವವಿಧಿಯಿಂದ ಚಂಪಕಮಾಲಿನಿಯನ್ನು ಮದುವೆಯಾದನು. ಸೂರ್ಯಾಸ್ತವಾಗುವ ಗೋಧೂಳಿ ಲಗ್ನದಲ್ಲಿ ಎಲ್ಲವೂ ನಡೆದುಹೋಯಿತು!

ಇತ್ತ ಮದನನು ಹೂಗಳನ್ನು ತೆಗೆದುಕೊಂಡು ದೇವಾಲಯಕ್ಕೆ ಹೋಗುತ್ತಿರುವಾಗ ದಾರಿಯಲ್ಲಿ ಜಗಳವಾಡುತ್ತಿದ್ದ ಎರಡು ಬೆಕ್ಕುಗಳನ್ನು ಕಂಡನು. ಮುಂದೆ ಹೋಗುತ್ತಿರಲು ಕೈಯಲ್ಲಿದ್ದ ಗಂಧಪುಷ್ಪಗಳ ಹರಿವಾಣವು ಕೆಳಗೆ ಬಿದ್ದಿತು. ಕಣ್ಣಿಂದ ರಕ್ತವು ಹೊರಗೆ ಬಂದಿತು.

ಒಂದು ಗೂಬೆಯು ಕೆಟ್ಟದಾಗಿ ಅರಚುತ್ತ ಅವನ ತಲೆಯ ಮೇಲೆ ಹಾರಾಡಿತು. ಈ ದುಃಶಕುನಗಳನ್ನು ಕಂಡರೂ ಮದನನು ಅವನ್ನು ತನ್ನ ಪರವಾಗಿ ಗಣಿಸದೆ "ಧೀಮಂತನಾದ ಚಂದ್ರಹಾಸನಿಗೆ ಶುಭವಾಗಲಿ! ವಿಷ್ಣುಭಕ್ತನೂ ಧೀರನೂ ಆದ ನಮ್ಮ ಅಳಿಯನಿಗೆ ಮಂಗಳವಾದೀತೆ?" ಎಂದು ಹಾರೈಸುತ್ತ ಚಂಡಿಕಾಲಯವನ್ನು ಸೇರಿದನು. ಅವನು ಕೆಳಗೆ ನೋಡುತ್ತ ಹೋಗಿ ದೇವಾಲಯದ ಬಾಗಿಲುಗಳನ್ನು ನೂಕಿದನು. ಶಬ್ದವನ್ನು ಕೇಳಿದೊಡನೆ ಒಳಗೆ ಅಡಗಿದ್ದ ಕಟುಕರು ಆಯುಧಗಳನ್ನು ಕೈಗೆ ತೆಗೆದುಕೊಂಡರು. ಅವರು ಮೆಲ್ಲನೆ ಒಬ್ಬರಿಗೊಬ್ಬರು ಕಿವಿಯಲ್ಲಿ "ಎಲೈ ಬ್ರಾಹ್ಮಣಘಾತುಕ! ಎಲವೋ ಗೋವುಗಳನ್ನು ಕೊಲ್ಲತಕ್ಕವನೆ! ಲೇ ಶಿಶುಹತ್ಯಾಕಾರಿಯೆ! ಆತನು ಸಾಯುವುದಕ್ಕಾಗಿ ಬಂದನು! ನಿಮ್ಮ ಹೆಸರನ್ನು ಉಳಿಸಿಕೊಳ್ಳಿರಿ! ಇದು ನಮ್ಮ ಕುಲಧರ್ಮ! ಇದೇ ನಮ್ಮ ನೀತಿ!" ಎಂದು ಪಿಸುಗುಟ್ಟಿದರು. ಅಷ್ಟರಲ್ಲಿ ಸುಂದರವೇಷವನ್ನು ಧರಿಸಿದವನೂ ದಕ್ಷನೂ ಪಿತೃವಿಧೇಯನೂ ಆದ ಮದನನು ಒಳಗೆ ಪ್ರವೇಶಿಸಿದನು. ಒಡನೆಯೇ ಕಟುಕರು ಶೂಲ ಕತ್ತಿ ಪಟ್ಟಿಶ ಮುಂತಾದ ಆಯುಧಗಳಿಂದ ಮಂತ್ರಿಪುತ್ರನನ್ನು ಹೊಡೆದರು. ಆಗ ಮದನನು "ಹೇ ಚಂಡಿಕೇ, ವೈಷ್ಣವಿ! ನಾನು ಮಹಿಷಾಸುರನಲ್ಲ. ನಿಶುಂಭನಲ್ಲ, ಶುಂಭನೂ ಅಲ್ಲ! ಹೇ ತಾಯಿ, ನನ್ನನ್ನು ಶೂಲಗಳಿಂದ ಹೀಗೇಕೆ ಕೊಲ್ಲುವೆ? ನನ್ನ ಪ್ರಾಣಕ್ಕಾಗಿ ನಾನು ಬೇಡುವುದಿಲ್ಲ. ಅಮ್ಮ ನೀನೇ ಸಾಕ್ಷಿಯಾಗಿರು! ಚಂದ್ರಹಾಸನಿಗೋಸ್ಕರ ನನ್ನ ಬಾಹುಗಳನ್ನೂ ಶಿರಸ್ಸನ್ನೂ ಅರ್ಪಿಸುತ್ತೇನೆಂದು ಹೇಳಿದ್ದೆನು. ಇದೋ, ಅರ್ಪಿಸಿ ಋಣಮುಕ್ತನಾದೆನು!" ಎಂದು ನುಡಿದು 'ಮಾಧವ ಮಾಧವ' ಎಂದು ಭಗವನ್ನಾಮವನ್ನು ಸ್ಮರಿಸುತ್ತ ಪ್ರಾಣವನ್ನು ಬಿಟ್ಟನು. ಮದನನ ವಚನವನ್ನಾಲಿಸಿದ ಚಂಡಾಲರು ಭೀತರಾಗಿ 'ಅಯ್ಯೋ! ನಾವು ಯಾರನ್ನು ಕೊಂದುಬಿಟ್ಟೆವು!' ಎಂದು ದಿಗ್ಭ್ರಾಂತರಾಗಿ ಪಲಾಯನ ಮಾಡಿದರು.

# ಶಾಲಗ್ರಾಮ ಮಹಿಮೆ

ನಾರದಮುನಿಯು ಹೇಳಿದನು : ಅರ್ಜುನ, ಇತ್ತ ಚಂದ್ರಹಾಸನು ಕುಂತಲರಾಜ್ಯವನ್ನೂ ಪತ್ನಿಯಾದ ಚಂಪಕಮಾಲಿನಿಯನ್ನೂ ಪಡೆದನು. ರಾತ್ರಿಯಲ್ಲಿ ಚಂಪಕಮಾಲಿನಿಯೊಡನೆ ಆನೆಯನ್ನೇರಿ ಮಾವನಾದ ಧೃಷ್ಟಬುದ್ಧಿಯನ್ನು ಕಂಡು ನಮಸ್ಕರಿಸಬೇಕೆಂದು ಮಂಗಳವಾದ್ಯದೊಡನೆ ಹೊರಟನು. ರಾಜದೂತರು ಮುಂದೆ ಹೋಗಿ ಧೃಷ್ಟಬುದ್ಧಿಯನ್ನು ಕಂಡು "ಮಂತ್ರಿಶ್ರೇಷ್ಠ, ನಿನ್ನ ಅಳಿಯನಾದ ಚಂದ್ರಹಾಸನು ಈ ರಾಜ್ಯದ ನೂತನ ರಾಜಪದವಿಯನ್ನು ವಹಿಸಿಕೊಂಡು ಬರುತ್ತಿದ್ದಾನೆ! ಅವನು ಕುಂತಲರಾಜನಿಗೂ ಅಳಿಯನಾಗಿದ್ದಾನೆ! ಬಂದು ನೋಡು!" ಎಂದು ಹೇಳಿದರು. ಅವರ ನುಡಿಯನ್ನು ಕೇಳಿ ಧೃಷ್ಟಬುದ್ಧಿಯು ಕೋಪಾವಿಷ್ಟನಾಗಿ "ಎಲೈ ಪಾಪಿಗಳೆ, ನಿಮ್ಮ ನಾಲಿಗೆಯನ್ನು ಬುಡಸಹಿತವಾಗಿ ಕತ್ತರಿಸುವೆನು! ನಮ್ಮ ಕುಂತಲೇಶ್ವರನಲ್ಲದೆ ಇನ್ನು ಯಾವ ರಾಜನಿದ್ದಾನೆ?" ಎಂದು ಅಬ್ಬರಿಸಿದನು. ದೂತರು "ಸ್ವಾಮಿ, ಕಣ್ಣು ತೆರೆದು ನೋಡೋಣವಾಗಲಿ!" ಎಂದರು. ಅಷ್ಟರಲ್ಲಿ ಚಂದ್ರಹಾಸನು ಪತ್ನಿಸಮೇತನಾಗಿ ಆನೆಯನ್ನೇರಿ ಎದುರಿಗೆ ಬಂದನು. ಧೃಷ್ಟಬುದ್ಧಿಯು ತನ್ನ ಕಣ್ಣುಗಳನ್ನು ಮತ್ತೆ ಮತ್ತೆ ಉಜ್ಜಿಕೊಳ್ಳುತ್ತ ನೋಡಿ "ಇವನು ಚಂದ್ರಹಾಸನೆ? ಅಲ್ಲ, ನನ್ನ ಮಗನಾದ ಮದನನಾಗಿರಬೇಕು. ಬಳಿಯಲ್ಲಿ ಚಂಪಕಮಾಲಿನಿಯು ಇದ್ದಾಳೆ!" ಎಂದು ದಿಗ್ಭ್ರಾಂತನಾಗಿ "ಎಲವೊ ಮದನ! ನೀನು ಮಾಡುತ್ತಿರುವುದೇನು?" ಎಂದನು. ಚಂದ್ರಹಾಸನು ಗಜದಿಂದ ಇಳಿದು ಬಂದು ಮಂತ್ರಿಯ ಪಾದಗಳನ್ನು ಮುಟ್ಟಿ ನಮಸ್ಕರಿಸಿದನು. ಧೃಷ್ಟಬುದ್ಧಿಯು ಅವನ ಗಲ್ಲವನ್ನು ಹಿಡಿದು ನೋಡುತ್ತ "ನೀನು ದೇವಿಯ ಮಂದಿರಕ್ಕೆ ಹೋಗಲಿಲ್ಲವೆ? ನಮ್ಮ ವಂಶದ ಪದ್ಧತಿಯನ್ನು ಕೆಡಿಸಿಬಿಟ್ಟೆ!" ಎಂದು ಹೇಳಿದನು. ಚಂದ್ರಹಾಸನು "ಪೂಜ್ಯನೆ, ನಾನು ಹೂಗಂಧಗಳ ಪಾತ್ರೆಯನ್ನು ಹಿಡಿದು ದೇವಸ್ಥಾನಕ್ಕೆ ಹೋಗುತ್ತಿದ್ದೆನು. ದಾರಿಯಲ್ಲಿ ಮದನನು ಬಂದು ನಾನು ರಾಜಾಜ್ಞೆಯಂತೆ ಅರಮನೆಗೆ ಹೋಗಬೇಕೆಂದು ಹೇಳಿ ನನ್ನನ್ನು ಕಳಿಸಿ ತಾನೇ ದೇವಾಲಯಕ್ಕೆ ಹೋದನು!" ಎಂದು ತಿಳಿಸಿದನು. ಕರ್ಣಕಠೋರವೂ ಮರ್ಮಭೇದಕವೂ ಆದ ಆ ವಚನವನ್ನು ಕೇಳಿದೊಡನೆ ಮಂತ್ರಿಯು ಕೈಯೆತ್ತಿ ಕೂಗುತ್ತ ಆಕ್ರಂದಿಸುತ್ತ ಕೂದಲು ಕೆದರಿ ಹೋದ್ದನ್ನೂ ಲಕ್ಷಿಸದೆ ದೇವಾಲಯದ ಕಡೆಗೆ ಓಡುತ್ತ ಹೋದನು! ಅರ್ಜುನ, ಇನ್ನೊಬ್ಬನು ಬೀಳಲೆಂದು ಗುಂಡಿಯನ್ನು ತೋಡಿದರೆ, ಅದನ್ನು ತೋಡಿದವನೇ ಬೀಳುತ್ತಾನೆ. ಆದ್ದರಿಂದ ಯಾವಾಗಲೂ ಪ್ರಾಣಿಗಳಿಗೆ ಹಿತವಾದ ಕಾರ್ಯವನ್ನೇ ಮಾಡಬೇಕು. ಮಂತ್ರಿಯು ಘೋರವಾದ ಕತ್ತಲೆಯಲ್ಲಿ ಬೀಳುತ್ತ ಏಳುತ್ತ ಊರ ಹೊರಗಿನ ಶ್ಮಶಾನಕ್ಕೆ ಓಡುತ್ತ ಹೋದನು. ಅಲ್ಲಿ ಚಿತೆಗಳು ಉರಿಯುತ್ತಿದ್ದವು. ಗಾಳಿಯು ಬೂದಿಯನ್ನು ತೂರುತ್ತಿತ್ತು. ಕತ್ತಲೆಯಲ್ಲಿ ಬರುತ್ತಿದ್ದ ಧೃಷ್ಟಬುದ್ಧಿಯನ್ನು ಶ್ಮಶಾನದಲ್ಲಿದ್ದ ಭೂತಭೇತಾಳ ಕಂಕಾಲಗಳು ನೋಡಿ "ನಮಗಿಂತಲೂ

ಅಧಿಕನಾದವನೊಬ್ಬನು ಅಲ್ಲಿ ಬರುತ್ತಿದ್ದಾನೆ, ನೋಡಿರಿ!" ಎಂದು ಹೇಳಿಕೊಂಡವು. ಆಗ ಒಂದು ಪ್ರೇತವು "ಓಹೊ! ನಮಗಿಂತಲೂ ಅಧಿಕನಾದವನು ಯಾರು? ನಿಮ್ಮ ಸೇವಕನಾದ ನಾನೊಬ್ಬನೇ ಮೂವರು ಬ್ರಾಹ್ಮಣರನ್ನು ಕೊಂದಿದ್ದೇನೆ! ವಿಶ್ವಾಸದಿಂದ ಇಟ್ಟಿದ್ದ ಧನವನ್ನು ಅಪಹರಿಸಿದ್ದೇನೆ! ಪರನಿಂದಾ ಪರಾಯಣನೆಂದರೆ ನಾನೇ! ನಾನು ಪ್ರಾಣಿಘಾತುಕನೆಂದೂ ಸಜ್ಜನರಿಗೆ ಭಯದಾಯಕನೆಂದೂ ತಿಳಿಯಿರಿ! ಇದೋ, ನನ್ನ ತಮ್ಮನನ್ನು ನೋಡಿರಿ. ಇವನು ನನ್ನ ಮಗನಿಗಿಂತಲೂ ಅಧಿಕನು. ಏಕೆಂದರೆ, ನನ್ನ ಮಗನು ದಾರಿಹೋಕರನ್ನು ಮಾತ್ರ ಕೊಲ್ಲುತ್ತಾನೆ!" ಎಂದು ಹೇಳಿತು. ಅದನ್ನು ಕೇಳಿ ಒಂದು ಬ್ರಹ್ಮಪಿಶಾಚವು ನಗುತ್ತ "ನಿನ್ನ ಮಗನು ಬಲಶಾಲಿ, ಅವನಿಗಿಂತ ನಿನ್ನ ತಮ್ಮ, ತಮ್ಮನಿಗಿಂತ ನೀನು! ನೀನು ಬ್ರಹ್ಮಘಾತುಕ! ಅಲ್ಲಿ ಬರುತ್ತಿರುವವನು ನಿನ್ನಷ್ಟು ಬಲಶಾಲಿ! ಅವನು ನನಗೆ ಸಮಾನನಲ್ಲ! ಆದ್ದರಿಂದ ನೀವೆಲ್ಲರೂ ಇಲ್ಲಿಂದ ಓಡಿಹೋಗಬೇಕು. ಅವನನ್ನು ನೋಡಬೇಡಿರಿ. ಅವನು ಮಿತ್ರದ್ರೋಹಿ, ಕೃತಘ್ನ, ವಿಶ್ವಾಸಘಾತುಕ! ಆ ಪಾಪಿಷ್ಠನು ಹತ್ತಿರಕ್ಕೆ ಬರುತ್ತಿದ್ದಾನೆ. ಇನ್ನು ನಿಲ್ಲಬಾರದು" ಎಂದು ಹೇಳಿತು. ಆಗ ಅಲ್ಲಿದ್ದ ಭೂತಭೈರವಗಳೆಲ್ಲವೂ ಓಡಿಹೋದವು.

ಧೃಷ್ಟಬುದ್ಧಿಯು ಪುತ್ರಶೋಕದಿಂದ ಸಂತಪ್ತನಾಗಿ ಚಿತೆಯಲ್ಲಿ ಉರಿಯುತ್ತಿದ್ದ ಕೊಳ್ಳಿಯನ್ನು ಹಿಡಿದು ಅದರ ಬೆಳಕಿನಲ್ಲಿ ಚಂಡಿಕಾದೇವಾಲಯಕ್ಕೆ ಹೋದನು. ದೇವಿಯ ಎದುರಿಗೆ ಪುತ್ರನಾದ ಮದನನು ಕತ್ತಿ ಶೂಲ ಮುಂತಾದ ಆಯುಧಗಳಿಂದ ತಿವಿಯಲ್ಪಟ್ಟು ಹತನಾಗಿ ಬಿದ್ದಿರುವುದು ಕಾಣಿಸಿತು. ಮೂವತ್ತೆರಡು ಗುಣಗಳಿಂದ ಯುಕ್ತವಾದ ಪಶುವು ದೇವಿಗೆ ಅರ್ಪಿತವಾಗಿತ್ತು! ಮದನನು ಸಚ್ಚಾರಿತ್ರನೂ ತಪಸ್ವಿಯೂ ಶಾಸ್ತ್ರಜ್ಞಾನ ಉಳ್ಳವನೂ ಶಾಂತಸ್ವಭಾವದವನೂ ಮನೋವಾಕ್ಕಾಯಗಳನ್ನು ನಿಗ್ರಹಿಸಿದವನೂ ಆಗಿದ್ದನು. ಕಲಶವು ಮುರಿದು ನೆಲದ ಮೇಲೆ ಕುಸಿದುಹೋದ ದಿವ್ಯಪ್ರಾಸಾದದಂತೆಯೂ ಪಾಖಂಡಿಗಳು ಒಡೆದು ಹಾಕಿದ ಕಾಶ್ಮೀರದ ಶಿವಲಿಂಗದಂತೆಯೂ ಇದ್ದ ಮದನನನ್ನು ಮಂತ್ರಿಯು ಕಂಡನು. ಪುತ್ರನು ಆ ಪ್ರಕಾರದಲ್ಲಿ ಹತನಾಗಿರುವುದನ್ನು ನೋಡಿ ಧೃಷ್ಟಬುದ್ಧಿಯ ಮನೋರಥವೆಲ್ಲವೂ ವಿಧ್ವಸ್ತವಾಯಿತು. ತನ್ನ ವಂಶದ ಬೇರು ವಿಚ್ಛಿನ್ನವಾಯಿತೆಂದು ಅವನು ತಿಳಿದನು. ಅವನು ಶೋಕ ಸಂತಪ್ತನಾಗಿ ಚಿತೆಯ ಕೊಳ್ಳಿಯನ್ನೆಸೆದು ಮಗನನ್ನು ಆಲಿಂಗಿಸಿಕೊಂಡು ಕೈಗಳಿಂದ ಎತ್ತಿ ಹಿಡಿದು ಹಲುಬತೊಡಗಿದನು : "ಓ ಮಗನೆ, ಎದ್ದೇಳು. ಚಂದ್ರಹಾಸನು ಬಂದಿದ್ದಾನೆ. ಅವನಿಗೆ ವಿಷಯೆಯನ್ನು ಕೊಟ್ಟು ಮದುವೆಯಾಗಲಿ! ಯಥೇಚ್ಛವಾಗಿ ಧನವನ್ನು ಅವನಿಗೆ ಕೊಡು. ನಾನು ಕೆಟ್ಟ ಮಾತುಗಳಿಂದ ನಿನ್ನನ್ನು ರೇಗಿಸಿದೆನು. ನಿನಗೆ ನನ್ನಿಂದ ಬಹಳ ಹಿಂಸೆಯಾಯಿತು. ಓ ಮಗನೆ, ವಿಷ್ಣುಭಕ್ತನನ್ನು ದ್ವೇಷಿಸಿದ್ದರಿಂದ ತಕ್ಕ ಫಲವು ನನಗೆ ದೊರಕಿತು. ವಿಷ್ಣುಭಕ್ತರನ್ನು ದ್ವೇಷಿಸತಕ್ಕವರ ಎದೆಯು ಸೀಳಿಹೋಗುವುದೆಂಬುದು ಸತ್ಯ! ನನ್ನ ಎದೆ ಒಡೆಯಿತು. ಸದಾ ಶ್ರೀಕೃಷ್ಣನನ್ನು

ಧ್ಯಾನಿಸುತ್ತಿದ್ದ ಮದನನೇ ಇವನು. ಇವನು ಯಾವಾಗಲೂ ಶಿವದ್ರೋಹವನ್ನು ಎಸಗಿದವನಲ್ಲ, ಜ್ಞಾನಿಗಳನ್ನು ಪೀಡಿಸಿದವನಲ್ಲ. ಇವನಿಗೆ ಈ ಗತಿಯಾಯಿತೆ!". ಹೀಗೆ ಬಹುವಿಧದಲ್ಲಿ ಮಂತ್ರಿಯು ವಿಲಪಿಸಿದನು. ಕಡೆಗೆ ಧೃಷ್ಟಬುದ್ಧಿಯು ಲೋಹಭೂಷಿತವಾದ ದೇವಸ್ಥಾನದ ಕಂಭಕ್ಕೆ ತನ್ನ ತಲೆಯನ್ನು ಶೋಕೋದ್ರೇಕದಿಂದ ಬಲವಾಗಿ ಚಚ್ಚಿದನು. ಮೊಟ್ಟೆಯಂತೆ ತಲೆಯೊಡೆದು ನೆಲದಲ್ಲಿ ಬಿದ್ದನು. ಹೀಗೆ ಧೃಷ್ಟಬುದ್ಧಿಯೂ ಅವನ ಮಗನಾದ ಮದನನೂ ದೇವಾಲಯದಲ್ಲಿ ಹತರಾದರು.

ಪಾರ್ಥ. ಬೆಳಗಿನ ಜಾವದಲ್ಲಿ ಅರ್ಚಕನು, ಹೂ, ನೀರು-ಮುಂತಾದ್ದನ್ನು ತೆಗೆದುಕೊಂಡು ದೇವಿಯನ್ನು ಪೂಜಿಸುವುದಕ್ಕಾಗಿ ಚಂಡಿಕಾದೇವಾಲಯಕ್ಕೆ ಬಂದನು. ಒಳಗೆ ಪ್ರವೇಶಿಸಿದೊಡನೆ ತಂದೆಮಕ್ಕಳು ಆರಿಹೋದ ದೀಪಗಳಂತೆ ಮೃತರಾಗಿ ಬಿದ್ದಿರುವುದು ಗೋಚರಿಸಿತು. ಅರ್ಚಕನು "ಅಯ್ಯೋ! ಇದೇನಾಯಿತು! ನೂತನ ರಾಜ್ಯದ ಫಲವಿದು! ಕುಂತಲೇಶ್ವರನಿಗೆ ಪ್ರಿಯರಾದ ಮಂತ್ರಿ ಮತ್ತು ಅವನ ಮಗ ಇಬ್ಬರೂ ಹತರಾಗಿರುವರು" ಎಂದುಕೊಳ್ಳುತ್ತ ಈ ವೃತ್ತಾಂತವನ್ನು ಚಂದ್ರಹಾಸನಿಗೆ ತಿಳಿಸುವುದಕ್ಕಾಗಿ ಹೋದನು. ಆತನು ಚಂದ್ರಹಾಸನನ್ನು ಕಂಡು "ಪುರದ ಹೊರಗಡೆ ಇರುವ ಚಂಡಿಕಾದೇವಾಲಯದಲ್ಲಿ ನಿನ್ನೆ ರಾತ್ರಿ ಧೃಷ್ಟಬುದ್ಧಿಯನ್ನೂ ಮದನನನ್ನೂ ಯಾರೋ ಕೊಲೆ ಮಾಡಿದ್ದಾರೆ. ಯಥಾರ್ಥವನ್ನು ತಿಳಿಯಬೇಕು" ಎಂದು ನಿವೇದಿಸಿದನು. ಆ ಮಾತನ್ನು ಕೇಳಿ ಚಂದ್ರಹಾಸನು ದುಃಖಸಂತಪ್ತನಾಗಿ ಒಡನೆಯೇ ಪಾದಚಾರದಿಂದಲೇ ಅಲ್ಲಿಗೆ ಧಾವಿಸಿದನು. ದೇವಿಯ ಎದುರಿನಲ್ಲಿ ತಂದೆಮಕ್ಕಳು ಆ ರೀತಿಯಲ್ಲಿ ಮೃತರಾಗಿರುವುದನ್ನು ನೋಡಿದನು. ಅನಂತರ ದೇವಿಯನ್ನು ಕುರಿತು "ಓ ತಾಯಿ-ಚಂಡಿಕೆ, ನನ್ನ ಮೇಲೆ ನಿನಗೆ ಕೋಪ ಉಂಟಾಗಿದ್ದರೆ, ಇದೋ, ನನ್ನನ್ನು ಬಲಿಯಾಗಿ ಸ್ವೀಕರಿಸು. ಇವರೀರ್ವರನ್ನು ನೀನು ವ್ಯರ್ಥವಾಗಿ ಸಂಹರಿಸಿದೆ" ಎಂದು ಹೇಳಿ ಆ ತಂದೆ ಮಕ್ಕಳನ್ನು ನೋಡಿ ದುಃಖಿಸಿ ನೇರವಾಗಿ ಹೋಗಿ ಸ್ನಾನ ಮಾಡಿದನು. ಆಮೇಲೆ ಶುಚಿಯಾಗಿ ದೇವಸ್ಥಾನಕ್ಕೆ ಬಂದು ಸ್ವಸ್ತಿಮಂತ್ರಗಳನ್ನು ಕೇಳಿ ಚತುರಸ್ರವಾದ ಯಜ್ಞಕುಂಡವನ್ನು ಅಗೆಸಿದನು. ಅದರಲ್ಲಿ ಅಗ್ನಿಯನ್ನು ಪ್ರತಿಷ್ಠಾಪಿಸಿ ಬಲಿದೀಪಗಳನ್ನು ಹಚ್ಚಿಸಿ ಎಳ್ಳುಪಾಯಸ ಕಲ್ಲು ಸಕ್ಕರೆ ಮುಂತಾದ ದ್ರವ್ಯಗಳನ್ನು ಹವನ ಮಾಡಿದನು. ಆಮೇಲೆ ಮಂತ್ರಪೂರ್ವಕವಾಗಿ ತನ್ನ ದೇಹದಿಂದ ಮಾಂಸಖಂಡವನ್ನು ಕತ್ತರಿಸಿ ತೆಗೆದು ತೆಗೆದು ಅಗ್ನಿಯಲ್ಲಿ ಹೋಮ ಮಾಡುತ್ತ ಹೋದನು! ಕಾಲಿನಿಂದ ಹಿಡಿದು ಕತ್ತಿನವರೆಗಿರುವ ಮಾಂಸಖಂಡಗಳನ್ನು ದೇವಿಗೆ ಅರ್ಪಿಸಿದನು. ಮೂಳೆಗಳು ಮಾತ್ರ ಉಳಿದವು. ಆಗ ಚಂದ್ರಹಾಸನು ಚಂಡಿಕಾದೇವಿಯನ್ನುದ್ದೇಶಿಸಿ "ಹೇ ಜಗದಂಬಿಕೆ, ನೀನು ಚರಾಚರಗುರುವಾದ ಮಹಾವಿಷ್ಣುವಿನ ಚಿಚ್ಛಕ್ತಿಯಾಗಿದ್ದೀಯೆ. ಓ ತಾಯಿ, ಸರ್ವರ ಸರ್ವಕರ್ಮಗಳಿಗೂ ಸಾಕ್ಷಿಣಿಯಾಗಿ ರೂಪಾಂತರವನ್ನು ಧರಿಸಿ ನಿಂತಿದ್ದೀಯೆ. ಈಗ ಈ ಖಡ್ಗದಿಂದ ನನ್ನ ಶಿರಸ್ಸನ್ನು ಕತ್ತರಿಸುವೆನು! ಹೇ ಕಾಳಿಕೆ-ಅಂಬಿಕೆ, ನಿನ್ನ

ಸ್ವರೂಪನೇ ಆದ ಹೃಷಿಕೇಶನು ಇದರಿಂದ ಸಂಪ್ರೀತನಾಗಲಿ!" ಎಂದು ನುಡಿದು ಖಡ್ಗವನ್ನು ಸೆಳೆದು ಮೇಲೆತ್ತಿದನು. ಅರ್ಜುನ, ಆಗ ಚಂಡಿಕಾದೇವಿಯು ಪ್ರತ್ಯಕ್ಷಳಾಗಿ "ಬೇಡ ಬೇಡ! ಚಂದ್ರಹಾಸ, ಆತ್ಮಹತ್ಯೆಯನ್ನು ಮಾಡಿಕೊಳ್ಳಬೇಡ. ಈ ಮಂತ್ರಿಯು ತನ್ನ ದುಷ್ಕರ್ಮದ ಫಲವಾಗಿ ಸತ್ತನು. ಇವನ ಮಗನು ತಂಗಿಯ ವಿವಾಹ ಸಮಯದಲ್ಲಿ ಮಾತು ಕೊಟ್ಟಂತೆ, ತನ್ನನ್ನು ಅರ್ಪಿಸಿಕೊಂಡು ಋಣಮುಕ್ತನಾದನು. ಎಲೈ ಹರಿಭಕ್ತನೆ, ನಾನು ಪ್ರಸನ್ನಳಾಗಿದ್ದೇನೆ. ನಿನ್ನ ಮನಸ್ಸಿನಲ್ಲಿರುವ ಎರಡು ವರಗಳನ್ನು ಕೇಳಿಕೊ. ನಿನಗೆ ಒಳ್ಳೆಯದಾಗಲಿ!" ಎಂದಳು. ಆಗ ಚಂದ್ರಹಾಸನು "ಹೇ ಜಗತ್ಪಾವನಿ, ನನಗೆ ಜನ್ಮಜನ್ಮಗಳಲ್ಲಿಯೂ ಶ್ರೀಹರಿಯಲ್ಲಿ ದೃಢವಾದ ಭಕ್ತಿಯು ನೆಲೆಸಿರಲಿ. ಇದು ಮೊದಲನೆಯ ವರ. ಮೃತರಾದ ಈ ತಂದೆ ಮಕ್ಕಳಿಬ್ಬರೂ ಮತ್ತೆ ಜೀವಿಸಲೆಂಬುದು ಎರಡನೆಯ ವರ. ಮಾತೆ, ನಿನಗೆ ನಮೋ ನಮಃ" ಎಂದು ನುಡಿದನು. ಆಗ ದೇವಿಯು ಹೀಗೆಂದಳು: "ಚಂದ್ರಹಾಸ, ನಿನಗೆ ವಿಷ್ಣುವಿನಲ್ಲಿ ಅಚಲವಾದ ಭಕ್ತಿಯು ನೆಲೆಸಿರುವುದು. ಅದು ಸಾತ್ತ್ವಿಕೀ ಭಕ್ತಿಯಾಗಿರುವುದು. ನಿನಗೆ ಶೂರನಾದ ಪುತ್ರನು ಜನಿಸಿ ಶ್ರೀಹರಿಯನ್ನು ಸೇವಿಸಿ ಆನಂದಗೊಳಿಸುವನು. ಚಂದ್ರಹಾಸ, ಕಲಿಯುಗದಲ್ಲಿ ನರನಾರಿಯರೆಲ್ಲರೂ ಬಾಲ್ಯದಿಂದ ನಡೆದ ನಿನ್ನ ಚರಿತೆಯನ್ನು ಆದರದಿಂದ ಕೇಳುವರು. ಭಕ್ತಿಯಿಂದ ಜನಾರ್ದನನನ್ನು ಧ್ಯಾನಿಸುತ್ತ ಯಾರು ನಿನ್ನ ಚರಿತ್ರೆಯನ್ನು ಆಲಿಸುವರೋ ಅವರೆಲ್ಲರಿಗೂ ವಿಷ್ಣುವಿನಲ್ಲಿ ಭಕ್ತಿಯು ದೃಢವಾಗುವುದು. ಓ ಚಂದ್ರಹಾಸ ಮಹಾಪ್ರಾಜ್ಞ, ನನ್ನೆದುರಿಗೆ ಬಂದು ನಿಂತುಕೊ. ಕಣ್ಣುಗಳನ್ನು ಮುಚ್ಚಿ ಅರ್ಧಮುಹೂರ್ತದವರಿಗೆ ಸ್ಥಿರನಾಗಿ ನಿಲ್ಲು"

ಅರ್ಜುನ, ಚಂದ್ರಹಾಸನು ದೇವಿಯ ಆಜ್ಞೆಯಂತೆ ಅವಳ ಎದುರಿಗೆ ಹೋಗಿ ಕಣ್ಣುಗಳನ್ನು ಮುಚ್ಚಿ ನಿಂತುಕೊಂಡನು. ಖಡ್ಗ, ಶಕ್ತಿ, ಗದೆ, ಕಮಲಗಳನ್ನು ಧರಿಸಿದ ವೈಷ್ಣವೀ ಶಕ್ತಿಯು ಜ್ಞಾನೋಪದೇಶಕವಾದ ತನ್ನ ಅಮೃತಹಸ್ತವನ್ನು ಚಂದ್ರಹಾಸ ಮಹಾರಾಜನ ಶಿರಸ್ಸಿನ ಮೇಲಿರಿಸಿದಳು. ಸ್ವಲ್ಪ ಹೊತ್ತಿನ ಮೇಲೆ ಅವನು ಕಣ್ಣನ್ನು ತೆರೆಯಲು, ಎದುರಿಗೆ ಧೃಷ್ಟಬುದ್ಧಿಯೂ ಮದನನು ಮಲಗಿ ಎದ್ದವರಂತೆ ಮೊದಲಿನ ಅಂಗಸೌಷ್ಠವವನ್ನು ಪಡೆದು ಹಿಂದಿನ ವೇಷದಲ್ಲಿಯೇ ನಿಂತಿದ್ದರು! ತನ್ನ ದೇಹವೂ ಮೊದಲಿನಂತೆ ಮಾಂಸಖಂಡಗಳಿಂದ ತುಂಬಿ ಯಾವ ಗಾಯವೂ ಇಲ್ಲದಾಗಿತ್ತು! ಆದರೆ ಜಗದಂಬೆಯೂ ವಿಷ್ಣುವಿನ ಶರೀರಭೂತಳೂ ಆದ ಚಂಡಿಕಾದೇವಿಯು ಮಾತ್ರ ಗೋಚರಿಸಲಿಲ್ಲ! ಆಕಾಶದಿಂದ ದೇವತೆಗಳು ಪುಷ್ಪವೃಷ್ಟಿಯನ್ನು ಸುರಿಸಿದರು. ಚಂದ್ರಹಾಸನು ಧೃಷ್ಟಬುದ್ಧಿಗೆ ನಮಸ್ಕರಿಸಿ ಮದನನನ್ನು ಆಲಂಗಿಸಿಕೊಂಡನು. ಮಾವನನ್ನು ಆದರಿಸುತ್ತ "ಇದೆಲ್ಲವೂ ಶ್ರೀಹರಿಯ ಮಾಯೆ. ಯಾವನು ಬದುಕುತ್ತಾನೆ? ಯಾವನು ಸಾಯುತ್ತಾನೆ? ನಾವು ಸರ್ವವಿಧದಲ್ಲಿಯೂ ಭಗವಂತನನ್ನು ಭಜಿಸುತ್ತಿರೋಣ" ಎಂದನು. ಪಾರ್ಥ, ಈ ರೀತಿಯಲ್ಲಿ ಆ ವಿಷ್ಣುಭಕ್ತನಿಗೆ ಬಂದ

ಕಷ್ಟವೆಲ್ಲವೂ ನೀಗಿತು, ಆಮೇಲೆ ಚಂದ್ರಹಾಸನು ಧೃಷ್ಟಬುದ್ಧಿ ಮತ್ತು ಮದನನಿಂದ ಸಮೇತನಾಗಿ ತನ್ನ ಕುಂತಲನಗರವನ್ನು ಪ್ರವೇಶಿಸಿದನು.

ನಾರದಮುನಿಯು ಹೀಗೆ ಹೇಳಲಾಗಿ ಅರ್ಜುನನು "ನಾರದರೆ, ಚಂದ್ರಹಾಸನು ದೈವಗತಿಯಿಂದ ಮಹಾರಾಜ್ಯವನ್ನು ಪಡೆದನು. ಅತ್ತಲಾಗಿ ಕಷ್ಟಕ್ಕೆ ಸಿಕ್ಕಿದ್ದ ಕುಲಿಂದನ ಗತಿ ಏನಾಯಿತು?" ಎಂದು ಕೇಳಿದನು. ಆಗ ನಾರದಮುನಿಯು ಇಂತೆಂದನು.

ಅರ್ಜುನ, ಅದನ್ನು ಹೇಳುವೆನು, ಕೇಳು. ಧೃಷ್ಟಬುದ್ಧಿಯು ಹೇಳಿದಂತೆ ಚಂದ್ರಹಾಸನು ಕುಂತಲಪುರಕ್ಕೆ ಹೋದನಷ್ಟೆ. ಚಂದನಾವತಿಯಲ್ಲಿ ಕುಲಿಂದನು ಮಂತ್ರಿಯ ಹಿಂಸೆಗೆ ಒಳಗಾದನು. ಅವನು ಭಗವಂತನನ್ನು ಧ್ಯಾನ ಮಾಡುತ್ತ ಶ್ರೀಹರಿಯೇ ಬಂಧಮೋಕ್ಷಕನು ಎಂಬ ನಿರ್ಧಾರದಿಂದ ತನ್ನಲ್ಲಿದ್ದ ಹಣವೆಲ್ಲವನ್ನೂ ಬ್ರಾಹ್ಮಣರಿಗೆ ದಾನ ಮಾಡಿದನು. ಶ್ರೀಹರಿಯನ್ನು ಧ್ಯಾನಿಸಿ "ಸ್ವಾಮಿ, ನನ್ನ ಮಗನಾದ ಚಂದ್ರಹಾಸನು ನಿನ್ನ ಭಕ್ತ. ನಿನ್ನ ಸ್ಮರಣೆಯಲ್ಲಿಯೇ ಸದಾ ನಿರತನಾದವನು. ಅವನನ್ನು ನೀನೇ ನನಗೆ ಅನುಗ್ರಹಿಸಿದೆ. ಪಾಪಿಯಾದ ಈ ಮಂತ್ರಿಯ ಚೇಷ್ಟೆಯಿಂದ ಅವನಿಗೆ ಯಾವ ವಿಪತ್ತು ಬಂದರೂ ನೀನೇ ರಕ್ಷಿಸಬೇಕು" ಎಂದು ಪ್ರಾರ್ಥಿಸಿಕೊಂಡನು. ಅವನು ವೈರಾಗ್ಯವನ್ನಲಂಬಿಸಿ ತನ್ನ ಮನೆಯಲ್ಲಿ ಪತ್ನೀಬಾಂಧವರಿಂದ ಸಮೇತನಾಗಿ ಭಗವಂತನನ್ನು ಧ್ಯಾನಿಸುತ್ತ ಅಗ್ನಿಪ್ರವೇಶ ಮಾಡಬೇಕೆಂದು ನಿರ್ಧರಿಸಿದನು. ಅಷ್ಟರಲ್ಲಿ ಕೆಲವು ಪೌರರು ಧೃಷ್ಟಬುದ್ಧಿಯ ಬಳಿಗೆ ಹೋಗಿ "ಪ್ರಭು, ಕುಲಿಂದರಾಜನು ಸದಾ ನಿನ್ನ ಹಿತವನ್ನು ಕೋರುತ್ತಿದ್ದನು. ಅವನು ದುಃಖತಪ್ತನಾಗಿ ತನ್ನ ಪರಿವಾರದೊಂದಿಗೆ ಅಗ್ನಿಪ್ರವೇಶಮಾಡಬೇಕೆಂದು ನಿಶ್ಚಯಿಸಿದ್ದಾನೆ" ಎಂದು ತಿಳಿಸಿದರು. ಆಗ ಧೃಷ್ಟಬುದ್ಧಿಗೆ ಭಗವಂತನ ಪ್ರೇರಣೆಯಿಂದ ಹೀಗೆನಿಸಿತು. "ಈತನ ಮಗನನ್ನು ನಾನು ಕುಂತಲಪುರಕ್ಕೆ ಕಳಿಸಿ ಕೊಲ್ಲಿಸಿದ್ದೇನೆ! ಧನವೆಲ್ಲವನ್ನೂ ಕಳೆದುಕೊಂಡಿರುವ ಈ ವೃದ್ಧನನ್ನೂ ಸಾಯಿಸುವುದೇಕೆ? ಪುತ್ರಹೀನನಾದ ಇವನು ಬದುಕಿದ್ದರೂ ಸತ್ತಂತೆಯೇ. ದೈವವೇ ಇವನನ್ನು ಕೊಂದುಬಿಟ್ಟಿದೆ! ಹೀಗೆ ಆಲೋಚಿಸಿ ಒಡನೆಯೇ ಬಂದು ಅಗ್ನಿಪ್ರವೇಶಮಾಡದಂತೆ ಕುಲಿಂದ ರಾಜನನ್ನು ತಡೆದನು. "ಕುಲಿಂದ, ವಿಷಣ್ಣನಾಗಬೇಡ! ನಿನ್ನ ದ್ರವ್ಯವನ್ನು ಅಪಹರಿಸಿದೆನೆಂದು ದುಃಖಿಸಬೇಡ. ನಿನ್ನ ಧನವನ್ನೂ ದೇಶವನ್ನೂ ಮತ್ತೆ ನಿನಗೆ ಹಿಂದಿರುಗಿ ಕೊಡುವೆನು" ಇತ್ಯಾದಿ ನಾನಾವಚನಗಳಿಂದ ಸಮಾಧಾನ ಹೇಳಿದನು. ಆಗ ಕುಲಿಂದರಾಜನು ತನ್ನ ಪುತ್ರನು ಬದುಕಬಹುದೆಂಬ ಆಸೆಯಿಂದ ಎದ್ದುಬಂದು ಧೃಷ್ಟಬುದ್ಧಿಗೆ ನಮಸ್ಕಾರ ಮಾಡಿದನು. ಧೃಷ್ಟಬುದ್ಧಿಯು ಅವನನ್ನು ಸಂತೈಸಿ ಅಗ್ನಿಪ್ರವೇಶಮಾಡದಂತೆ ತಡೆದು ತನ್ನ ನಗರಕ್ಕೆ ಹೊರಟುಬಂದನು. ಅನಂತರ ನಡೆದ ಚಂದ್ರಹಾಸನ ವೃತ್ತಾಂತವೆಲ್ಲವೂ ಕುಲಿಂದರಾಜನಿಗೆ ಜನರಿಂದ ತಿಳಿದು ಬಂದಿತು. ಆಗ ಅವನು ಅತ್ಯಾನಂದದಿಂದ

ಹರಿಯನ್ನು ವಂದಿಸಿ ದಾನಧರ್ಮಗಳನ್ನು ಮಾಡಿದನು. ಇತ್ತಲಾಗಿ ಚಂದ್ರಹಾಸನೂ ಕುಂತಲರಾಜ್ಯವನ್ನು ಪಡೆದು ದ್ವಿಜರನ್ನು ಪೂಜಿಸಿದನು. ಮದನ ಮುಂತಾದವರೆಲ್ಲರೂ ಚಂದ್ರಹಾಸನನ್ನು ಆದರಿಸಿದರು. ಆಮೇಲೆ ಚಂದ್ರಹಾಸನು ತಂದೆಯಾದ ಕುಂತಲರಾಜನನ್ನೂ ಮಗನಿಗಾಗಿ ಹಂಬಲಿಸುತ್ತಿದ್ದ ಆ ತಾಯಿಯನ್ನೂ ಕುಂತಲನಗರಕ್ಕೆ ಕರೆಸಿಕೊಂಡನು.

ಪಾರ್ಥ, ಚಂದ್ರಹಾಸನು ಮುನ್ನೂರುವರ್ಷಗಳವರೆಗೆ ಕುಂತಲಪುರದಲ್ಲಿ ರಾಜ್ಯಭಾರಮಾಡಿದನು. ವಿಷಯೆಯು ಮಕರಧ್ವಜನೆಂಬ ಶೂರನಾದ ಪುತ್ರನನ್ನು ಹಡೆದಳು. ಚಂಪಕಮಾಲಿನಿಗೆ ಪದ್ಮಾಕ್ಷನೆಂಬ ವೀರನಾದ ಮಗನು ಜನಿಸಿದನು. ಈ ರೀತಿಯಲ್ಲಿ, ಅರ್ಜುನ, ಚಂದ್ರಹಾಸನು ಶಿಶುವಾದಾಗಲೇ ಶಾಲಗ್ರಾಮಶಿಲೆಯ ಸಂಗದಿಂದ ಭವಸಾಗರವನ್ನು ದಾಟಿದನು. ಆದ್ದರಿಂದ ಮನುಷ್ಯನು ಶಾಲಗ್ರಾಮ ಶಿಲೆಯನ್ನು ನಿತ್ಯವೂ ಪೂಜಿಸಬೇಕು. ದ್ವಾರಕೆಯಲ್ಲಿ ಉದ್ಭವಿಸುವ ಶಾಲಗ್ರಾಮಶಿಲೆಯಲ್ಲಿ ಭಗವಂತನು ಕಲಿಕಾಲದಲ್ಲಿಯೂ ನಿತ್ಯಸಂನಿಹಿತನಾಗಿರುವನು. ಅಲ್ಲದೆ ಸರ್ವರಿಗೂ ಸುಖವಾಗಲೆಂದು ಶ್ರೀಕೃಷ್ಣನು ಯತಿರೂಪದಲ್ಲಿ ಸಂಚರಿಸುವನು. ಆದ್ದರಿಂದ ಯತಿರೂಪನಾದ ಕೇಶವನನ್ನು ಜನರು ಪೂಜಿಸಬೇಕು. ದೇವದೇವನಾದ ಶ್ರೀಹರಿಗೆ ಚರ ಅಚರಗಳೆಂಬ ಎರಡು ರೂಪಗಳುಂಟು. ಸಂನ್ಯಾಸಿಯು ಚರ ರೂಪನು. ಶಾಲಗ್ರಾಮವು ಅಚರರೂಪ. ಅಲಂಘ್ಯವಾದ ಸಂಸಾರಸಾಗರವನ್ನು ದಾಟಬೇಕೆಂಬ ಇಚ್ಛೆಯಿದ್ದರೆ, ಅರ್ಜುನ, ಶಾಲಗ್ರಾಮಶಿಲೆಯನ್ನು ನಿತ್ಯವೂ ಅರ್ಚಿಸು. ಯಾವನು ವಿಷ್ಣುಭಕ್ತನಾದ ದ್ವಿಜನಿಗೆ ಶಾಲಗ್ರಾಮವನ್ನು ದಾನಮಾಡುವನೋ ಅವನಿಗೆ ಮುಕ್ತಿಯು ದುರ್ಲಭವಲ್ಲ. ಶಿಲಾನಾಯಕವೆನಿಸಿದ ಶಾಲಗ್ರಾಮವನ್ನು ಅರ್ಚಿಸಿದರೂ ಆದರಿಸಿದರೂ ಧ್ಯಾನಿಸಿದರೂ ಸ್ತುತಿಸಿದರೂ ಪಾಪಿಗಳಿಗೆ ಸಹ ಉಪಕಾರವಾಗುತ್ತದೆ. ಇನ್ನು ಧರ್ಮಿಷ್ಠರಿಗೆ ಆಗುವುದೆಂದು ಹೇಳಬೇಕಾದ್ದೇನು? ನೈಮಿಷಾರಣ್ಯ, ಪ್ರಯಾಗ, ಗಂಗಾಸಾಗರ ಸಂಗಮ, ಕುರುಕ್ಷೇತ್ರ ಇವುಗಳಿಗಿಂತ ನೂರರಷ್ಟು ಅಧಿಕವಾದ ಫಲವನ್ನು ಶಾಲಗ್ರಾಮ ಶಿಲಾರ್ಚನೆಯು ಕೊಡುತ್ತದೆ. ಜನ್ಮಕೋಟಿಗಳಲ್ಲಿ ಆರ್ಜಿಸಿದ ಪಾಪರಾಶಿಯನ್ನೂ ಅದು ಹೋಗಲಾಡಿಸುತ್ತದೆ. ಆ ಶಿಲೆಗೆ ಹಚ್ಚಿದ ಶ್ರೀಗಂಧವನ್ನಾಗಲಿ ಕುಂಕುಮವನ್ನಾಗಲಿ ಯಾವನು ದಿನವೂ ತನ್ನ ದೇಹದಲ್ಲಿ ಧರಿಸುವನೋ ಅವನು ಮುಕ್ತನೆಂದೇ ತಿಳಿಯಬೇಕು. ಅದರ ನಿರ್ಮಾಲ್ಯವನ್ನು ಶಿರಸ್ಸಿನಲ್ಲಿ ಧರಿಸಬೇಕು. ಶಾಲಗ್ರಾಮವೆಂದರೆ ಸಾಕ್ಷಾತ್ ಶ್ರೀಹರಿಯೇ ಎಂದು ಬ್ರಹ್ಮನು ಹೇಳಿದ್ದಾನೆ. ಶಾಲಗ್ರಾಮಕ್ಕೆ ನೈವೇದ್ಯಮಾಡಿದ ಅನ್ನವನ್ನು ತಿಂದರೆ ಒಂದೊಂದು ಅಗಳಿಗೂ ಗೋದಾನ ಮಾಡಿದ ಫಲ ಉಂಟು. ಯಾರು ಆ ಶಿಲೆಯನ್ನು ಪ್ರತಿದಿನವೂ ಸ್ಪರ್ಶಿಸುವರೋ ಅವರು ದೇವದ್ವಿಜಪಿತೃಗಳನ್ನು ಪೂಜಿಸಿದಂತೆಯೇ ಸರಿ. ಶಾಲಗ್ರಾಮಶಿಲೆಯ ಸಾಂನಿಧ್ಯದಲ್ಲಿ ನಿತ್ಯ ನೈಮಿತ್ತಿಕಶ್ರಾದ್ಧವನ್ನು ಆಚರಿಸಿದರೆ

ಗಯಾಶ್ರಾದ್ಧದ ಫಲವಿದೆ. ಆ ಶಿಲೆಯ ಎದುರಿನಲ್ಲಿ ಭಾರತವನ್ನೂ ಹರಿವಂಶವನ್ನೂ ಪಠಿಸಿದರೆ ಪುತ್ರಧನ ಸಂಪತ್ತು ಲಭಿಸುವುದು. ಭಾಗವತವನ್ನು ಪಠಿಸಿದರೆ ಐಹಿಕ ಪಾರಲೌಕಿಕಗಳೆರಡೂ ಸಿದ್ಧಿಸುತ್ತವೆ. ಈ ಗ್ರಂಥಗಳನ್ನು ಶಾಲಗ್ರಾಮದ ಎದುರಿಗೆ ಕುಳಿತು ಆಲಿಸಿದವನು ಪುಣ್ಯವಂತನಾಗಿ ಪಾವನನಾಗುತ್ತಾನೆ. ಯಾರ ಮನೆಯಲ್ಲಿ ಶಾಲಗ್ರಾಮವಿರುವುದೋ ಅಲ್ಲಿ ಸಕಲತೀರ್ಥಗಳೂ ಸಕಲದೇವತೆಗಳೂ ಯಜ್ಞಗಳೂ ನೆಲೆಸಿವೆಯೆಂದು ತಿಳಿಯಬೇಕು. ಅಂತ್ಯಕಾಲದಲ್ಲಿ ಶಾಲಗ್ರಾಮಶಿಲೋದಕವನ್ನು ಬಾಯಲ್ಲಿ ಹಾಕಿದರೆ ಪಾಪಿಗೂ ಸದ್ಗತಿಯುಂಟು. ಶ್ರೀಮನ್ನಾರಾಯಣನಿಗೆ ಸಮನಾದ ಬಂಧುವಿಲ್ಲ; ದ್ವಾದಶಿಗೆ ಸಮವಾದ ತಿಥಿ ಇಲ್ಲ. ವಿಷ್ಣು ಪಾದೋದಕಕ್ಕೆ ಸಮವಾದ ತೀರ್ಥವಿಲ್ಲ. ಚಿಗುರಿದ ತುಳಸಿಯನ್ನು ನೋಡಿದ ಮಂತ್ರದಿಂದ ಮನುಷ್ಯನ ಪಾತಕವು ದೂರವಾಗುತ್ತದೆ. ತುಳಸಿಯ ತೆನೆಯಲ್ಲಿ ಕೇಶವನು ಸದಾ ನೆಲೆಸಿರುತ್ತಾನೆ. ತುಳಸಿಯ ಎಲೆಗಳಿಂದ ಅವು ಕೆಳಗೆ ಉದುರಿಹೋಗಿದ್ದರೂ ಆಗಬಹುದು. ಕೇಶವನನ್ನು ಪೂಜಿಸಬೇಕು. ಹಾಗೆ ತುಲಸೀ ದಳಗಳಿಂದ ಶ್ರೀಕೃಷ್ಣನನ್ನು ಅರ್ಚಿಸುವವನಿಗೆ ಯಜ್ಞ ಮಾಡಿದ ಪುಣ್ಯವು ಲಭಿಸುತ್ತದೆ. ಅರ್ಜುನ, ಶಾಲಗ್ರಾಮಶಿಲೆಯ ಮಹಿಮೆಯನ್ನು ಪೂರ್ಣವಾಗಿ ವರ್ಣಿಸಲು ನನಗೆ ಶಕ್ಯವಿಲ್ಲ. ನಾನು ದೇವಲೋಕಕ್ಕೆ ಹೊರಡುವೆನು! ಎಂದು ಹೇಳಿ ನಾರದಮುನಿಯು ಹೊರಟು ಹೋದನು. ಅದನ್ನು ಕೇಳಿ ಅರ್ಜುನನು ವಿಸ್ಮಿತನಾದನು. ಅವನು 'ಸಜ್ಜನರ ಸಹವಾಸದಿಂದಲೇ ಜನರಿಗೆ ಸೌಖ್ಯವಾಗುವುದು' ಎಂದು ಹೇಳಿ ಸಕಲಭೂಪಾಲರ ಸಮೇತನಾಗಿ ಕುಂತಲನಗರಾಭಿಮುಖನಾಗಿ ಪ್ರಯಾಣ ಮಾಡಿದನು. ಜನಮೇಜಯ, ಈ ಚಂದ್ರಹಾಸನ ಇತಿಹಾಸವನ್ನು ಯಾವನು ಓದುವನೋ ಅವನು ಈ ಲೋಕದಲ್ಲಿ ಸಕಲಭೋಗಗಳನ್ನು ಅನುಭವಿಸಿ, ಅನಂತರ ವಿಷ್ಣುಲೋಕದಲ್ಲಿ ಪೂಜಿತನಾಗಿ ವಿರಾಜಿಸುವನು.

# ಚಂದ್ರಹಾಸ ಸಮಾಗಮ

ಜನಮೇಜಯರಾಯನು "ಜೈಮಿನಿ ಮಹರ್ಷಿಗಳೆ, ಚಂದ್ರಹಾಸನು ಅರ್ಜುನನ ಅಶ್ವಗಳನ್ನು ಕಟ್ಟಿಹಾಕಿದನೆ? ಇಲ್ಲವೆ? ಈ ವೃತ್ತಾಂತವೆಲ್ಲವನ್ನೂ ಹೇಳೋಣವಾಗಲಿ" ಎಂದು ಕೇಳಿದನು. ಆಗ ಜೈಮಿನಿ ಮುನಿಗಳು ಹೀಗೆಂದರು: ಜನಮೇಜಯ, ಆ ದಿನ ಪ್ರಾತಃಕಾಲದಲ್ಲಿ ಕುಂತಲಪುರದ ಹೊರಗೆ ಬಂದ ಚಂದ್ರಹಾಸಪುತ್ರರಾದ ಪದ್ಮಾಕ್ಷಮಕರಧ್ವಜರು ಅರ್ಜುನನ ಯಜ್ಞಾಶ್ವಗಳನ್ನು ಕಂಡರು. ಅವರು ವಿಸ್ಮಿತರಾಗಿ ಕುದುರೆಗಳನ್ನು ಹಿಡಿದು ನಿಲ್ಲಿಸಿ ಅಲ್ಲಿದ್ದ ಪತ್ರದ ಅಭಿಪ್ರಾಯವನ್ನು ತಿಳಿದುಕೊಂಡು ತಂದೆಗೆ ಹೋಗಿ ತಿಳಿಸಿದರು. ಪಾರ್ಥನ ಅಶ್ವಗಳು ಬಂದಿರುವುದನ್ನು ಗ್ರಹಿಸಿ ಚಂದ್ರಹಾಸನು ಆನಂದದಿಂದ "ಆಹಾ! ಈಗ ಶ್ರೀಕೃಷ್ಣನು ಆಗಮಿಸಿದನು! ಬಾಲ್ಯದಿಂದಲೂ ನಾನು ಯಾವ ದೇವನನ್ನು ಸದಾ ಧ್ಯಾನಿಸುತ್ತಿದ್ದೆನೋ ಆ ಕೇಶವನು ಪಾರ್ಥಸಮೇತನಾಗಿ ಬರುವನು" ಎಂದುಕೊಂಡನು. ಅನಂತರ ವಿಷಯಾತನಯನಾದ ಮಕರಧ್ವಜನನ್ನು ನೋಡಿ "ವತ್ಸ, ಸಾಕ್ಷಾತ್ ಧರ್ಮಪುರುಷನಾದ ಯುಧಿಷ್ಠಿರನ ಅಶ್ವಗಳು ಬಂದಿವೆ. ಸುಮಾರು ಒಂದು ವರ್ಷದಿಂದಲೂ ಈ ಅಶ್ವಗಳನ್ನು ಅವರು ಬಹುಕ್ಲೇಶದಿಂದ ರಕ್ಷಿಸುತ್ತ ಬಂದಿದ್ದಾರೆ. ನೀನು ಇವನ್ನು ಕಟ್ಟಿಹಾಕಿದಾಗ ಒಂದು ವರ್ಷವು ಪೂರ್ಣವಾದರೆ ಧರ್ಮರಾಜನ ಯಾಗವು ನಿಷ್ಫಲವಾಗುವುದು. ಆದ್ದರಿಂದ ಪುತ್ರ, ಒಂದು ತಿಂಗಳು ಮಾತ್ರ ಇವುಗಳನ್ನು ಬಂಧಿಸಿಡು. ಅನಂತರ ಧರ್ಮರಾಜನಿಗೆ ಒಪ್ಪಿಸಿಬಿಡು. ಪುಣ್ಯಕಾರ್ಯವನ್ನು ನಾವು ಮಾಡಬೇಕಲ್ಲದೆ, ಈ ಅಶ್ವಗಳಿಂದ ನಮಗೆ ಆಗುವ ಪ್ರಯೋಜನವೇನು? ವಾಸುದೇವನ ದರ್ಶನದಿಂದಲೇ ನಮಗೆ ಪುಣ್ಯ ಉಂಟು. ಶ್ರೀಹರಿಗೆ ತೃಪ್ತಿಯಾಗುವಂತೆ ಪಾರ್ಥನೊಡನೆ ನಾನು ಯುದ್ಧ ಮಾಡುವೆನು!" ಎಂದು ಹೇಳಿದನು.

ತಂದೆಯ ಮಾತಿನಂತೆ ಮಕರಧ್ವಜನು ಅಶ್ವಗಳನ್ನು ಬಂಧಿಸಿ ರಕ್ಷಣೆಯಲ್ಲಿಟ್ಟನು. ಚಂದ್ರಹಾಸನು ಸೇನಾಸಮೇತನಾಗಿ ನಗರದ ಹೊರಗೆ ಬಂದು ಯುದ್ಧಸಂನದ್ಧನಾಗಿ ನಿಂತನು. ಅಷ್ಟರಲ್ಲಿ ಅರ್ಜುನನು ಶ್ರೀಕೃಷ್ಣನೊಡನೆ ಬಂದು ಮಹಾವೈಷ್ಣವನಾದ ಚಂದ್ರಹಾಸನನ್ನು ವೀಕ್ಷಿಸಿದನು. ಚಂದ್ರಹಾಸನು ಶಂಖಚಕ್ರಾಂಕಿತ ಶರೀರನಾಗಿ ಊರ್ಧ್ವಪುಂಡ್ರವನ್ನು ಧರಿಸಿದ್ದನು. ಶ್ರೀಕೃಷ್ಣನ ಪಾದಕಮಲಗಳಿಗೆ ಅರ್ಪಿಸಿದ ತುಲಸಿಯನ್ನು ಮಸ್ತಕದಲ್ಲಿ ಮುಡಿದಿದ್ದನು. ವಯೋವೃದ್ಧನೂ ತಪೋವೃದ್ಧನೂ ಜ್ಞಾನವೃದ್ಧನೂ ಆದರೂ ಯುದ್ಧದಲ್ಲಿ ನವಯುವಕನಾಗಿದ್ದನು! ಆಗ ಅರ್ಜುನನು "ಇಂದು ನನ್ನ ಜನ್ಮವು ಸಫಲವಾಯಿತು! ನಮ್ಮ ವಂಶವು ಪವಿತ್ರವಾಯಿತು. ಬಾಲ್ಯದಿಂದಲೂ ವಿಷ್ಣುಭಕ್ತನಾದ ಚಂದ್ರಹಾಸನನ್ನು ಕಂಡೆವು!" ಎಂದು ಉದ್ಗರಿಸಿದನು. ಶ್ರೀಕೃಷ್ಣನು ರಥದ ಮುಂಗಡೆಯಲ್ಲಿ ಚತುರ್ಭುಜನಾಗಿ ಶಂಖ ಚಕ್ರ ಗದಾ ಪದ್ಮಗಳನ್ನು

ಧರಿಸಿ ಕಂಗೊಳಿಸಿದನು. ಚಂದ್ರಹಾಸನು ಶ್ರೀಕೃಷ್ಣನನ್ನು ಕಂಡೊಡನೆ ರಥದಿಂದಿಳಿದು ಬಂದು ಪಾರ್ಥನೆದುರಿಗೆ ಶ್ರೀಕೃಷ್ಣನನ್ನು ವಂದಿಸಿದನು. ಜನಮೇಜಯ, ವಾಸುದೇವನು ಚಂದ್ರಹಾಸನನ್ನು ಪ್ರೀತಿಯಿಂದ ಆಲಿಂಗಿಸಿಕೊಂಡು "ಅರ್ಜುನ, ಬಾ ಮುಂದೆ! ಧ್ರುವನಂತೆ ನಿಷ್ಠಾವಂತನಾದ ನನ್ನ ಭಕ್ತನೂ ಮಹಾಬಾಹುವೂ ವೃದ್ಧನೂ ಧರ್ಮನಿರತನೂ ಆದ ಚಂದ್ರಹಾಸನನ್ನು ಆಲಿಂಗಿಸು!" ಎಂದು ಹೇಳಿದನು. ಅರ್ಜುನನು "ಶ್ರೀಕೃಷ್ಣ, 'ಶ್ರೇಯಾನ್ ಸ್ವಧರ್ಮೋ ವಿಗುಣಃ ಪರಧರ್ಮಾತ್ ಸ್ವನುಷ್ಠಿತಾತ್ - ಚೆನ್ನಾಗಿ ಪಾಲಿಸುವ ಪರಧರ್ಮಕ್ಕಿಂತಲೂ ನ್ಯೂನತೆಯುಳ್ಳ ಸ್ವಧರ್ಮವೇ ಹೆಚ್ಚಿನದು' ಎಂಬುದಾಗಿ ಭೀಷ್ಮನೆದುರಿಗೆ ನಿಂತಾಗ ನನಗೆ ಉಪದೇಶಿಸಿದ್ದೀಯೆ, ಈಗ ಅದಕ್ಕೆ ವಿಪರೀತವಾಗಿ ಹೇಳುವೆಯಲ್ಲ! ಚಂದ್ರಹಾಸನೊಡನೆ ನಾನು ಯುದ್ಧಮಾಡಬೇಕಲ್ಲದೆ, ಅವನನ್ನು ಆಲಿಂಗಿಸಿ ಕೊಳ್ಳಬಹುದೆ? ಈ ಭೂಪಾಲನು ಹಿರಿಯನಾದ್ದರಿಂದ ಈತನಿಗೆ ನಮಸ್ಕಾರವನ್ನು ಮಾತ್ರ ಮಾಡುವೆನು" ಎಂದನು. ಶ್ರೀಕೃಷ್ಣನು "ಪಾರ್ಥ, ನನ್ನ ಭಕ್ತನನ್ನು ನಮಸ್ಕರಿಸಲೂ ಬೇಕು, ಆಲಿಂಗಿಸಿಕೊಳ್ಳಲೂ ಬೇಕು! ಕಪಿಲವರ್ಣದ ನೂರು ಗೋವುಗಳನ್ನು ದಾನಮಾಡಿದರೆ ಯಾವ ಫಲವಿದೆಯೋ ಆ ಫಲವು ವಿಷ್ಣುಭಕ್ತನ ಆಲಿಂಗನದಿಂದ ದೊರೆಯುತ್ತದೆ. ನನ್ನ ಭಕ್ತನಲ್ಲಿಡುವ ಪ್ರೀತಿಯು ಶ್ರೇಷ್ಠವಾದ ಧರ್ಮವೆನಿಸುತ್ತದೆ. ವಿಷ್ಣುವಲ್ಲಭನೂ ವೈಷ್ಣವನೂ ಆದ ಈ ಚಂದ್ರಹಾಸನನ್ನು, ಅರ್ಜುನ, ಆಲಿಂಗಿಸು! ಎಂದು ನುಡಿದನು. ವಾಸುದೇವನ ನುಡಿಯಿಂದ ಅರ್ಜುನನು ಸಂತುಷ್ಟನಾಗಿ, ಅರ್ಜುನನು ಚಂದ್ರಹಾಸನನ್ನು ಗಾಢವಾಗಿ ಆಲಂಗಿಸಿದನು. ಆಗ ಚಂದ್ರಹಾಸನು ಅರ್ಜುನನನ್ನು ಕುರಿತು "ಪಾಂಡವ, ನಾನು ಯುದ್ಧಕ್ಕೆ ಸಂನದ್ಧನಾಗಿ ಬಂದು ನಿಂತಿದ್ದೇನೆ. ಅಶ್ವವನ್ನು ಬಂಧಿಸಿ ರಕ್ಷಿಸಬೇಕೆಂದು ನನ್ನ ಮಗನಿಗೆ ಆಜ್ಞಾಪಿಸಿದ್ದೇನೆ. ಆದರೆ, ಅರ್ಜುನ, ಯುದ್ಧದಲ್ಲಿ ತೊಡಗಿದರೆ ನಿನ್ನ ಯಾಗವು ನಡೆಯಲಾರದು! ಶ್ರೀಕೃಷ್ಣನ ಸದುಪಯೋಗದಿಂದ ನಮ್ಮಿಬ್ಬರಿಗೆ ಸ್ನೇಹವು ಏರ್ಪಟ್ಟಿತು. ನಾವು ಸರ್ವಭಾವದಿಂದಲೂ ಶ್ರೀಕೃಷ್ಣನನ್ನು ಆಶ್ರಯಿಸೋಣ" ಎಂದು ಹೇಳಿ ಕುಶಲವಾರ್ತೆಗಳಲ್ಲಿ ತೊಡಗಿದನು.

ಅಷ್ಟರಲ್ಲಿ ಅರ್ಜುನನ ಯಜ್ಞಾಶ್ವಗಳೂ ಅವುಗಳ ಹಿಂದೆ ವಿಷಯಾತನಯನಾದ ಮಕರಧ್ವಜನೂ ಆಗಮಿಸಿದರು. ಮಕರಧ್ವಜನು ತನ್ನ ತಂದೆಗೂ ಕೃಷ್ಣಾರ್ಜುನರಿಗೂ ನಮಸ್ಕರಿಸಿದನು. ಪ್ರದ್ಯುಮ್ನಾದಿಗಳು ಬಂದು ಚಂದ್ರಹಾಸನನ್ನು ವಂದನಾದಿಗಳಿಂದ ಆದರಿಸಿದರು. ಚಂದ್ರಹಾಸನು ಶ್ರೀಕೃಷ್ಣನನ್ನು ಬಗೆಬಗೆಯಲ್ಲಿ ಸ್ತುತಿಸಿದನು.

ಚಂದ್ರಹಾಸನು ಭೂಲೋಕದ ಇಂದ್ರನಂತೆ ವಿರಾಜಿಸುತ್ತ ಶ್ರೀಕೃಷ್ಣಾರ್ಜುನರನ್ನು ಉತ್ಸವದೊಡನೆ ತನ್ನ ನಗರದೊಳಗೆ ಕರೆದೊಯ್ದನು. ಜನಮೇಜಯ, ಚಂದ್ರಹಾಸನ ಆಡಳಿತದಲ್ಲಿ ಪ್ರಜೆಗಳೆಲ್ಲರೂ ಕೃಷ್ಣಭಕ್ತರಾಗಿದ್ದರು. ಧೃಷ್ಟಬುದ್ಧಿಯು ತನ್ನ ಮಕ್ಕಳೊಡನೆ

ಬಂದು ಶ್ರೀಕೃಷ್ಣನನ್ನು ಸಂದರ್ಶಿಸಿ ಕೃತಾರ್ಥನಾದನು. ಚಂದ್ರಹಾಸನು ವಿಧ್ಯುಕ್ತವಾಗಿ ಶ್ರೀಹರಿಯನ್ನು ಪೂಜಿಸಬೇಕೆಂದು ಗಾಲವಮುನಿಯನ್ನು ಕರೆಸಿದನು. ಯೋಗಿರಾಜನಾದ ಗಾಲವ ಮುನಿಯನ್ನು ಕಂಡೊಡನೆ ವಾಸುದೇವನು ಪರಮಾನಂದದಿಂದ ಆತನಿಗೆ ನಮಸ್ಕರಿಸಿದನು. ಗಾಲವನೂ ಸಹ ವಾಸುದೇವನಿಗೆ ನಮಸ್ಕರಿಸಿ, ಅವ್ಯಯನಾದ ಆ ಪರಮಾತ್ಮನನ್ನು ಮನಸ್ಸಿನಲ್ಲಿ ಧ್ಯಾನಿಸುತ್ತ ಒಂದು ಮೂಹೂರ್ತಕಾಲ ತನ್ಮಯನಾಗಿ ನಿಂತನು. ಅನಂತರ ಚಂದ್ರಹಾಸನು ಶ್ರೀಕೃಷ್ಣನನ್ನು ವಿಧ್ಯುಕ್ತವಾಗಿ ಪೂಜಿಸಿದನು. ಕುಂತಲಪುರದಲ್ಲಿ ಪದ್ಮನೇತ್ರನಾದ ವಾಸುದೇವನು ಮೂರು ರಾತ್ರಿಗಳವರೆಗೆ ಇದ್ದು ಗಾಲವಮುನಿಯನ್ನು ಬೀಳ್ಕೊಂಡು ಹೊರಡಲನುವಾದನು. ಚಂದ್ರಹಾಸನು ತನ್ನ ಸಕಲ ರಾಜ್ಯವನ್ನೂ ಶ್ರೀಕೃಷ್ಣನಿಗೆ ಅರ್ಪಿಸಿದನು. ಶ್ರೀಕೃಷ್ಣನು ಅರ್ಜುನನ ಮಾತಿನಂತೆ ಆ ರಾಜ್ಯವನ್ನು ಚಂದ್ರಹಾಸನ ಪುತ್ರನಿಗೆ ಒಪ್ಪಿಸಿದನು. ಅರ್ಜುನನಿಗಂತೂ ಚಂದ್ರಹಾಸನ ದರ್ಶನದಿಂದ ಅತ್ಯಾನಂದವಾಯಿತು.

ಚಂದ್ರಹಾಸನ ಈ ಚರಿತ್ರೆಯನ್ನು ಸಮಗ್ರವಾಗಿ ಯಾವ ಮನುಷ್ಯನು ಕೇಳುವನೋ ಆತನಿಗೆ ಬಲವೂ ದೀರ್ಘಾಯಸ್ಸೂ ಲಭಿಸುತ್ತವೆ. ಶೀಲವಂತರೂ ವಿಷ್ಣುಭಕ್ತರೂ ದಾತೃಗಳೂ ಆದ ಪುತ್ರರನ್ನು ಅವನು ಪಡೆಯುತ್ತಾನೆ. ಶ್ರೀಕೃಷ್ಣನಲ್ಲಿ ದೃಢವಾದ ಭಕ್ತಿಯು ಉದಯಿಸುತ್ತದೆ. ಅಂತ್ಯಕಾಲದಲ್ಲಿ ಅವನನ್ನು ಸಂಸಾರಸಾಗರದಿಂದ ವಾಸುದೇವನು ಉದ್ಧರಿಸುತ್ತಾನೆ.

# ಬಕದಾಲ್ಭ್ಯ ಸಂವಾದ

ಜನಮೇಜಯ, ಚಂದ್ರಹಾಸನು ವಿಷಯಾತನಯನಾದ ಮಕರಧ್ವಜನನ್ನು ಕುಂತಲಪುರಕ್ಕೆ ಅಧಿಪತಿಯನ್ನಾಗಿ ನಿಯಮಿಸಿ, ಅವನನ್ನು ಕುರಿತು "ವತ್ಸ, ನಾನು ವೃದ್ಧನಾದೆನು. ಇನ್ನು ಮೋಕ್ಷಲಾಭಕ್ಕಾಗಿ ನಾನು ವನವನ್ನು ಆಶ್ರಯಿಸುವುದು ಯುಕ್ತವಾದುದು. ಆದರೆ ಈಗ ಶ್ರೀಕೃಷ್ಣನ ದರ್ಶನದಿಂದ ಮೋಕ್ಷವು ಸುಲಭವಾಯಿತು! ಆದ್ದರಿಂದ ಆತನನ್ನು ಬಿಟ್ಟು ನಾನು ಇರಲಾರೆ" ಎಂದು ತಿಳಿಸಿದನು. ಅನಂತರ ತೇಜಸ್ವಿಯಾದ ಪಾರ್ಥನ ಅಶ್ವಗಳನ್ನು ಪಾಲಿಸುತ್ತ ಶ್ರೀಕೃಷ್ಣನೊಡನೆ ಪ್ರಯಾಣಮಾಡಿದನು. ಆ ಕುದುರೆಗಳು ಯಾವ ಯಾವ ರಾಜ್ಯದಲ್ಲಿ ಹೋದವೋ ಅಲ್ಲಿದ್ದ ರಾಜರು ಭಯದಿಂದ ನಮಸ್ಕರಿಸಿ ಬಿಟ್ಟರು! ಶ್ರೀಕೃಷ್ಣನು ಅಶ್ವರಕ್ಷಣೆಗಾಗಿ ಬಂದಿರುವುದನ್ನು ತಿಳಿದು ಕೆಲವು ರಾಜರು ಅವನನ್ನು ಪೂಜಿಸಿ ಕಾಣಿಕೆಗಳನ್ನಿತ್ತು ವಂದಿಸಿದರು. ಆಮೇಲೆ ಅಶ್ವಗಳು ಉತ್ತರಸಾಗರದ ಬಳಿಗೆ ಹೋಗಿ, ಮಹಾರಾಜ, ಅಗಾಧವಾದ ಸಮುದ್ರಜಲದಲ್ಲಿ ನುಗ್ಗಿಬಿಟ್ಟವು! ಪಾರ್ಥನೇ ಮೊದಲಾದವರಿಗೆ ಬಹಳ ಚಿಂತೆಯಾಯಿತು. ಅವರು ಶ್ರೀಕೃಷ್ಣನನ್ನು ನೋಡಿ ಮುಂದೇನು ಮಾಡಬೇಕೆಂದೂ ಅಶ್ವಗಳನ್ನು ಪಡೆಯುವುದು ಹೇಗೆಂದೂ ಕೇಳಿದರು. ಆಗ ಭಗವಂತನು "ನಮ್ಮಲ್ಲಿ ಐವರ ಅಶ್ವಗಳಿಗೆ ಮಾತ್ರ ನೀರಿನಲ್ಲಿ ಹೋಗುವ ಸಾಮರ್ಥ್ಯ ಉಂಟು. ಹಂಸಧ್ವಜ, ಅರ್ಜುನ, ಬಭ್ರುವಾಹನ, ನನ್ನ ಮಗನಾದ ಪ್ರದ್ಯುಮ್ನ ಮತ್ತು ಮಯೂರಧ್ವಜ-ಈ ಐವರ ರಥಗಳು ಸರ್ವತೋಗಾಮಿಗಳು" ಎಂದು ತಿಳಿಸಿದನು. ಮತ್ತು ಆ ಮಹಾರಥರೊಡನೆ ತಾನೂ ಸಮುದ್ರದಲ್ಲಿ ಪ್ರವೇಶಿಸಿದನು.

ಸಮುದ್ರದಲ್ಲಿ ಹೋಗುತ್ತಿರುವಾಗ ಒಂದು ದ್ವೀಪವು ಗೋಚರಿಸಿತು. ಆ ದ್ವೀಪದಲ್ಲಿ ಒಬ್ಬ ವೃದ್ಧನಾದ ಮುನಿಯು ಅರ್ಜುನನಿಗೆ ಗೋಚರಿಸಿದನು. ಆ ಮುನಿಯು ತನ್ನ ತಲೆಯ ಮೇಲ್ಗಡೆ ಒಂದು ಆಲದ ಎಲೆಯನ್ನು ಕೈಯಿಂದ ಹಿಡಿದುಕೊಂಡಿದ್ದನು. ಆಲದ ಎಲೆ ಒಣಗಿ ಶತಚ್ಛಿದ್ರವಾಗಿತ್ತು! ಅದರಲ್ಲಿ ಜೇಡರಬಲೆ ಹರಡಿತ್ತು. ಮುನಿಯು ಕಣ್ಣುಗಳನ್ನು ಮುಚ್ಚಿಕೊಂಡಿದ್ದನು. ಆತನೇ ಮಹಾಭಾಗನಾದ ಬಕದಾಲ್ಭ್ಯನೆಂಬ ಮುನಿ. ಎಲ್ಲರೂ ತಮ್ಮ ರಥಗಳಿಂದಿಳಿದು ಮುನಿಗೆ ನಮಸ್ಕಾರ ಮಾಡಿದರು. ಬಕದಾಲ್ಭ್ಯನು ಕಣ್ಣುತೆರೆದು ಅವರೆಲ್ಲರನ್ನೂ ನೋಡಿ ಹರ್ಷದಿಂದ "ಆಹಾ! ಅತಿ ಚಂಚಲರಾದ ಐವರು ಶ್ರೀಕೃಷ್ಣನನ್ನು ಇಲ್ಲಿಗೆ ಕರೆತಂದಿದ್ದಾರೆ. ಇನ್ನು ಸಾವು ಇಲ್ಲಿರುವುದು ಸುಖಕರವಲ್ಲ!" ಎಂದು ಹಾಡಿದನು! ಆಗ ವಿಸ್ಮಿತನಾದ ಅರ್ಜುನನು "ಮಹರ್ಷಿಗಳೆ, ನೀವು ಮನೆಯನ್ನು ಮಾಡಿಕೊಳ್ಳದೆ ಒಣಗಿದ ಎಲೆಯನ್ನು ಹಿಡಿದುಕೊಂಡಿದ್ದೀರಿ. ನಿಮ್ಮ ಎರಡು ಮೊಳಕಾಲುಗಳನ್ನು ಭೇದಿಸಿ ಮುತ್ತುಗದ ಮರಗಳು ಬೆಳೆದಿವೆ! ಈ ಮರಗಳಲ್ಲಿ ಹಕ್ಕಿಗಳು ಗೂಡು ಕಟ್ಟಿ ಸಂಸಾರ ಸಮೇತವಾಗಿ ವಾಸವಾಗಿವೆ! ನಿಮ್ಮ ಎದುರಿಗೂ ಹಿಂಭಾಗದಲ್ಲಿಯೂ ಹುತ್ತಗಳು ಬೆಳೆದಿವೆ. ಅವುಗಳಿಂದ ಹೊರಬಂದ ಸರ್ಪಗಳು ನಿಮ್ಮ ಹೆಗಲುಗಳ ಮೇಲೆ ಸುಖವಾಗಿ ಗಾಳಿಯನ್ನು

ಕುಡಿಯುತ್ತಿವೆ. ಈ ಸರ್ಪಗಳು ಸುರುಳಿ ಸುತ್ತಿ ನಿಮಗೆ ಉನ್ನತ ಪೀಠವನ್ನು ರಚಿಸಿಕೊಡುತ್ತಿವೆ! ಮೃಗಗಳು ನಿಮ್ಮ ಮೈಗೆ ಉಜ್ಜಿ ನವೆಯನ್ನು ಹೋಗಲಾಡಿಸಿಕೊಳ್ಳುತ್ತಿವೆ! ಆಹಾ! ಏನಾಶ್ಚರ್ಯ! ನಿಮ್ಮ ವೈರಾಗ್ಯವು ಎಷ್ಟು ದೃಢವಾದುದು!" ಎಂದು ಉದ್ಗರಿಸಿದನು. ಬಕದಾಲ್ಭ್ಯನು ಅರ್ಜುನನ ಮಾತನ್ನು ಕೇಳಿ ಗಟ್ಟಿಯಾಗಿ ನಗುತ್ತ ಹೀಗೆಂದನು: "ಅಯ್ಯಾ, ಹೆಂಡತಿಯನ್ನು ಕಟ್ಟಿಕೊಳ್ಳುವುದು ಬಹಳ ಕ್ಲೇಶಕರವಾದುದು. ಅದರಿಂದ ಪಾಪಕೃತ್ಯಕ್ಕೆ ದಾರಿಯಾಗುತ್ತದೆ. ನಮಗೆ ಅಧೋಗತಿಯೇ ಸರಿ. ಏಕೆಂದರೆ, ಹೆಂಡತಿಯ ಪೋಷಣೆಗಾಗಿ ಅಕಾರ್ಯವನ್ನಾದರೂ ಮಾಡಬೇಕಾಗುತ್ತದೆ. ನಮ್ಮ ವಿಚಾರಶಕ್ತಿಯೇ ನಾಶವಾಗುತ್ತದೆ. ವಿಚಾರಶಕ್ತಿಯು ನಷ್ಟವಾದ ಮೇಲೆ ಮೋಕ್ಷವೆಲ್ಲಿಯದು! ಜನರಿಗೆ ಆಸೆ ಹೆಚ್ಚುವುದು. 'ನನ್ನ ಹೋರಿಕರುಗಳು ದೊಡ್ಡವಾಗಿ ಹೊಲವನ್ನು ಯಾವಾಗ ಉಳುತ್ತವೆಯೋ! ಮಕ್ಕಳು ಎಂಥವರು ಹುಟ್ಟುವರೋ, ಮೊಮ್ಮಕ್ಕಳು ಎಂಥವರೋ, ವೇದಶಾಸ್ತ್ರಗಳನ್ನು ಹೇಗೆ ಅಭ್ಯಾಸಮಾಡುವರೋ, ಇವರಿಗೆ ಮದುವೆಯಾಗುವುದು ಹೇಗೆ, ಮಗನ ಮುಖವನ್ನು ಯಾವಾಗ ನೋಡುವೆನೋ!' ಈ ಬಗೆಯ ಚಿಂತೆಗಳು ಗೃಹಸ್ಥನನ್ನು ಸದಾ ಕಾಡುತ್ತವೆ. ಗೃಹಸ್ಥನು ಸ್ತ್ರೀಪಾಶದಿಂದ ಬದ್ಧನಾಗಿರುವನೇ ಹೊರತು ಧರ್ಮಮಾರ್ಗವನ್ನು ಕುರಿತು ಆಲೋಚಿಸುವುದೇ ಇಲ್ಲ. ಆದ್ದರಿಂದ ನಾನು ಹೆಂಡತಿಯನ್ನೂ ಕಟ್ಟಿಕೊಳ್ಳಲಿಲ್ಲ. ಪರ್ಣಶಾಲೆಯನ್ನೂ ರಚಿಸಲಿಲ್ಲ. ನಮ್ಮ ಆಯಸ್ಸು ಬಹಳ ಅಲ್ಪವಷ್ಟೆ" ಎಂದು ಹೇಳಿದನು. ಪಾರ್ಥನು "ಮಹನೀಯರೆ, ಈ ಶುಷ್ಕಪರ್ಣವನ್ನು ಶಿರಸ್ಸಿನ ಮೇಲೆ ಹಿಡಿದು ಕೊಂಡಿದ್ದೀರಲ್ಲ, ನಿಮ್ಮ ವಯಸ್ಸೆಷ್ಟು?" ಎಂದು ಕೇಳಿದನು. ಬಕದಾಲ್ಭ್ಯನು ಹೀಗೆಂದನು: "ನಾನು ಇಲ್ಲಿ ಇರುತ್ತಲೇ ಕೆಲವು ಕಾಲ ಕಳೆಯಿತು. ನನ್ನೆದುರಿಗೆ ಎಷ್ಟೋ ಮಂದಿ ಮಾರ್ಕಾಂಡೇಯರೂ ಲೋಮಶರೂ ಗತಿಸಿ ಹೋದರು! ಅವರ ಸಂಖ್ಯೆ ಎಷ್ಟೆಂಬುದು ನನಗೆ ನೆನಪಿಲ್ಲ! ನಾನು ಇಲ್ಲಿಗೆ ಬಂದ ಮೇಲೆ ಬ್ರಹ್ಮರೇನೋ ಇಪ್ಪತ್ತು ಮಂದಿ ಅಸ್ತಂಗತರಾದರು! ಏನಾದರೂ ಆಯಸ್ಸು ಅಲ್ಪವೇ! ಆದ್ದರಿಂದ ಅರ್ಜುನ, ನಾನು ಪರ್ಣಶಾಲೆಯನ್ನು ಕಟ್ಟಿಕೊಳ್ಳಲು ಯತ್ನಿಸಲಿಲ್ಲ. ಪದೇ ಪದೇ ಈ ಜಗತ್ತೇ ನಾಶವಾಗಿ ಹೋಗುತ್ತದೆ. ಒಬ್ಬ ಬ್ರಹ್ಮನು ಗತಿಸುವ ಸಮಯ ಬಂದಿತೆಂದರೆ, ಜಗತ್ತೆಲ್ಲವೂ ಜಲಮಯವಾಗಿ ಬಿಡುತ್ತದೆ! ಆಗ ಒಂದು ಆಲದಮರವು ನೂರಾರು ಕೊಂಬೆಗಳಿಂದಲೂ ಚಿಗುರೆಲೆಗಳಿಂದಲೂ ಕಾಣಿಸಿಕೊಳ್ಳುತ್ತದೆ. ಅದು ಭೂಮ್ಯಾಕಾಶಗಳನ್ನು ವ್ಯಾಪಿಸುವಷ್ಟು ದೊಡ್ಡದಾಗಿರುತ್ತದೆ. ಆಗ ಒಂದು ಆಲದ ಎಲೆಯ ಮೇಲೆ ಒಬ್ಬ ಬಾಲಕನು ನಗುತ್ತಲೂ ಅಳುತ್ತಲೂ ಇರುವುದನ್ನು ನೋಡುತ್ತೇನೆ. ಸುಂದರವಾಗಿರುವ ಗೌರವರ್ಣದ ಆ ಶಿಶು ಕಾಲ್ಬೆರಳನ್ನು ಬಾಯಲ್ಲಿಟ್ಟು ಚೀಪುತ್ತ ಇರುತ್ತದೆ. ಆ ಮಗುವನ್ನು ನೋಡಿದೊಡನೆ ನಾನು ಸಮುದ್ರದಲ್ಲಿ ಮುಳುಗಿ ಹೋಗುತ್ತೇನೆ. ಅಂತಹ ಬಾಲಕನನ್ನು ನಾನು ಎಲ್ಲಿಯೂ ನೋಡಿಲ್ಲ. ಅದರ ವಿಷಯವಾಗಿ ಏನು ಹೇಳಲಿ! ಅರ್ಜುನ, ಆ ಬಾಲಕನೇ ಈಗ ಕೃಷ್ಣನಾಗಿ ನಿಮ್ಮವರೊಡನೆ ಬಂದಿದ್ದಾನೆ!" ಹೀಗೆ ನುಡಿದು ಬಕದಾಲ್ಭ್ಯನು ಶ್ರೀಕೃಷ್ಣನನ್ನು ನೋಡಿ

"ಹೇ ವಿಷ್ಣುವೆ, ನನ್ನನ್ನು ಈ ಸಮುದ್ರಮಧ್ಯದಲ್ಲಿ ತ್ಯಜಿಸಿ ದೂರದೂರವಾಗಿ ಎಲ್ಲಿಗೆ ಹೋಗಿ ಬಿಡುತ್ತೀಯೆ! ನೀನು ಆಲದ ಎಲೆಯಲ್ಲಿ ಬಾಲಕನಾಗಿ ಮಲಗಿದಾಗ ನಿನ್ನನ್ನು ನೋಡಿದೆನು. ಏನನ್ನೂ ನಾನು ಬೇಡಲಿಲ್ಲ! ಈಗ ಯುವಕನಾಗಿ ಲಕ್ಷ್ಮೀ ಸಹಿತನಾಗಿ ಧರ್ಮರಾಜನಿಗೆ ಮಾತ್ರ ಕಾಣಿಸಿಕೊಳ್ಳುತ್ತೀಯೆ! ನನಗೆ ಮಾತ್ರ ಕಾಣಿಸಿಕೊಳ್ಳುವುದಿಲ್ಲ! ಹೇ ಜಗನ್ನಿವಾಸ, ನಿನ್ನ ಆಲಿಂಗನಸುಖವನ್ನು ಕೊಡು. ಧರ್ಮರಾಜನನ್ನೂ ಅವನ ನಗರವನ್ನೂ ತೋರಿಸು" ಎಂದು ಹೇಳಿದನು. ಅನಂತರ ಆ ಮುನಿಯು ಶ್ರೀಕೃಷ್ಣನನ್ನೂ ಅರ್ಜುನನ್ನೂ ಆಲಂಗಿಸಿಕೊಂಡನು. ತರುವಾಯ ಶ್ರೀಕೃಷ್ಣನನ್ನು ತೋರಿಸಿ ಅರ್ಜುನನೊಡನೆ "ಪಾರ್ಥ, ಇದೇ ನನ್ನ ವಾಸದ ಮನೆ! ಇಲ್ಲಿ ಮುಕ್ತಿಯೆಂಬ ನನ್ನ ಗೃಹಿಣಿಯು ಶಾಶ್ವತವಾಗಿ ವಾಸಿಸುತ್ತಿದ್ದಾಳೆ. ಈ ಮನೆಗಾಗಿ-ಈ ಪತ್ನಿಗಾಗಿ, ನಾನು ಇನ್ನು ಯಾವ ಮನೆಯನ್ನೂ ಕಟ್ಟಲಿಲ್ಲ; ಯಾವ ಸ್ತ್ರೀಯನ್ನೂ ಮದುವೆಯಾಗಲಿಲ್ಲ! ಆದ್ದರಿಂದ ಒಣ ಎಲೆಗಳಿಂದಲೇ ಕಾಲ ಕಳೆದು ಬಿಟ್ಟೆನು. ಈಗ ನೋಡು; ನನಗೆ ಮನೆಯೂ ಸಿಕ್ಕಿತು, ಮಡದಿಯೂ ದೊರಕಿದಳು!" ಎಂದನು. ಹೀಗೆ ಸಂಭಾಷಿಸುತ್ತಿದ್ದ ಬಕದಾಲ್ಭ್ಯಮುನಿಯನ್ನು ಶ್ರೀಕೃಷ್ಣನು ಪ್ರಶಂಸಿಸಿ "ಮಹರ್ಷಿ, ನೀನು ಸಾಕ್ಷಾತ್ ಪುರಾಣಪುರುಷನಾಗಿದ್ದೀಯೆ. ಇಪ್ಪತ್ತು ಮಂದಿ ಬ್ರಹ್ಮರನ್ನೂ ನೋಡಿದವನು ನೀನು! ನಮ್ಮೆಲ್ಲರಿಗೂ ಪೂಜ್ಯತಮನಾಗಿದ್ದೀಯೆ. ನಮ್ಮ ಧರ್ಮರಾಜನ ಯಜ್ಞವು ಸಫಲವಾಯಿತು" ಎಂದನು. ಬಕದಾಲ್ಭ್ಯನು ಮೃದುವಾಗಿ ನಕ್ಕು ಹೀಗೆಂದನು: "ಶ್ರೀಕೃಷ್ಣ, ನನ್ನ ಮೇಲೆ ಗರ್ವದ ಹೊರೆಯನ್ನು ಹೊರಿಸುತ್ತಿದ್ದೀಯೆ. ಆದರೆ, ನನ್ನ ಗರ್ವವೂ ಬ್ರಹ್ಮನ ಗರ್ವವೂ ಹಿಂದೆಯೇ ಹೊರಟು ಹೋಗಿದೆ! ಅರ್ಜುನ, ಶ್ರೀಕೃಷ್ಣನಿಗೆ ಅದೆಲ್ಲವೂ ಗೊತ್ತಿದೆ. ವೇದದ ಮೂಲವೇ ಈತನು. ಆದ್ದರಿಂದ ನೀನು ಆ ಕಥೆಯನ್ನು ಕೇಳು. ಮಹಾಕಲ್ಪದಲ್ಲಿ ವೇದನೆಂಬ ಹೆಸರಿನ ಬ್ರಹ್ಮನು ನನ್ನ ಬಳಿಗೆ ಬಂದನು. ಅವನಿಗೆ ನಲವತ್ತು ವರ್ಷಗಳಾಗಿದ್ದವು. ಅವನು ಹಂಸವನ್ನೇರಿ ವೇದಗಳನ್ನು ಪಠಿಸುತ್ತ ಬಂದು ಗರ್ವದಿಂದ ನನ್ನನ್ನು ಕುರಿತು "ಯಾರು ನೀನು? ಈ ಎಲೆಯನ್ನು ಏಕೆ ಹಿಡಿದು ಕೊಂಡಿದ್ದೀಯೆ? ಯಾವುದೋ ಕಾಮನೆಯಿಂದ ಘೋರವಾದ ತಪಸ್ಸನ್ನು ಆಚರಿಸುತ್ತಿರುವೆಯೆಂದು ನನಗೆ ತಿಳಿಯಿತು. ನಾನು ಪ್ರಸನ್ನನಾಗಿದ್ದೇನೆ. ನಿನ್ನ ಇಷ್ಟಾರ್ಥವನ್ನು ಕೇಳಿಕೊ. ನಾನು ಬ್ರಹ್ಮ" ಎಂದು ಹೇಳಿದನು. ಅವನ ನುಡಿಯನ್ನು ಕೇಳಿ ನಾನು ಆ ಬ್ರಹ್ಮನಿಗೆ 'ಎಲೋ ದುರಾತ್ಮ! ತೊಲಗು ದೂರ. ನಿನ್ನಂತಹ ಇಪ್ಪತ್ತು ಬ್ರಹ್ಮರನ್ನು ಕಂಡಿದ್ದೇನೆ! ನನಗೆ ಏನನ್ನು ಕೊಟ್ಟೀಯೆ! ಹೊರಡು ಹೊರಡು!" ಎಂದು ಅಬ್ಬರಿಸಿದೆನು. ನಾನು ಹಾಗೆ ಹೇಳುತ್ತಿರುವಾಗಲೇ ಭೂಮಿಯನ್ನು ಸೀಳುವುದೋ ಎಂಬಂತೆ ಘೋರವಾದ ಒಂದು ಸುಂಟರಗಾಳಿ ಎದ್ದು ಮರಗಳನ್ನುರುಳಿಸುತ್ತ ಬಂದು ನಮ್ಮಿಬ್ಬರನ್ನೂ ವಿಶಾಲವಾದ ಗಗನಮಂಡಲಕ್ಕೆ ಹಾರಿಸಿಕೊಂಡುಹೋಯಿತು. ಕರ್ಮವಶದಿಂದ ಕ್ರಿಮಿಗಳು ಒಂದು ಅತ್ತಿಯ ಹಣ್ಣಿನಿಂದ ಇನ್ನೊಂದು ಅತ್ತಿಯ ಹಣ್ಣಿಗೆ ಹೋಗಿ ಸೇರುವಂತೆ, ದೇವದೇವನಾದ ಮಹಾವಿಷ್ಣುವಿನ ಅನಂತ ಬ್ರಹ್ಮಾಂಡಗಳಲ್ಲಿ ಒಂದಾದ ಇನ್ನೊಂದು ಬ್ರಹ್ಮಾಂಡಕ್ಕೆ ನಾವಿಬ್ಬರೂ

ಹೋಗಿ ಸೇರಿದೆವು! ಆ ಬ್ರಹ್ಮಾಂಡವು ಇದಕ್ಕಿಂತಲೂ ರಮಣೀಯವಾಗಿರುವುದನ್ನು ನೋಡಿ ನನ್ನೊಡನೆ ಇದ್ದ ಚತುರ್ಮುಖ ಬ್ರಹ್ಮನು ವಿಸ್ಮಿತನಾದನು. ಅರ್ಜುನ, ಅಲ್ಲಿ ನಾವು ಅಷ್ಟಮುಖದ ಬ್ರಹ್ಮನನ್ನು ಕಂಡೆವು. ಅವನು ನಮ್ಮನ್ನು ನೋಡಿ "ಯಾರು ನೀವು? ಹೊಸಬರಾಗಿ ಕಾಣುತ್ತಿದ್ದೀರಿ. ಎಲ್ಲಿಂದ ಬಂದಿರಿ? ನಿಮ್ಮ ಹೆಸರೇನು?" ಎಂದು ಪ್ರಶ್ನೆಮಾಡಿದನು. ಆಗ ನನ್ನೊಡನೆ ಇದ್ದ ಚತುರ್ಮುಖನು "ನಾನು ಸತ್ಯಲೋಕದಿಂದ ಬಂದಿದ್ದೇನೆ. ನಾನು ಬ್ರಹ್ಮನೆಂದು ತಿಳಿ! ಈತನು ನನ್ನ ಶಿಷ್ಯ. ಸೇವಾರ್ಥವಾಗಿ ಬಂದಿದ್ದಾನೆ. ಈತನ ಹೆಸರು ಬಕದಾಲ್ಭ್ಯ" ಎಂದು ಹೇಳಿದನು. ಅದನ್ನು ಕೇಳಿ ಅಷ್ಟಮುಖ ಬ್ರಹ್ಮನು ಗಟ್ಟಿಯಾಗಿ ನಕ್ಕು "ಓಹೋ! ನೀನು ಬ್ರಹ್ಮ, ಇವನು ಶಿಷ್ಯ! ನನ್ನನ್ನು ನೋಡುವವರೆಗೆ ಹೀಗಿದ್ದೀತು. ನಿಜವಾಗಿ ನಾನೇ ಬ್ರಹ್ಮ ನೀವಿಬ್ಬರೂ ನನ್ನ ಶಿಷ್ಯರು! ಒಳ್ಳೆಯದು. ನನಗೆ ಶೌಚಕ್ಕಾಗಿ ಮಣ್ಣು ಮತ್ತು ನೀರು ಬೇಕಾಗಿದೆ! ನೀವಿಬ್ಬರೂ ಹೋಗಿ ತನ್ನಿರಿ!" ಎಂದು ಹೇಳಿದನು. ಅಷ್ಟರಲ್ಲಿ ಮತ್ತೊಂದು ಬಿರುಗಾಳಿ ಎದ್ದು ನನ್ನನ್ನೂ ಆ ಇಬ್ಬರು ಬ್ರಹ್ಮರನ್ನೂ ವಿಷ್ಣುವಿನ ಮೂರನೆಯ ಬ್ರಹ್ಮಾಂಡಕ್ಕೆ ಹಾರಿಸಿಕೊಂಡು ಹೋಯಿತು. ಅಲ್ಲಿ ನಾವು ತೇಜಸ್ವಿಗಳಾದ ಪುಣ್ಯಶೀಲರನ್ನು ಕಂಡೆವು. ಅವರು ನಮ್ಮನ್ನು ನೋಡಿ ನಕ್ಕು "ಎಲೈ, ನೀವು ಯಾರು? ಎಲ್ಲಿಂದ ಬಂದಿರಿ? ಸಂಕೋಚಪಡದೆ ಎಲ್ಲವನ್ನೂ ತಿಳಿಸಿರಿ" ಎಂದರು. ನಮ್ಮೊಡನಿದ್ದ ಅಷ್ಟಮುಖ ಬ್ರಹ್ಮನು 'ನಾನು ಮನೋಹರವಾದ ಬ್ರಹ್ಮಲೋಕದಿಂದ ಬಂದಿದ್ದೇನೆ. ನಾನು ಬ್ರಹ್ಮ' ಎಂದನು. ಆ ಜನರು "ಎಲೈ, ಹೀಗೆ ಗಟ್ಟಿಯಾಗಿ ಮಾತಾಡಬೇಡಿರಿ! ಷೋಡಶಮುಖನಾದ ಬ್ರಹ್ಮನು ನಿಮ್ಮ ಮಾತನ್ನು ಕೇಳಿಸಿಕೊಂಡಾನು! ಬ್ರಹ್ಮನೆಂಬ ಜಂಭವನ್ನು ಬಿಟ್ಟು ಬಂದು ನೋಡಿರಿ. ಮೌನದಿಂದ ಬಂದು ಬ್ರಹ್ಮದೇವನಿಗೆ ನಮಸ್ಕರಿಸಿರಿ!" ಎಂದು ತಿಳಿಸಿದರು. ನಾವು ಹೆದರುತ್ತ ಹೆದರುತ್ತ ಹೋಗಿ ಷೋಡಶಮುಖನಾದ ಬ್ರಹ್ಮನನ್ನು ವೀಕ್ಷಿಸಿದೆವು. ಆತನು ಅಷ್ಟಮುಖನನ್ನೂ ಚತುರ್ಮುಖನನ್ನೂ ನೋಡಿ ಅಟ್ಟಹಾಸಮಾಡುತ್ತ "ಏನಚ್ಚರಿ! ಏನಚ್ಚರಿ! ನಿಜವಾದ ಬ್ರಹ್ಮನು ನಾನಿರುವಾಗ ಇವರು ತಾವೇ ಬ್ರಹ್ಮರೆಂದುಕೊಳ್ಳುತ್ತಾರಲ್ಲ!" ಎಂದನು. ಅಷ್ಟರಲ್ಲಿ ಭೀಕರವಾದ ಬಿರುಗಾಳಿ ಎದ್ದು ನಮ್ಮೆಲ್ಲರನ್ನೂ ಹಾರಿಸಿಬಿಟ್ಟಿತು. ನಾವು ತಲೆಕೆಳಗಾಗಿ ಇನ್ನೊಂದು ಬ್ರಹ್ಮಾಂಡಕ್ಕೆ ತೂರಿ ಹೋದೆವು. ಅಲ್ಲಿ ಮೂವತ್ತೆರಡು ಶಿರಸ್ಸುಗಳಿರುವ ಬ್ರಹ್ಮನಿದ್ದನು. ಆ ಲೋಕದಲ್ಲಿದ್ದ ಜನರು ನೀವು ಯಾರೆಂದು ಸಹ ನಮ್ಮನ್ನು ವಿಚಾರಿಸಲಿಲ್ಲ! ದೈವವಶದಿಂದ ಆ ಬ್ರಹ್ಮನಿಗೆ ನಾವು ನಾಲ್ವರೂ ಗೋಚರಿಸಿದೆವು. ಆತನು ಕೃಪೆಯಿಂದ ನಮ್ಮನ್ನು ಬಳಿಗೆ ಕರೆದು ನಮ್ಮ ಹೆಸರನ್ನು ಕೇಳಿದನು. ನನ್ನೊಡನಿದ್ದ ಮೂವರೂ ತಾವು ಬ್ರಹ್ಮರೆಂದು ಹೇಳಿದರು. ಆಗ ಮೂವತ್ತೆರಡು ಮುಖಗಳ ಬ್ರಹ್ಮನು ನಕ್ಕು ಗರ್ವದಿಂದ "ಎಲೈ, ಕೇಳಿರಿ. ವಾಸ್ತವವಾಗಿ ಬ್ರಹ್ಮನೆಂದರೆ ನಾನೇ ಸರಿ! ಸೂರ್ಯನು ಉದಯಿಸುವವರೆಗೆ ಮಾತ್ರ ಮಿಂಚುಹುಳುಗಳು ಹಾರಾಡುತ್ತವೆ!" ಎಂದು ಹೇಳಿದನು. ಅರ್ಜುನ, ಮತ್ತೊಂದು ಬಿರುಗಾಳಿ ಬೀಸಿತು. ನಾವೆಲ್ಲರೂ ಅರುವತ್ತು ನಾಲ್ಕು ಮುಖಗಳ ಬ್ರಹ್ಮನಿರುವ ಮತ್ತೊಂದು

ಬ್ರಹ್ಮಾಂಡವನ್ನು ಸೇರಿದೆವು. ಆ ಬ್ರಹ್ಮನೂ ಹೀಗೆಯೇ ಗರ್ವದ ಮಾತನ್ನಾಡಿದನು. ಈ ಪ್ರಕಾರದಲ್ಲಿ ಉತ್ತರೋತ್ತರವಾಗಿ ದ್ವಿಗುಣಮುಖಗಳುಳ್ಳ ಬ್ರಹ್ಮರು ಇರುವ ಬ್ರಹ್ಮಾಂಡಗಳನ್ನು ಹಾದು ಕಡೆಯಲ್ಲಿ ನಾವೆಲ್ಲರೂ ವಿಷ್ಣುಲೋಕವನ್ನು ಸೇರಿದೆವು. ಸಹಸ್ರನೇತ್ರನೂ ಸಹಸ್ರಮುಖನೂ ವಿಭುವೂ ಆದ ಭಗವಂತನು ಸನಕಾದಿಸಿದ್ಧಪುರುಷರಿಂದಲೂ ಸುರರಿಂದಲೂ ಸ್ತುತಿಸಲ್ಪಡುತ್ತ ವಿರಾಜಿಸುತ್ತಿದ್ದನು. ಆ ಮಹಾನುಭಾವನು ಈ ಬ್ರಹ್ಮರ ಸಮುದಾಯವನ್ನು ಕಂಡು "ಪೂಜ್ಯರಾದ ಬ್ರಹ್ಮರುಗಳಿರಾ, ನಿಮಗೆ ಸ್ವಾಗತ. ಎಲ್ಲರೂ ಸೇರಿ ಹೀಗೆ ಬಂದ ಕಾರಣವೇನು? ನಿಮ್ಮೆಲ್ಲರ ಅನುಗ್ರಹದಿಂದ ಈ ಲೋಕದಲ್ಲಿ ನನಗೆ ಉತ್ತಮವಾದ ಖ್ಯಾತಿ ಲಭಿಸಿದೆ" ಎಂದು ಹೇಳಿದನು. ಭಗವಂತನ ಆ ನುಡಿಯನ್ನು ಕೇಳಿ ಬ್ರಹ್ಮರ ಗರ್ವವೆಲ್ಲವೂ ಇಳಿದು ಹೋಯಿತು! ಎಲ್ಲರೂ ಶ್ರೀ ಮಹಾವಿಷ್ಣುವಿಗೆ ಅಡ್ಡಬಿದ್ದು ನಮಸ್ಕರಿಸಿ ಸ್ತೋತ್ರಮಾಡಿದರು. ಆಮೇಲೆ ಭಗವಂತನು ಪ್ರಸನ್ನನಾಗಿ ಅವರನ್ನು ಅವರವರ ಲೋಕಗಳಿಗೆ ಕಳಿಸಿಕೊಟ್ಟನು. ನಾನು ಆ ಬ್ರಹ್ಮರನ್ನು ಬಿಟ್ಟು ಬಂದು ಈ ಸಮುದ್ರಮಧ್ಯದಲ್ಲಿ ಇದ್ದೇನೆ. ಆದ್ದರಿಂದ ಶಾಸ್ತ್ರಜ್ಞರಾದ ಜನರು ಎಂದಿಗೂ ಗರ್ವಿಸಬಾರದು''. ಬಕದಾಲ್ಭ್ಯನ ಈ ಕಥೆಯನ್ನು ಕೇಳಿ ಕೃಷ್ಣಾರ್ಜುನರಿಗೆ ಸಂತೋಷವಾಯಿತು. ಅಷ್ಟರಲ್ಲಿ ಯಜ್ಞಾಶ್ವಗಳು ಅಲ್ಲಿ ಗೋಚರಿಸಿದವು. ತಮ್ಮೊಡನೆ ಬರಬೇಕೆಂದು ಬಕದಾಲ್ಭ್ಯಮುನಿಯನ್ನು ಶ್ರೀಕೃಷ್ಣನು ಪ್ರಾರ್ಥಿಸಿ, ಆತನನ್ನು ಶಿಬಿಕೆಯಲ್ಲಿ ಕುಳ್ಳಿರಿಸಿದನು.

# ದುಶ್ಶಲಾ ಸಾಂತ್ವನ

ಜನಮೇಜಯ, ಅನಂತರ ಕುದುರೆಗಳನ್ನು ಹಿಂದಿರುಗಿಸಿ ಶೀಘ್ರವಾಗಿ ಬರುತ್ತಿರಲು ಜಯದ್ರಥನ ಪಟ್ಟಣವು ಸಿಕ್ಕಿತು. ಅಲ್ಲಿ ದುಶ್ಶಲೆಯ ಮಗನಾದ ಬಾಲಕನು ರಾಜ್ಯಭಾರ ಮಾಡುತ್ತಿದ್ದನು. ಅವನು ಸಿಂಹಾಸನದಲ್ಲಿ ಕುಳಿತು ಸಭೆಯಲ್ಲಿದ್ದ ಸಚಿವರಿಂದ ಸೇವಿಸಲ್ಪಡುತ್ತಿರುವಾಗ ಅರ್ಜುನನು ಬಂದ ಸುದ್ದಿ ಮುಟ್ಟಿತು. ಆ ಹುಡುಗನು ತಂದೆಯಾದ ಜಯದ್ರಥನನ್ನು ಸಂಹರಿಸಿದ ಪಾರ್ಥನ ಹೆಸರನ್ನು ಕೇಳಿದೊಡನೆ ಗಡಗಡನೆ ನಡುಗತೊಡಗಿದನು. ಮೈ ಬೆವರಿತು. ಭಯದಿಂದ ರೋಮಾಂಚಿತನಾಗಿ ಸಿಂಹಾಸನದಲ್ಲಿ ಕುಳಿತಂತೆಯೇ ಅಸುವನ್ನು ನೀಗಿದನು! ದುಶ್ಶಲೆಯು ಆಕ್ರಂದಿಸುತ್ತ ಕೃಷ್ಣಾರ್ಜುನರಿದ್ದಲ್ಲಿ ಬಂದು ಕೃಷ್ಣನಿಗೆ ನಮಸ್ಕರಿಸಿ "ಕೃಷ್ಣ, ಕೃಷ್ಣ, ಜಗದೀಶ್ವರ, ಕಾಪಾಡು ನನ್ನನ್ನು. ಅರ್ಜನನು ಹಿಂದೆ ನನ್ನ ಪತಿಯನ್ನು ಘಾತಿಸಿದನು. ಈಗ ನನ್ನ ಮಗನನ್ನೂ ಕೊಂದನು! ಕೃಷ್ಣ, ನಿನ್ನ ಮೊರೆಹೊಕ್ಕಿದ್ದೇನೆ" ಎಂದು ಹಲುಬಿದಳು. ಆಗ ಪಾರ್ಥನು ರಥದಿಂದಿಳಿದು ದುಶ್ಶಲೆಗೆ ನಮಸ್ಕರಿಸಿ "ಭದ್ರೆ, ನಿನ್ನ ಮಗನಿಗೆ ಯಾವ ಕೇಡನ್ನೂ ನಾನು ಮಾಡಲಿಲ್ಲ! ಆದರೂ ಹಿಂದೆ ನಾನು ಮಾಡಿದ್ದನ್ನು ದಯವಿಟ್ಟು ಮನ್ನಿಸು. ಮದಿಸಿದ ಆನೆಗಳನ್ನು ತೆಗೆದುಕೊ. ಸಾವಿರ ಆನೆಗಳು ಬೇಕೆ? ಒಂದು ಲಕ್ಷ ಬೇಕೆ? ನಿನಗೆ ಯಾರಾದರೂ ವೈರಿಗಳಿದ್ದರೆ ಹೇಳು. ಅವರೆಲ್ಲರನ್ನೂ ಜಯಿಸಿ ಆ ರಾಜ್ಯವೆಲ್ಲವನ್ನೂ ನಿನಗೆ ಒಪ್ಪಿಸುವೆನು" ಎಂದು ಹೇಳಿದನು. ಅರ್ಜುನನ ಮಾತುಗಳನ್ನಾಲಿಸಿದರೂ ಅತ್ತ ಗಮನವಿಡದೆ ದುಃಖಿತಳಾದ ದುಶ್ಶಲೆಯು ಮತ್ತೆ ಶ್ರೀಕೃಷ್ಣನಿಗೆ ನಮಸ್ಕರಿಸಿ "ಕೃಷ್ಣ, ಸರ್ವಪ್ರಾಣಿಗಳ ಹೃದಯದಲ್ಲಿ ನೆಲೆಸಿದ ನೀನೊಬ್ಬನೇ ನನ್ನ ಕಷ್ಟವನ್ನು ಪರಿಹರಿಸಬಲ್ಲೆ. ಪೂರ್ವದಲ್ಲಿ ದ್ರೌಪದಿಯು ನಿನ್ನನ್ನು ಸ್ಮರಿಸಿಕೊಂಡಾಗ ಅವಳ ಕಷ್ಟವನ್ನು ನೀಗಿಸಿದ್ದೀಯೆ. ಹೀಗೆ ಸ್ಮರಣ ಮಾತ್ರದಿಂದಲೇ ಎಷ್ಟೋ ಜನರ ದುಃಖವನ್ನು ಪರಿಹರಿಸಿದವನು ನೀನು. ಹೇ ಪ್ರಭು, ನಿನ್ನ ದರ್ಶನದಿಂದ ನಾನು ಕೃತಾರ್ಥಳಾದೆನು. ಅರ್ಜುನನು ನನ್ನನ್ನು ಪತಿಹೀನಳನ್ನಾಗಿಯೂ ಪುತ್ರಹೀನಳನ್ನಾಗಿಯೂ ಮಾಡಿಬಿಟ್ಟನು. ಈ ವಿಷಯದಲ್ಲಿ ಅವನ ಸಂಬಂಧವೇನಿದೆಯೆಂದು ತಿಳಿಸಿದರೂ ಆತನಿಗೆ ಸಂಕೋಚವೇ ಆಗುವುದಿಲ್ಲ. ಈಗ ನನ್ನ ಮಗನನ್ನೂ ಕೊಂದು ರಾಜ್ಯಹೀನಳನ್ನಾಗಿಯೂ ಮಾಡಿದನು. ಸಾವಿರಾರು ಕುದುರೆಗಳನ್ನು ಕೊಟ್ಟರೆ ಏನಾದೀತು?" ಎಂದು ಬಹುಬಗೆಯಲ್ಲಿ ಹಲುಬುತ್ತ ಶ್ರೀಕೃಷ್ಣನ ಪಾದಗಳಲ್ಲಿ ಹೊರಳಾಡಿದಳು. ದುರ್ಲಭವಾದ ಕೇಶವನ ಪಾದಕಮಲಗಳನ್ನು ಕಣ್ಣೀರಿನಿಂದ ತೊಳೆದಳು.

ದುಃಖಾರ್ತರನ್ನು ಪಾಲಿಸುವ ಶ್ರೀಹರಿಯು ಗೋಳಿಡುತ್ತಿದ್ದ ದುಶ್ಶಲೆಯನ್ನು ಸಂತೈಸಿದನು. ಸಂಸಾರ ಮಾಯೆಯಿಂದ ಮೋಹಿತಳಾದ ಅವಳನ್ನು ಕುರಿತು, "ಭದ್ರೆ, ಮೇಲೇಳು. ನಿನಗೆ ಶುಭವಾಗಲಿ. ನಿನ್ನ ಮಗನ ಬಳಿಗೆ ಹೋಗೋಣ" ಎಂದು ನುಡಿದು, ಅರ್ಜುನನೊಡನೆ ನಗರವನ್ನು ಪ್ರವೇಶಿಸಿದನು. ಅರಮನೆಯನ್ನು ಪ್ರವೇಶಿಸಿ ರಾಜಸಭೆಯಲ್ಲಿ ಮೃತನಾಗಿ ಬಿದ್ದಿದ್ದ ಅವಳ ಪುತ್ರನನ್ನು ಕಂಡನು. ಶ್ರೀಕೃಷ್ಣನು "ವತ್ಸ, ಎದ್ದೇಳು. ನನ್ನೆದುರಿಗೆ ಭಯವೇಕೆ?" ಎಂದು ನುಡಿದು ಕೈಯಿಂದ ಆ ಹುಡುಗನ ಮೈ ಸವರಿದನು. ಒಡನೆಯೇ

ಆ ಬಾಲಕನು ಮೇಲೆದ್ದು ಶ್ರೀಕೃಷ್ಣನಿಗೆ ವಂದಿಸಿದನು! ಸಭಾಸದರೆಲ್ಲರೂ ಸಂಪ್ರೀತರಾಗಿ ಕೃಷ್ಣಾರ್ಜುನರನ್ನು ಆದರಿಸಿದರು. ಭೇರೀ ಮೃದಂಗ ಗೀತನೃತ್ಯಾದಿ ಮಹೋತ್ಸವಗಳು ಜರುಗಿದವು. ಅರ್ಜುನನು ಪುತ್ರಸಮೇತಳಾದ ದುಶ್ಶಲೆಗೆ ಸಾಂತ್ವನ ವಚನಗಳನ್ನಾಡಿ ಅವಳನ್ನು ಸಮಾಧಾನಪಡಿಸಿದನು. ಮತ್ತು ಅವಳನ್ನು ಕುರಿತು "ಭದ್ರೆ, ನಾವು ಹಸ್ತಿನಾವತಿಯಿಂದ ಹೊರಟು ಒಂದು ವರ್ಷವಾಯಿತು. ಈಗ ನಾವು ರಾಜಧಾನಿಗೆ ಹೋಗಬೇಕಾಗಿದೆ. ನಿನ್ನನ್ನು ಆಹ್ವಾನಿಸುತ್ತಿದ್ದೇನೆ. ಕುಂತೀದೇವಿಯನ್ನು ನೋಡಿಕೊಂಡು ಬರಬಹುದು. ನೀನು ಬಾ" ಎಂದು ಆಹ್ವಾನಿಸಿದನು. ದುಶ್ಶಲೆಯು ಒಪ್ಪಿದಳು. ಜನಮೇಜಯ, ಅದರಿಂದ ಪಾರ್ಥನಿಗೆ ಆನಂದವಾಯಿತು. ಸಂತುಷ್ಟಳಾದ ದುಶ್ಶಲೆಯು ಹೃಶೀಕೇಶನನ್ನು ನೋಡಿ "ಶ್ರೀಕೃಷ್ಣ, ಇದೇ ರೀತಿಯಲ್ಲಿ ಭಕ್ತರ ಜೀವನವನ್ನು ನೀನು ನಡೆಸಿಕೊಡಬೇಕು. ನಿನ್ನ ಅನುಗ್ರಹದಿಂದ ನನ್ನ ರಾಜ್ಯವು ಮತ್ತೆ ದೊರಕಿತು. ಧರ್ಮರಾಜನ ಬಳಿಗೆ ನಾನೂ ಬರುತ್ತೇನೆ" ಎಂದು ನುಡಿದು ಪುತ್ರಸಹಿತಳಾಗಿ ಹಸ್ತಿನಾವತಿಗೆ ಹೊರಟಳು. ಅರ್ಜುನನು ಆ ನಗರದವರೆಲ್ಲರನ್ನೂ ಹಸ್ತಿನಾವತಿಗೆ ಬರುವಂತೆ ಆಹ್ವಾನಿಸಿ, ತನ್ನೊಡನೆ ಕರೆದೊಯ್ದನು.

# ಹಸ್ತಿನಾವತಿಗೆ ಅರ್ಜುನನ ಆಗಮನ

ಜೈಮಿನಿ ಮುನಿಗಳು ಹೇಳಿದರು: ಜನಮೇಜಯ, ಒಂದು ವರ್ಷವು ಪೂರ್ಣವಾಯಿತು. ಒಂದು ವನದಲ್ಲಿ ಸ್ವೇಚ್ಛೆಯಿಂದ ಸಂಚರಿಸುತ್ತಿದ್ದ ಆ ಯಜ್ಞಾಶ್ವಗಳನ್ನು ಶ್ರೀಕೃಷ್ಣನು ಹಿಡಿದು ನಿಲ್ಲಿಸಿ ಅರ್ಜುನನನ್ನು ನೋಡಿ "ಪಾರ್ಥ, ರಾಜಪರಿವೃತವಾದ ನಿಖಿಲ ಪೃಥ್ವಿಯನ್ನೂ ಈ ಅಶ್ವಗಳು ನಿರಾತಂಕವಾಗಿ ಸಂಚರಿಸಿದವಷ್ಟೆ. ಧರ್ಮರಾಜನು ವಿವಿಧ ವ್ರತಗಳನ್ನಾಚರಿಸುತ್ತ ಹಸ್ತಿನಾವತಿಯಲ್ಲಿ ಚಿಂತಾಕುಲನಾಗಿದ್ದಾನೆ. ವರ್ಷವು ಪೂರ್ಣವಾದ್ದರಿಂದ ಇನ್ನು ಅಗ್ನಿಸನ್ನಿಧಿಯಲ್ಲಿ ಯಾಗಕರ್ಮವನ್ನು ನಡೆಸೋಣ. ನಮ್ಮೊಡನಿರುವ ಸಕಲಭೂಪಾಲರೂ ಧರ್ಮನಂದನನನ್ನು ಸಂದರ್ಶಿಸುವುದಕ್ಕಾಗಿ ಹಸ್ತಿನಾವತಿಗೆ ಹೊರಡಲಿ. ಈ ಅಶ್ವಗಳನ್ನು ಮುಂದಿಟ್ಟುಕೊಂಡು ಉತ್ಸವದೊಡನೆ ರಾಜಧಾನಿಯನ್ನು ಪ್ರವೇಶಿಸಬೇಕು. ಮಂಗಳವಾದ್ಯಗಳು ಭೋರ್ಗರೆಯುತ್ತಿರಬೇಕು. ನರ್ತಕಿಯರು ತಾಳವನ್ನು ಹಾಕುತ್ತ ನರ್ತಿಸುತ್ತಿರಬೇಕು. ಪ್ರದ್ಯುಮ್ನ, ಅನಿರುದ್ಧ, ವೃಷಕೇತು, ಬಭ್ರುವಾಹನ, ಮಯೂರಧ್ವಜ, ಚಂದ್ರಹಾಸಾದಿಗಳೆಲ್ಲರೂ ಸರ್ವಾಭರಣಭೂಷಿತರಾಗಿ ಹೂಮಾಲೆಗಳನ್ನು ಧರಿಸಿಕೊಂಡು ವೈಭವದಿಂದ ನಗರ ಪ್ರವೇಶವನ್ನು ಮಾಡಲಿ. ರಾತ್ರಿಯಲ್ಲಿ ದೀಪದ ಬೆಳಕಿನಲ್ಲಿ ಪ್ರವೇಶಿಸಬೇಕು. ವಂದಿಗಳು ಹೊಗಳುತ್ತಿರಬೇಕು. ಆದ್ದರಿಂದ ಈ ವ್ಯವಸ್ಥೆಗಾಗಿ ನಾನು ಮೊದಲು ಹಸ್ತಿನಾವತಿಗೆ ಹೋಗುವೆನು" ಎಂದು ತಿಳಿಸಿ ತಾನು ಧರ್ಮರಾಜನಿದ್ದಲ್ಲಿಗೆ ಪ್ರಯಾಣ ಮಾಡಿದನು.

ಗಂಗಾತೀರದ ಒಂದು ಉತ್ತಮ ಕ್ಷೇತ್ರದಲ್ಲಿದ್ದ ದಿವ್ಯಮಂಟಪದಲ್ಲಿ ಧರ್ಮರಾಜನು ಪ್ರತಿಷ್ಠಿತನಾಗಿದ್ದನು. ದೇವಕೀ ಮುಂತಾದ ಸ್ತ್ರೀಯರು ಅಲ್ಲಿದ್ದರು. ಶ್ರೀಕೃಷ್ಣನು ಧರ್ಮರಾಜನನ್ನು ಕಂಡು ನಮಸ್ಕರಿಸಿದನು. ಧರ್ಮರಾಜನು ಶ್ರೀಕೃಷ್ಣನನ್ನು ಆದರಿಸಿ ಸತ್ಕರಿಸಿದನು. ಆಮೇಲೆ ವಾಸುದೇವನು ಹೀಗೆಂದನು: "ಯುಧಿಷ್ಠಿರ, ಅರ್ಜುನನು ಯಜ್ಞಾಶ್ವದೊಡನೆ ಸೇನಾಸಮೇತನಾಗಿ ಬರುತ್ತಿದ್ದಾನೆ. ಜೊತೆಯಲ್ಲಿ ನೀಲಧ್ವಜ, ಹಂಸಧ್ವಜ, ಮಯೂರಧ್ವಜರೆಂಬ ವೀರರಾದ ಭೂಪಾಲರಿದ್ದಾರೆ. ಧರ್ಮರಾಜ, ನಿನ್ನ ಪುಣ್ಯಬಲದಿಂದ ನಿನ್ನ ತಮ್ಮನು ಸಕಲರನ್ನೂ ಜಯಿಸಿದನು. ಸುಧನ್ವ ಸುರಥರೆಂಬ ವೀರರೊಡನೆ ಬಹುಕಷ್ಟದಿಂದ ಹೋರಾಡಬೇಕಾಯಿತು. ಆಮೇಲೆ ಅರ್ಜುನನು ಮಣಿಪುರಕ್ಕೆ ಹೋದನು. ಅಲ್ಲಿ ಆತನ ಪುತ್ರನಾದ ಬಭ್ರುವಾಹನನೊಡನೆ ಯುದ್ಧವು ನಡೆಯಲು, ಅರ್ಜುನನು ಹತನಾದನು. ಅರ್ಜುನನ ಭಾರ್ಯೆಯಾದ ಉಲೂಪಿಯು ಸಂಜೀವಕಮಣಿಯನ್ನು ತರಿಸಿ ಅರ್ಜುನನನ್ನು ಬದುಕಿಸಿದಳು. ಹತನಾಗಿದ್ದ ವೃಷಕೇತುವನ್ನು ಮೊದಲು ಬದುಕಿಸಲಾಯಿತು. ಆಮೇಲೆ ಪಾರ್ಥನು ಪುತ್ರನಾದ ಬಭ್ರುವಾಹನನೊಡನೆ ಸಾರಸ್ವತಪುರಕ್ಕೆ ಹೋದನು. ಅಲ್ಲಿ ವೀರವರ್ಮನು ತಾನಾಗಿಯೇ ನಮಗೆ ವಶ್ಯನಾದನು. ಅನಂತರ, ಧರ್ಮನಂದನ, ನಿನ್ನ ಕುದುರೆಯು ಕುಂತಲಪುರಕ್ಕೆ ಹೋಯಿತು. ಆ ನಗರದ ಅಧಿಪತಿ ಚಂದ್ರಹಾಸ. ದೇವಾಸುರರೂ ಅವನನ್ನು ಜಯಿಸಲಾರರು. ಆತನೊಡನೆ ಅರ್ಜುನನಿಗೆ ಸ್ನೇಹವು ಏರ್ಪಟ್ಟಿತು. ಆಮೇಲೆ ಯಜ್ಞಾಶ್ವವು ಸಮುದ್ರದೊಳಗೆ ಹೋಯಿತು. ಸಮುದ್ರದ ಮಧ್ಯದಲ್ಲಿ

ಬಕದಾಲ್ಭ್ಯನೆಂಬ ಮಹಾತಪಸ್ವಿಯು ವ್ರತನಿಷ್ಠನಾಗಿ ಒಂದು ಒಣ ಎಲೆಯನ್ನು ತಲೆಯ ಮೇಲೆ ಹಿಡಿದುಕೊಂಡು ತಪಸ್ಸನ್ನಾಚರಿಸುತ್ತಿದ್ದನು. ಪಾರ್ಥನೇ ಮೊದಲಾದ ಐವರು ವೀರರು ನನ್ನೊಡನೆ ಬಂದು ಆ ಮಹರ್ಷಿಯನ್ನು ಕಂಡರು. ಈಗ ನಿನ್ನ ತಮ್ಮನ್ನು ಬಕದಾಲ್ಭ್ಯ ಮುನಿಯನ್ನೂ ಕರೆದುಕೊಂಡು ಬರುತ್ತಿದ್ದಾನೆ. ವಿಪುಲವಾದ ಐಶ್ವರ್ಯವನ್ನೂ ವಿವಿಧ ರತ್ನರಾಶಿಗಳನ್ನೂ ತಂದಿದ್ದಾನೆ. ಯುಧಿಷ್ಠಿರ, ನಿನ್ನ ಪ್ರತಾಪದ ಎದುರಿಗೆ ಈ ಪೃಥ್ವಿಯು ಬಹಳ ಚಿಕ್ಕದಾಗಿ ಕಾಣಿಸುತ್ತದೆ! ಹೀಗೆ ಎಲ್ಲರೂ ಕುಶಲದಿಂದ ಬರುತ್ತಿದ್ದಾರೆ. ಮಹಾರಾಜ, ನನ್ನನ್ನು ಯಾವ ರೀತಿಯಲ್ಲಿ ಕಾಣುವಿಯೋ ಹಾಗೆಯೇ ಈ ಭೂಪಾಲರೆಲ್ಲರನ್ನೂ ಆದರದಿಂದ ಕಂಡು ಸತ್ಕರಿಸು" ಎಂದನು. ಆಮೇಲೆ ಭೀಮನ ಕಡೆಗೆ ತಿರುಗಿ "ಓ ಮಹಾಬಾಹು ಭೀಮಸೇನ, ಇತ್ತ ಬಾ" ಎಂದು ಹೇಳಿ ಅವನನ್ನು ಆಲಂಗಿಸಿದನು. ಭೀಮಾದಿಗಳೆಲ್ಲರೂ ಶ್ರೀಕೃಷ್ಣನನ್ನು ವಂದಿಸಿದರು. ಆಮೇಲೆ ಮಾಧವನು ಕುಂತಿಯನ್ನೂ ಅಲ್ಲಿ ನೆರೆದಿದ್ದ ಮಾತೃವರ್ಗದವರೆಲ್ಲರನ್ನೂ ವಂದಿಸಿ, ತನ್ನ ಕ್ಷೇಮವಾರ್ತೆಯನ್ನು ತಿಳಿಸಿದನು. ದ್ರೌಪದಿ ಮತ್ತು ಸುಭದ್ರೆಯರು ಬಂದು ಶ್ರೀಕೃಷ್ಣನಿಗೆ ನಮಸ್ಕರಿಸಿ ಆನಂದಬಾಷ್ಪಗಳನ್ನು ಸುರಿಸುತ್ತ ನಿಂತುಕೊಂಡರು. ತುರವಾಯ ಭಗವಾನ್ ಮಧುಸೂದನನು ಧೃತರಾಷ್ಟ್ರ, ಗಾಂಧಾರಿ, ವಿದುರ, ಸಂಜಯ-ಮುಂತಾದವರನ್ನು ಸಂದರ್ಶಿಸಿ ಯಥೋಚಿತವಾಗಿ ನಮಸ್ಕಾರಾದಿಗಳಿಂದ ಸಂಭಾವಿಸಿದನು.

ಆಮೇಲೆ ಶ್ರೀಕೃಷ್ಣನು ಭೀಮಸೇನನೊಡನೆ ತನ್ನ ಬಿಡಾರವನ್ನು ಪ್ರವೇಶಿಸಿದನು. ಅಲ್ಲಿ ರುಕ್ಮಿಣೀದೇವಿಯೂ ಸತ್ಯಭಾಮಾ, ಲಕ್ಷ್ಮಣಾ, ಜಾಂಬವತೀ ಮುಂತಾದವರು ಬಂದು ಶ್ರೀಕೃಷ್ಣನನ್ನು ಸಂದರ್ಶಿಸಿದರು. ಆಮೇಲೆ ಸತ್ಯಭಾಮೆಯು ತನ್ನ ಕಾಂತನನ್ನು ಕುರಿತು "ನಾಥ, ಪಾರ್ಥನನ್ನೂ ಅಶ್ವವನ್ನೂ ಅವನ ಸೇನೆಯನ್ನೂ ಪಾಲಿಸುವ ಹೊಣೆ ಮುಗಿಯಿತೆ? ಬರುವಾಗ ಯಾರಾದರೊಬ್ಬ ಸ್ತ್ರೀಯನ್ನು ಕಟ್ಟಿಕೊಂಡು ಬಂದೆಯೋ ಇಲ್ಲವೋ! ಕುಬ್ಜೆಯೋ ಕುಳ್ಳಿಯೋ ಒಬ್ಬಳು ಬಂದಿರಬಹುದು! ಅರ್ಜುನನಿಗೆ ಪ್ರಮೀಳೆ ಎಂಬವಳು ಸಿಕ್ಕಿದಳಲ್ಲ?" ಎಂದು ಹಾಸ್ಯ ಮಾಡಿದಳು. ಶ್ರೀಕೃಷ್ಣನು ಅವಳ ಮಾತನ್ನು ಕೇಳಿ ನಕ್ಕು ಸಮೀಪದಲ್ಲಿದ್ದ ಭೀಮಸೇನನ ಕಡೆಗೆ ತಿರುಗಿ "ಭೀಮ, ಇವಳ ಕೊಂಕುಮಾತನ್ನು ಕೇಳಿದೆಯಾ? ನನಗೆ ಬೇಕಾದಷ್ಟು ಮಕ್ಕಳಿದ್ದಾರೆ. ಈ ಧರ್ಮರಾಜನ ಪಟ್ಟಣದಲ್ಲಿ ಎಷ್ಟೋ ಮಂದಿ ವೃದ್ಧರು ಬಂದು ಸೇರಿದ್ದಾರೆ! ಇವರ ಮಧ್ಯದಲ್ಲಿ ನಾನು ಇರಬೇಕಾಗಿ ಬಂದಿದೆ. ಈಗ ನಾನು ಒಬ್ಬ ಸ್ತ್ರೀಯನ್ನು ಕಟ್ಟಿಕೊಂಡು ಬಂದರೆ ನಾಚಿಕೆಪಡಬೇಕಾದೀತು. ಈ ಸತ್ಯಭಾಮೆ ಹೀಗೆಯೇ! ಇವಳಿಗೆ ಮಾತಾಡಲೂ ಬರದು! ಮುಚ್ಚಿಡಲೂ ಬರದು! ಏನೋ ಹುಡುಗಾಟಿಕೆಯಲ್ಲಿ ನಾನು ಮಾಡಿದ್ದು ಈಗಲೂ ನನಗೆ ಪ್ರಿಯವಾದೀತೆ?" ಎಂದನು.

ಹೀಗೆ ವಿನೋದಿಸುತ್ತಿರುವಾಗ ಧರ್ಮರಾಜನ ಪ್ರತೀಹಾರನು ಬಂದು ಕೃಷ್ಣನನ್ನೂ ಭೀಮನನ್ನೂ ನೋಡಿ ವಿನಯದಿಂದ "ಈಗ ಶ್ರೀಕೃಷ್ಣನೇ ಮೊದಲಾದವರೆಲ್ಲರೂ ಆಗಮಿಸಲಿ. ಶ್ರೀಕೃಷ್ಣ, ಇನ್ನು ಯಜ್ಞವನ್ನು ಆರಂಭಿಸಬೇಕು" ಎಂದು ತಿಳಿಸಿದನು. ತರುವಾಯ ಕೇಶವನು ಯುಧಿಷ್ಠಿರನಿದ್ದಲ್ಲಿಗೆ ಬಂದು "ಮಹಾರಾಜ, ನೀನು ಈ

ಯಜ್ಞವಾಟದಲ್ಲಿಯೇ ಇರು. ನಾನು ಧೃತರಾಷ್ಟ್ರನೇ ಮೊದಲಾದ ಹಿರಿಯರನ್ನೂ ಋಷಿಗಳನ್ನೂ ನಿನ್ನ ಸೋದರರನ್ನೂ ಕರೆದುಕೊಂಡು ಬಕದಾಲ್ಭ್ಯ ಮುನಿಯಿಂದಲೂ ಯಜ್ಞಾಶ್ವದಿಂದಲೂ ಸಮೇತನಾದ ಅರ್ಜುನನಿದ್ದಲ್ಲಿಗೆ ಹೋಗುವೆನು. ಕುಂತಿಯೂ ನನ್ನ ಸ್ತ್ರೀಯರೂ ಮುನಿಪತ್ನಿಯರೊಡನೆ ಬರಲಿ. ಬ್ರಾಹ್ಮಣರು ವೇದಮಂತ್ರಗಳನ್ನು ಪಠಿಸುತ್ತಿರಲಿ. ಕುಮಾರಿಯರು ಆನೆಗಳ ಮೇಲೆ ಕುಳಿತು ಅರಳನ್ನು ಬೀರುತ್ತಿರಲಿ. ನೃತ್ಯವನ್ನೂ ವಿವಿಧ ಕೌತುಕಗಳನ್ನೂ ಜನರು ಮಾಡುತ್ತಿರಲಿ. ರಾಜಸೇವಕರು ಬಣ್ಣಬಣ್ಣದ ಪತಾಕೆಗಳಿಂದ ನಗರವನ್ನು ಅಲಂಕರಿಸಿ, ಚಂದನೋದಕವನ್ನು ಬೀದಿಯಲ್ಲಿ ಎರಚಿ ಹೂಗಳನ್ನು ಹರಡಲಿ" ಎಂದು ಹೇಳಿ ರಾಜಸೇವಕರಿಗೆ ತಕ್ಕ ಆಜ್ಞೆಗಳನ್ನಿತ್ತನು. ಸೇವಕರು ಆಜ್ಞೆಯಂತೆ ಎಲ್ಲವನ್ನೂ ನಡೆಸಿದರು. ಶ್ರೀಕೃಷ್ಣನೊಡನೆ ನಗರವಾಸಿಗಳೂ ಅರ್ಜುನನನ್ನು ಸ್ವಾಗತಿಸುವುದಕ್ಕಾಗಿ ಹೊರಟರು. ಎಲ್ಲರ ಬಾಯಲ್ಲಿಯೂ 'ಆಹಾ! ಅರ್ಜುನನು ಬಂದನು! ಅಶ್ವಗಳು ಬಂದವು! ಎಂತಹ ಭಾಗ್ಯವಿದು!' ಎಂಬ ಆನಂದೋದ್ಗಾರಗಳು ಹೊರಡುತ್ತಿದ್ದವು. ರುಕ್ಮಿಣಿಯು ಪಲ್ಲಕ್ಕಿಯನ್ನೇರಿ ತನ್ನ ಸಖಿಯರೊಡನೆ ಹೊರಟಳು. ಉಷೆಯು ಸಾವಿರಾರು ಮಂದಿ ಸ್ತ್ರೀಯರೊಡನೆ ನಡೆದಳು. ಸತ್ಯಭಾಮೆಯ ಗೆಳತಿಯರೆಲ್ಲರೂ ಪಾರಿಜಾತದ ಹೂಗಳನ್ನು ಮುಡಿದು ಹಾಲಿಗಿಂತ ಬಿಳಿದಾದ ಸೀರೆಗಳನ್ನುಟ್ಟು ಕುಸುಬೆಯ ಬಣ್ಣದ ರವಿಕೆಗಳನ್ನು ತೊಟ್ಟು ಸತ್ಯಭಾಮೆಯೊಡನೆ ಸಾಗಿದರು. ಜಾಂಬವತಿಯು ಮುತ್ತಿನ ಹಾರಗಳನ್ನು ಧರಿಸಿದ ಸುಂದರಿಯರಾದ ತರುಣಿಯರೊಡನೆ ಹೊರಟಳು. ಆ ತರುಣಿಯರು ದಿವ್ಯವಸ್ತ್ರಗಳನ್ನುಟ್ಟು ತಮಾಲವರ್ಣದ ಕುಪ್ಪುಸಗಳನ್ನು ತೊಟ್ಟಿದ್ದರು. ಬೀದಿಯೆಲ್ಲವೂ ಹರ್ಷಾನ್ವಿತರಾದ ಸ್ತ್ರೀಯರಿಂದ ತುಂಬಿಹೋಯಿತು. ಆ ಸ್ತ್ರೀಯರ ಅನ್ಯೋನ್ಯ ದೇಹಸಂಪರ್ಕದಿಂದ ಕುಂಕುಮ, ಮತ್ತು ಕರ್ಪೂರಗಳು ಬೀದಿಯಲ್ಲಿ ಸುರಿದವು. ದೇವಕಿ, ಯಶೋದೆ, ರುಕ್ಮಿಣಿ ಮತ್ತು ಕುಂತಿ-ಇವರು ಆನೆಗಳ ಮೇಲೆ ಕುಳಿತು ಪಾರ್ಥನನ್ನು ಸ್ವಾಗತಿಸುವುದಕ್ಕಾಗಿ ಹೋದರು. ಅವರ ಮೇಲೆ ಛತ್ರಿಗಳನ್ನು ಹಿಡಿಯಲಾಗಿತ್ತು. ಚಾಮರಗಳು ಬೀಸುತ್ತಿದ್ದವು. ಶ್ರೀಕೃಷ್ಣನು ಪ್ರಾತಃಸ್ನಾನವನ್ನು ಮಾಡಿ ಹೂವಿನ ಸುಗಂಧವನ್ನು ಮೈಗೆ ಲೇಪಿಸಿಕೊಂಡು, ಅರ್ಧಚಂದ್ರಾಕೃತಿಯ ಸೇನಾವ್ಯೂಹದೊಡನೆ ಹೊರಟಿದ್ದನು. ಎದುರಿಗೆ ಬ್ರಾಹ್ಮಣರು ವೇದಘೋಷಗಳನ್ನು ಮಾಡುತ್ತಿದ್ದರು. ಆ ಬ್ರಾಹ್ಮಣರ ಪತ್ನಿಯರು ದಧಿ ದೂರ್ವೆ ಅಕ್ಷತೆ ಮುಂತಾದ ಮಂಗಳದ್ರವ್ಯಗಳನ್ನು ಹಿಡಿದುಕೊಂಡು ಮುಂದೆ ಹೋಗುತ್ತಿದ್ದರು. ಕ್ಷತ್ರಿಯ ಸ್ತ್ರೀಯರು ಕರ್ಪೂರದೀಪಗಳಿರುವ ಸುವರ್ಣಪಾತ್ರೆಗಳನ್ನು ಹಿಡಿದುಕೊಂಡಿದ್ದರು. ವೇಶ್ಯೆಯರು ಕುಸುಬೆ ಬಣ್ಣದ ಸೀರೆಗಳನ್ನುಟ್ಟು ಗೋರೋಚನ ಕುಂಕುಮ ಚಂದನಗಳನ್ನು ಚಿನ್ನದ ಬಟ್ಟಲುಗಳಲ್ಲಿ ಇಟ್ಟುಕೊಂಡು ಬಂದಿದ್ದರು. ಆ ವೇಶ್ಯೆಯರು ಮುತ್ತಿನ ಹಾರಗಳನ್ನು ಕುಣಿಸುತ್ತ ಮಹಾಜನರೆದುರಿಗೆ ನರ್ತಿಸುತ್ತ ಬರುತ್ತಿದ್ದರು! ನೇತ್ರಕಟಾಕ್ಷವೀಕ್ಷಣಗಳಿಂದ ಯುವಕರ ಮನಸ್ಸನ್ನು ಕಡೆಯುತ್ತಿದ್ದರು. ರಸಭಾವಹಾವಗಳನ್ನು ಪ್ರದರ್ಶಿಸುತ್ತ, ಮುಖಪದ್ಮಗಳಿಗೆ ಎರಗುವ ದುಂಬಿಗಳನ್ನು ಓಡಿಸುತ್ತ ನರ್ತಿಸುತ್ತಿದ್ದ ವೇಶ್ಯೆಯರು ಶ್ರೀಕೃಷ್ಣನ ಮೆಚ್ಚುಗೆಯನ್ನು ಗಳಿಸಿದರು.

# ಜಲಯಾತ್ರಾ ವರ್ಣನೆ

ಜನಮೇಜಯ, ಶ್ರೀಕೃಷ್ಣನು ಮಹಾಜನರಿಂದ ಯುತನಾಗಿ ಪಾರ್ಥನನ್ನು ನಿರೀಕ್ಷಿಸುತ್ತ ದಾರಿಯಲ್ಲಿ ನಿಂತಿದ್ದನು. ಸ್ವಲ್ಪಕಾಲದಲ್ಲಿ ಪಾರ್ಥನು ಅನುಗಾಮಿಗಳಾದ ರಾಜರೊಡನೆ ಎದುರಿಗೆ ಬಂದನು. ಅವನು ತನ್ನ ವಾಹನದಿಂದ ಕೆಳಗಿಳಿದು ಯಜ್ಞಾಶ್ವಗಳನ್ನೂ ಪಲ್ಲಕ್ಕಿಯಲ್ಲಿದ್ದ ಬಕದಾಲ್ಭ್ಯಮುನಿಯನ್ನು ಮುಂದೆ ಮಾಡಿಕೊಂಡು ಬಂದನು. ಶ್ರೀಕೃಷ್ಣನನ್ನು ಕಂಡೊಡನೆ ಭೂಪಾಲರೆಲ್ಲರೂ ವಾಹನಗಳಿಂದಿಳಿದು ನಡೆಯುತ್ತ ಶ್ರೀಕೃಷ್ಣನ ಸಂಮುಖದಲ್ಲಿ ಬಂದರು. ಆ ಸಮಯದಲ್ಲಿ ಪಾರ್ಥನ ಸೇನೆಯೆಲ್ಲವೂ ಮಾಧವನ ದೇಹದಲ್ಲಿ ಲೀನವಾಗಿರುವುದನ್ನು ಆ ರಾಜರು ಕಂಡರು. ಜನಮೇಜಯ, ಧರ್ಮರಾಜನಿಗೋಸ್ಕರ ಸಾಕ್ಷಾತ್ ಶ್ರೀಹರಿಯೇ ಪಾರ್ಥಸೇನೆಯ ರೂಪವನ್ನು ಧರಿಸಿದ್ದನಲ್ಲವೆ? ಮದಿಸಿದ ಆನೆಗಳೂ ಶುಭ್ರವರ್ಣದ ಅಶ್ವಗಳೂ ರಥಗಳೂ ಪದಾತಿಗಳೂ ರಾಜರೂ ರಾಜಪುತ್ರರೂ ಸಕಲರೂ ಸುಂದರರೂಪವನ್ನು ಧರಿಸಿ ಶ್ರೀಕೃಷ್ಣನಾಗಿ ಕಾಣಿಸಿದರು! ಅರ್ಜುನನನ್ನು ಹಿಂಬಾಲಿಸಿ ಬಂದಿದ್ದ ರಾಜರು ತಮ್ಮ ತಮ್ಮಲ್ಲಿ ಹೀಗೆ ಮಾತಾಡಿಕೊಳ್ಳುತ್ತಿದ್ದರು : "ಆಹಾ! ನಾವು ಪಾರ್ಥನ ಅಶ್ವವನ್ನು ಹಿಂಬಾಲಿಸಿ ಅನೇಕ ದೇಶಗಳನ್ನು ನೋಡಿದೆವು. ಆ ದೇಶಗಳ ವೈಭವವು ವಿದ್ವಾಂಸರ ಮನಸ್ಸನ್ನೂ ಸೂರೆಗೊಳ್ಳುವಂತಿತ್ತು. ಈಗ ಯುಧಿಷ್ಠಿರನ ನಗರವೈಭವವು ಆ ದೇಶಗಳ ವೈಭವವನ್ನು ಹಿಯ್ಯಾಳಿಸುತ್ತಿದೆ! ಇಲ್ಲಿರುವ ಪುಣ್ಯ. ಧನ, ಸುಖ, ಧರ್ಮ, ದಿವ್ಯೋದ್ಯಾನಗಳು, ಸಂಪತ್ತುಗಳು ಮೂರುಲೋಕಗಳನ್ನೂ ಹಾಸ್ಯ ಮಾಡುತ್ತಿವೆ. ಇಲ್ಲಿರುವ ಪ್ರಜೆಗಳೆಲ್ಲರೂ ಧರ್ಮನಿಷ್ಠರು. ವಿವಿಧಾಭರಣಭೂಷಿತರಾದ ಸ್ತ್ರೀಯರು ರತಿಯಂತೆಯೂ ಪುರುಷರು ಮನ್ಮಥನಂತೆಯೂ ಇದ್ದಾರೆ. ರತ್ನಾಲಂಕಾರಗಳಿಂದ ಶೃಂಗರಿಸಲ್ಪಟ್ಟ ಈ ಆನೆಗಳು ಐರಾವತದ ಸಂತತಿಗಳಿರಬಹುದೆ? ರತ್ನಗಳಿಂದಲೂ ಶಿರೋಭೂಷಣಗಳಿಂದಲೂ ಉತ್ತಮ ವಸ್ತ್ರಗಳಿಂದಲೂ ಅಲಂಕರಿಸಲ್ಪಟ್ಟಿರುವ ಅಶ್ವಗಳು ಐದು ಬಗೆಯ ಸಂಚಾರಗತಿಗಳಲ್ಲಿಯೂ ಚಾತುರ್ಯದಿಂದ ಕೂಡಿವೆ. ಇವು ದೇವಾಶ್ವವಾದ ಉಚ್ಚೈಃಶ್ರವಸ್ಸನ್ನು ವೇಗದಲ್ಲಿ ಮೀರಿಸುತ್ತವೆ. ಇಲ್ಲಿರುವುದೆಲ್ಲವೂ ಮನೋಹರವಾಗಿದೆ. ಏನೆಂದು ವರ್ಣಿಸೋಣ! ಸಾಕ್ಷಾತ್ ಶ್ರೀಕೃಷ್ಣನೇ ಧರ್ಮರಾಜನ ರಾಜ್ಯವನ್ನು ವ್ಯಾಪಿಸಿ ಬೆಳಗುತ್ತಿದ್ದಾನೆ! ಕನ್ಯಕೆಯರು ರತ್ನಮಿಶ್ರಿತವಾದ ಮುಕ್ತಾಹಾರಗಳನ್ನು ಅರ್ಪಿಸಿ ರಾಜರನ್ನು ಸ್ವಾಗತಿಸುತ್ತಿದ್ದಾರೆ. ಈ ಭೂಪಾಲರ ಶಿರೋಭಾಗದಲ್ಲಿ ಬೀಸುವ ಚಾಮರಗಳನ್ನು ನೋಡಿರಿ! ಸೂರ್ಯನೇ ಊರ್ಧ್ವಕಿರಣನಾಗಿ ಹೊಳೆಯುತ್ತಿರುವನೆ! ಅದೋ ಅಲ್ಲಿ ಊರ್ಧ್ವರೇತಸ್ಕರಾದ ಋಷಿಗಳು ಆಗಮಿಸುತ್ತಿದ್ದಾರೆ. ಅಸಿಧಾರಾವ್ರತವನ್ನು ಪಾಲಿಸುತ್ತ ದೀಕ್ಷಿತನಾಗಿರುವ ಧರ್ಮರಾಜನಿಂದ ಏನನ್ನೋ ಯಾಚಿಸುವುದು ಇವರ ಉದ್ದೇಶವಾಗಿರಬಹುದು. ಆಹಾ! ಧೂಪದ ಹೊಗೆಯು ಆಕಾಶವನ್ನು ಕವಿದುಬಿಟ್ಟಿದೆ! ಈ ವಾದ್ಯಗಳ ಶಬ್ದದಿಂದ ಸೀಳಿಹೋದೆನೆಂದು ಆಕಾಶವು ಧೂಪದ ಹೊಗೆಯಿಂದ ತನ್ನನ್ನು ಆವರಿಸಿಕೊಳ್ಳುತ್ತಿರಬಹುದೆ! ಧರ್ಮರಾಜನ ಸೇನೆಯು ಶ್ರೀಕೃಷ್ಣನಿಂದ ರಕ್ಷಿತವಾಗಿದೆ. ಇದು ಚಲಿಸುತ್ತಿದ್ದರೂ ಧೂಳಿ ಏಳದಂತೆ ಗಂಭೀರವಾಗಿ

ನಡೆಯುತ್ತಿದೆ" ಈ ಪ್ರಕಾರವಾಗಿ ಮಾತಾಡಿಕೊಳ್ಳುತ್ತ ಆ ರಾಜರು ಶ್ರೀಕೃಷ್ಣನ ಸಮೀಪಕ್ಕೆ ಬಂದರು. ಧೀಮಂತನಾದ ಪಾರ್ಥನು ಶ್ರೀಕೃಷ್ಣನೇ ಮೊದಲಾದ ಮಹಾಜನರಿಗೆ ವಂದಿಸಿದನು. ಆಮೇಲೆ ಗಾಂಧಾರಿ, ಕುಂತಿ, ದೇವಕಿ, ಧೃತರಾಷ್ಟ್ರ, ವಿದುರ-ಇವರಿಗೆ ತನ್ನೊಡನೆ ಆಗಮಿಸಿದ್ದ ಭೂಪಾಲರನ್ನು ಪರಿಚಯ ಮಾಡಿಕೊಡುತ್ತ ಹೀಗೆಂದನು: "ನೋಡಿರಿ : ಈತನು ಚಂದ್ರಹಾಸನೆಂಬ ಭೂಪಾಲ. ಪತ್ನಿಯಾದ ವಿಷಯೆಯಲ್ಲಿ ಅಭಿರುಚಿಯುಳ್ಳವನೂ ವೀರನೂ ಆದ ಮಹಾರಾಜ. ವಿಷ್ಣುಭಕ್ತನೂ ಪೂಜ್ಯನು ಆದ ಈ ಮಹಾಭಾಗನು ಆಗಮಿಸಿದ್ದಾನೆ. ವೀರವರ್ಮನೆಂಬ ವೀರಾಗ್ರಣಿಯು, ಧೃತರಾಷ್ಟ್ರ ಮಹಾರಾಜ, ನಿನಗೆ ವಂದಿಸುತ್ತಿದ್ದಾನೆ. ಇವನು ಧರ್ಮನಿಷ್ಠನಾದ ಮಯೂರಧ್ವಜ. ಶ್ರೀಕೃಷ್ಣನಿಗೆ ಈತನ ಶಿರಸ್ಸನ್ನು ಸೀಳಿಸಲು ಸಾಧ್ಯವಾಯಿತೇ ಹೊರತು ಇವನ ಧರ್ಮನಿಷ್ಠೆಯನ್ನು ಸೀಳಲಾಗಲಿಲ್ಲ! ಮಹಾರಾಜ, ಇವನು ಬಭ್ರುವಾಹನ. ಒಳ್ಳೆಯ ಧೀಮಂತ. ನಿನ್ನ ಸೇವೆಗೋಸ್ಕರ ಬಂದಿದ್ದಾನೆ. ಇವನ ಪ್ರತಾಪಸೂರ್ಯನಿಂದ ವೈರಿಗಳ ಮುಖಪದ್ಮಗಳು ಹಗಲು ಹೊತ್ತಿನಲ್ಲಿಯೇ ಮುದುರಿ ಕೊಂಡವು! ಯಾವನು ಶೇಷನ ಪಾತಾಳಲೋಕದಿಂದ ಸಂಜೀವಕಮಣಿಯುನ್ನು ತಂದನೋ, ಸರ್ಪಗಳ ಘೋರವಿಷಪ್ರಸರವನ್ನು ತಡೆದು ನಿಲ್ಲಿಸಿದನೋ, ಜಾಹ್ನವಿಯ ಘೋರಶಾಪಾಗ್ನಿಯಿಂದ ದಗ್ಧನಾದ ನನ್ನನ್ನು ಬಂಧುಗಳೊಡನೆ ಮತ್ತೆ ಸೇರಿಕೊಳ್ಳುವಂತೆ ಮಾಡಿದನೋ ಆತನೇ ಇವನು. ಮಹಾರಾಜ, ಈಗ ನಿನ್ನ ಪಾದಗಳಿಗೆ ವಂದಿಸುತ್ತಿರುವವನು ಹಂಸಧ್ವಜ. ಈತನ ಪುತ್ರರು ಪಾರ್ವತೀಪತಿಯಾದ ಶಂಕರನನ್ನು ಸಂತೋಷಪಡಿಸಿದ ಮಹಾವೀರರು. ಈತನು ಕರ್ಣಪುತ್ರನಾದ ವೃಷಕೇತು. ತನ್ನ ಪರಾಕ್ರಮದಿಂದ ನಮ್ಮ ಸೇನೆಯನ್ನು ರಕ್ಷಿಸಿದ್ದಾನೆ. ನಿನಗೆ ನಮಸ್ಕರಿಸುತ್ತಿರುವ ಈತನನ್ನು ಆಲಿಂಗಿಸಿಕೊ. ಮಹಾರಾಜ, ನಿನಗೆ ಪ್ರಣತನಾದ ನೀಲಧ್ವಜನನ್ನು ಮೇಲಕ್ಕೆತ್ತು. ಈ ವೀರನು ಅಗ್ನಿಯ ನೆರವಿನಿಂದ ನಮ್ಮ ಸೇನೆಯನ್ನು ಸುಟ್ಟಾಗ ನಾವು ಬದುಕುವುದೇ ಕಷ್ಟವಾಯಿತು" ಈ ಪ್ರಕಾರದಲ್ಲಿ ಅರ್ಜುನನು ಹೇಳುತ್ತಿರಲಾಗಿ ಧೃತರಾಷ್ಟ್ರನು ಆ ಭೂಪಾಲರೆಲ್ಲರನ್ನೂ ಗೌರವದಿಂದ ಮಾತಾಡಿಸಿ ಸತ್ಕರಿಸಿದನು. ತರುವಾಯ, ರಾಜರೆಲ್ಲರೂ ಯುಧಿಷ್ಠಿರನ ಬಳಿಗೆ ಹೋಗಿ ಆ ಮಹಾತ್ಮನಿಗೆ ನಮಸ್ಕರಿಸಿದರು. ಅರ್ಜುನನೂ ಅಣ್ಣನಿಗೆ ವಂದಿಸಿ ಅವನನ್ನು ಆಲಿಂಗಿಸಿಕೊಂಡನು. ಆಮೇಲೆ ಭೀಮಸೇನನನ್ನೂ ಇತರ ಹಿರಿಯರನ್ನೂ ನಮಸ್ಕರಿಸಿದನು. 'ಕುಂತಿಯು ಶರತೋಮರಾದ್ಯಾಯುಧಗಳಿಂದ ವಿದೀರ್ಣಶರೀರನಾಗಿ ಆಗಮಿಸಿದ ಅರ್ಜುನನನ್ನು ಅಪ್ಪಿಕೊಂಡು ಆನಂದಬಾಷ್ಪಗಳನ್ನು ಸುರಿಸಿದಳು. ಅವಳು ತನಗೆ ಪ್ರಿಯನೂ ಬಾಲಕನೂ ಆದ ಕರ್ಣಪುತ್ರನ ಶಿರಸ್ಸನ್ನು ಆಘ್ರಾಣಿಸಿ "ಮಗು-ವೃಷಕೇತು, ನಮ್ಮ ಸೈನ್ಯವೆಲ್ಲವನ್ನೂ ರಕ್ಷಿಸಿಕೊಂಡು ಬಂದ ವೀರನು ನೀನೇ ಸರಿ" ಎಂದು ನುಡಿದಳು. ಎಲ್ಲ ವಾರ್ತೆಯನ್ನೂ ತಿಳಿದು ಕುಂತಿಗೆ ಬಹಳ ಹರ್ಷವಾಯಿತು.

ಜನಮೇಜಯ, ಅನಂತರ ದೀಕ್ಷಿತನಾದ ಧರ್ಮರಾಜನು ದ್ರೌಪದೀ ಸಮೇತನಾಗಿ ಎರಡು ಎತ್ತುಗಳನ್ನು ಹಿಡಿದುಕೊಂಡು ಯಜ್ಞಕ್ಷೇತ್ರವನ್ನು ಉಳುವುದಕ್ಕಾಗಿ ಔಷಧದ್ರವ್ಯಗಳನ್ನು

ತೆಗೆದುಕೊಂಡು ಹೊರಟನು. ಋಷಿಗಳೂ ಶ್ರೀಕೃಷ್ಣಾದಿಗಳೂ ಜೊತೆಯಲ್ಲಿ ಹೋದರು. ಕುಂತಿ, ದೇವಕಿ, ಯಶೋದೆಯರು ಕರ್ಪೂರಮಿಶ್ರಿತವಾದ ಚಂದನಜಲವನ್ನು ಧರ್ಮರಾಜನ ಮೇಲೆ ಸುರಿದರು. ಬ್ರಾಹ್ಮಣರು ಮಂತ್ರಗಳನ್ನು ಪಠಿಸುತ್ತಿದ್ದರು. ಕ್ಷೇತ್ರವನ್ನು ಉತ್ತ ಮೇಲೆ ಮಂತ್ರಪೂರ್ವಕವಾಗಿ ಇಷ್ಟಿಕಾಚಯನವನ್ನು ಮಾಡಲಾಯಿತು. ಚತುರ್ವೇದಗಳಲ್ಲಿಯೂ ನಿಷ್ಣಾತರಾದ ವ್ಯಾಸಾದಿಮುನಿಗಳೂ ಸಮಸ್ತ ವಂದಿತನಾದ ಬಕದಾಲ್ಭ್ಯಮುನಿಯೂ ಕರ್ಮವಿಧಿಯನ್ನು ಹೇಳಿಕೊಡುತ್ತಿದ್ದರು. ಮೊದಲು ಸುಪರ್ಣಚಿತಿಯನ್ನು ನಿರ್ಮಿಸಿದರು. ಇದಕ್ಕೆ ಹಂಸಚಿತಿಯೆಂದೂ ಹೆಸರಿದೆ. ಗರುಡಾಕಾರದಲ್ಲಿ ಇದನ್ನು ನಿರ್ಮಿಸಬೇಕು. ಗರುಡನ ಬಲರೆಕ್ಕೆಯನ್ನು ನೂರನಲವತ್ತುನಾಲ್ಕು ಇಟ್ಟಿಗೆಗಳಿಂದಲೂ ಅದೇ ಸಂಖ್ಯೆಯಿಂದ ಎಡರೆಕ್ಕೆಯನ್ನೂ ರಚಿಸುತ್ತಾರೆ. ಮಧ್ಯದಲ್ಲಿ ಪುಚ್ಛವನ್ನು ರಚಿಸಲು ನೂರು ಇಟ್ಟಿಗೆಗಳನ್ನು ಉಪಯೋಗಿಸುತ್ತಾರೆ. ಗರುಡನ ಮುಖವನ್ನು ನಿರ್ಮಿಸಲು ಇಪ್ಪತ್ತೊಂದು ಇಟ್ಟಿಗೆಗಳನ್ನು ಬಳಸಬೇಕಾಗುತ್ತದೆ. ಇದು ಒಂದು ಚಿತಿಯಾಯಿತು. ಹೀಗೆಯೇ ಉತ್ತರೋತ್ತರವಾಗಿ ದ್ವಿಗುಣಸಂಖ್ಯೆಯ ಇಟ್ಟಿಗೆಗಳಿಂದ ಇನ್ನೂ ನಾಲ್ಕು ಗರುಡಚಿತಿಗಳನ್ನು ನಿರ್ಮಿಸಿದರು. ಈ ಐದು ಚಿತಿಗಳಿಗೆ ಸುಪರ್ಣಪಂಚಕವೆಂದು ಹೆಸರು. ವಿಜ್ಞರಾದ ಯಾಜ್ಞಿಕರು ಎಂಟು ದ್ವಾರಗಳಿರುವ ಮಂಟಪವನ್ನೂ ಎಂಟು ಕುಂಡಗಳನ್ನೂ ರಚಿಸಿದರು. ಕಗ್ಗಲಿಮರದ ಆರು ಯೂಪಸ್ತಂಭಗಳನ್ನು ನಿರ್ಮಿಸಿದರು. ಹಾಗೆಯೇ ಏಳು ಮುತ್ತುಗದ ಯೂಪಗಳೂ ಐದು ಬಿಲ್ವಯೂಪಗಳೂ ಐದು ಚಳ್ಳಿಮರದ ಯೂಪಗಳೂ ನಿರ್ಮಿಸಲ್ಪಟ್ಟವು.* ಮೂರು ವೇದಿಗಳನ್ನು ಸ್ಥಾಪಿಸಿ ಚಷಾಲ, ಸ್ರುವ, ಸ್ರುಕ್, ಜುಹೂ-ಮುಂತಾದ ಹೋಮಪಾತ್ರೆಗಳನ್ನು ತಂದಿಟ್ಟರು. ಕೆಂಪನೆಯ ಗೋಚರ್ಮ, ಸೋಮಲತೆ, ಒನಕೆ, ಒರಳು ಮುಂತಾದ ಸಾಮಗ್ರಿಗಳನ್ನೂ ಯಜ್ಞೋಪಯುಕ್ತವಾದ ಅಸಂಖ್ಯ ಸಂಭಾರಗಳನ್ನೂ ತಂದು ಸಜ್ಜುಗೊಳಿಸಲಾಯಿತು.

ವ್ಯಾಸಮುನಿಗಳು ಆಚಾರ್ಯರೆಂದೂ ಬಕದಾಲ್ಭ್ಯರು ಬ್ರಹ್ಮನೆಂದೂ ನಿಶ್ಚಯಿಸಲಾಯಿತು. ತೇಜಸ್ವಿಗಳಾದ ವಾಮದೇವ, ವಸಿಷ್ಠ, ಗೌತಮ, ಅತ್ರಿ, ಪರಾಶರ, ಭಾರದ್ವಾಜ, ಜಾಮದಗ್ನ್ಯ, ಕಹೋಡ, ಭಾಗುರಿ, ರೈಭ್ಯ, ಸುಮಂತು, ಕೌಂಡಿನ್ಯ, ಜಾತೂಕರ್ಣ್ಯ, ಗಾಲವ, ಸೌಭರಿ, ಲೋಮಶ ಮುಂತಾದ ಋಷಿಗಳು ಋತ್ವಿಜರಾದರು. ರಕ್ಷೋಘ್ನಮಂತ್ರಗಳಿಂದ ಯಜ್ಞಮಂಟಪಕ್ಕೆ ರಕ್ಷಣೆಯನ್ನು ಕಲ್ಪಿಸಿ ಧರ್ಮರಾಜನು ಎಂಟು ಮಂದಿ ಋಷಿಗಳನ್ನು ದ್ವಾರರಕ್ಷಕರನ್ನಾಗಿ ಇರಿಸಿದನು. ಅವರು ಯಾರೆಂದರೆ : ವಿಶ್ವಾಮಿತ್ರ, ಪುಲಹ, ಧೌಮ್ಯ, ಆರುಣಿ, ಉಪಮನ್ಯು, ವಾಯುಭಕ್ಷ, ಮಧುಚ್ಛಂದ ಮತ್ತು ವಿಭಾಂಡಕ ಎಂಬವರು. ಹೀಗೆಯೇ ಉಳಿದ ಇತರ ಕರ್ಮಗಳಿಗಾಗಿ ವಿವಿಧಮುನಿಗಳಿಗೆ ವರಣವನ್ನು ಕೊಟ್ಟು ಧರ್ಮರಾಜನು ಅವರೆಲ್ಲರನ್ನೂ ಪೂಜಿಸಿದನು. ದೀಕ್ಷಿತನಾದ ಯುಧಿಷ್ಠಿರನು

* ೧ ಇಲ್ಲಿ ವರ್ಣಿಸಿರುವ ಚಿತ್ಯಾದಿವಿಧಾನವು ತೈತ್ತಿರೀಯ ಶಾಖಾನುಸಾರಿಯೆಂದೂ ವಾಲ್ಮೀಕಿರಾಮಾಯಣದ ಬಾಲಕಾಂಡದ ೧೪ನೆಯ ಸರ್ಗದಲ್ಲಿ ಹೇಳಿದ ವಿಧಾನವು ವಾಜಸನೇಯಶಾಖಾನುಸಾರಿಯೆಂದೂ ತಿಳಿದುಬರುತ್ತದೆ.

ಕೃಷ್ಣಾಜಿನವನ್ನು ಧರಿಸಿ ನವನೀತವನ್ನು ದೇಹಕ್ಕೆ ಲೇಪಿಸಿಕೊಂಡು ದ್ರೌಪದೀಸಹಿತನಾಗಿದ್ದನು. ಅನಂತರ ಆಚಾರ್ಯರಾದ ವೇದವ್ಯಾಸರು ಧರ್ಮರಾಜನನ್ನು ನೋಡಿ "ಈಗ ಯಥೋಚಿತವಾಗಿ ಅರುವತ್ತು ನಾಲ್ಕು ದಂಪತಿಗಳು ಗಂಗಾತೀರಕ್ಕೆ ಹೋಗಿ ಪವಿತ್ರವಾದ ಗಂಗಾಜಲವನ್ನು ತರಬೇಕು. ಆ ದಂಪತಿಗಳಲ್ಲಿ ಕೆಲವರನ್ನು ನಾನು ಹೇಳುತ್ತೇನೆ: ಅತ್ರಿ-ಅನಸೂಯಾ, ವಸಿಷ್ಠ-ಅರುಂಧತೀ, ಶ್ರೀಕೃಷ್ಣ-ರುಕ್ಮಿಣೀ, ಅರ್ಜುನ-ಸುಭದ್ರೆ, ಪ್ರದ್ಯುಮ್ನ-ಮಾಯಾವತೀ, ಅನಿರುದ್ಧ-ಉಷಾ, ಭೀಮಸೇನ-ಹಿಡಿಂಬೆ, ವೃಷಕೇತು-ಪ್ರಭದ್ರೆ, ಮಯೂರಧ್ವಜ-ಲೀಲಾವತೀ, ಯೌವನಾಶ್ವ-ಪ್ರಭಾವತೀ, ನೀಲಧ್ವಜ-ಸುನಂದಾ, ಅನುಸಾಲ್ವ-ಧಮಿಲ್ಲಾ. ಈ ದಂಪತಿಗಳಲ್ಲದೆ ಇನ್ನೂ ಕೆಲವರು ತಮ್ಮ ಪತ್ನಿಯರೊಡನೆ ಹೋಗಿ ಕಲಶಗಳಲ್ಲಿ ಗಂಗಾಜಲವನ್ನು ತರಲಿ" ಎಂದು ತಿಳಿಸಿದರು.

ವ್ಯಾಸಮುನಿಗಳ ಆದೇಶದಂತೆ ದಂಪತಿಗಳು ಚಿಗುರೆಲೆಗಳಿಂದ ಅಲಂಕೃತವಾದ ಕಲಶಗಳನ್ನು ಹಿಡಿದು ಗಂಗಾಜಲವನ್ನು ತರಲು ಹೊರಟರು. ವಾದ್ಯಗಳು ಮಂಗಳಧ್ವನಿಯನ್ನು ಮಾಡಿದವು. ಶಂಖಗಳು ಭೋರ್ಗರೆದವು. ಕುಮಾರಿಯರು ಆನೆಗಳನ್ನೇರಿ ಮುತ್ತುಗಳನ್ನು ತೂರುತ್ತ ಹೊರಟರು. ಬ್ರಾಹ್ಮಣರು ಮಂತ್ರಗಳನ್ನು ಪಠಿಸುತ್ತಿದ್ದರು. ಗಾಯಕರು ಎದುರಿಗೆ ಹಾಡುತ್ತ ಹೋದರು. ನರ್ತಕರು ಕುಣಿಯುತ್ತ ಸಾಗಿದರು. ಜನರು ಶೃಂಗರಿಸಿಕೊಂಡು ಮೆರವಣಿಗೆಯಲ್ಲಿ ಭಾಗವಹಿಸಿದರು. ಶ್ರೀಕೃಷ್ಣನು ದೇವಕಿಯನ್ನೂ ಕುಂತಿಯನ್ನೂ ಜೊತೆಯಲ್ಲಿ ಕರೆದುಕೊಂಡು ಹೋದನು. ಆಗ ಕುಂತಿಯು ಶ್ರೀಕೃಷ್ಣನ ವಸ್ತ್ರದ ತುದಿಯನ್ನು ರುಕ್ಮಿಣಿಯ ಸೆರಗಿಗೆ ಕಟ್ಟಿದಳು! ಈ ಸಮಯದಲ್ಲಿ ಇದೆಲ್ಲವನ್ನೂ ನೋಡುತ್ತಿದ್ದ ನಾರದಮುನಿಯು ನೇರವಾಗಿ ಸತ್ಯಭಾಮೆಯ ಭವನಕ್ಕೆ ಹೋಗಿ ಅವಳನ್ನು ಕಂಡು "ಸತ್ಯಭಾಮೆ, ಕೃಷ್ಣವಲ್ಲಭೆಯೆಂದುಕೊಂಡಿರುವ ನೀನು ನಾನು ಹೇಳುವ ಒಂದು ಮಾತನ್ನು ಕೇಳು! ನಾನಾದೇಶದ ರಾಜರು ನೆರೆದಿರುವ ಈ ಯಜ್ಞಸಮಾರಂಭದಲ್ಲಿ ರುಕ್ಮಿಣಿಗೆ ಬಹಳ ಗೌರವ ದೊರಕಿತು. ಅವಳು ಕೃಷ್ಣನೊಡನೆ ಗಂಗಾಜಲವನ್ನು ತರಲು ಹೊರಟಿದ್ದಾಳೆ. ಅವಳಿಗೆ ಛತ್ರಿಯನ್ನು ಹಿಡಿದಿದ್ದಾರೆ. ಚಾಮರವನ್ನು ಬೀಸುತ್ತಿದ್ದಾರೆ. ಅವಳೊಬ್ಬಳಿಗೇ ರಾಜಮರ್ಯಾದೆ ದೊರೆಯುತ್ತಿದೆ. ಕೃಷ್ಣನ ಯಾವ ಇತರ ಪತ್ನಿಯರಿಗೂ ಈ ಸೌಭಾಗ್ಯವು ದೊರಕಲಿಲ್ಲ! ಅವಳ ಮಗನಾದ ಪ್ರದ್ಯುಮ್ನನೂ ಮೊಮ್ಮಗನಾದ ಅನಿರುದ್ಧನೂ ಅತ್ಯಂತದಕ್ಷರೆಂದು ಹೆಸರು ಗಳಿಸಿದರು. ನೀನು ಮನೆಯಲ್ಲಿ ಸುಮ್ಮನೆ ಮಲಗಿಕೊಂಡಿರುವುದೇಕೆ? ನೀನು ಕೃಷ್ಣನ ಬಳಿಯಲ್ಲಿ ಇದ್ದಿದ್ದರೆ ಮುಖದಾಕ್ಷಿಣ್ಯಕ್ಕಾದರೂ ಅವನು ನಿನ್ನನ್ನು ಕರೆದುಕೊಂಡು ಹೋಗುತ್ತಿದ್ದನು!" ಎಂದು ಹೇಳಿದನು. ಸತ್ಯಭಾಮೆಯು "ಮುನಿಸಪ್ತಮ, ಶ್ರೀಕೃಷ್ಣನು ನನ್ನ ಮನೆಯಲ್ಲಿಯೇ ಇದ್ದಾನೆ! ಇವನೊಡನೆ ನಾನು ಈಗ ಹೊರಡುತ್ತಿದ್ದೇನೆ" ಎಂದಳು. ಅಷ್ಟರಲ್ಲಿ ಶ್ರೀಕೃಷ್ಣನು ಅವಳ ಮನೆಯಲ್ಲಿರುವುದು ನಾರದನಿಗೆ ಕಾಣಿಸಿತು! ಆತನು "ಕೇಶವ, ಯುಧಿಷ್ಠಿರನ ಸಭೆಯಲ್ಲಿ ನೀನಿದ್ದುದನ್ನು ಈಗ ತಾನೆ ನೋಡಿ ಬಂದೆನು. ಸತ್ಯಭಾಮೆಯ ಭವನಕ್ಕೆ ಬಂದರೆ ಇಲ್ಲಿಯೂ ಇದ್ದೀಯೆ! ಈ ಸತ್ಯಭಾಮೆಯೊಡನೆ ಹೊರಡಲು ಸಂನದ್ಧನಾಗುತ್ತಿದ್ದೀಯೆ. ಹೇ ಜಗದೀಶ್ವರ,

ನಿನ್ನ ಲೀಲೆಯು ನಡೆಯಲಿ!" ಎಂದು ಹೇಳಿ ಜಾಂಬವತಿಯ ಮನೆಗೆ ಹೋದನು. ಅಲ್ಲಿ ಜಾಂಬವತಿಯನ್ನು ಕಂಡು ನಾರದನು "ಅಮ್ಮ, ಇದೇನು? ಗೃಹದಲ್ಲಿಯೇ ಇದ್ದೀಯೆ! ಶ್ರೀಕೃಷ್ಣನು ಗಂಗಾಜಲವನ್ನು ತರಲು ರುಕ್ಮಿಣೀ ಸತ್ಯಭಾಮೆಯರೊಡನೆ ಹೊರಟಿದ್ದಾನೆ" ಎಂದನು. ಆಗ ಜಾಂಬವತಿಯು "ಮುನಿಗಳೆ, ಕೇಶವನು ಎಲ್ಲ ಪತ್ನಿಯರೊಂದಿಗೆ ಇರುತ್ತಾನೆ. ಎಲ್ಲರನ್ನೂ ಕರೆದೊಯ್ಯುತ್ತಾನೆ. ಯಾರೊಬ್ಬಳನ್ನಾದರೂ ಅವನು ಬಿಟ್ಟು ಹೋದರೆ, ತನಗೆ ಅವಮಾನವಾಯಿತೆಂದು ಅವಳು ಪ್ರಾಣವನ್ನೇ ತ್ಯಜಿಸುವಳು" ಎಂದು ಉತ್ತರವನ್ನು ಕೊಟ್ಟಳು. ಅಲ್ಲಿಯೂ ಶ್ರೀಕೃಷ್ಣನು ಚಿಗುರೆಲೆಗಳಿಂದ ಅಲಂಕೃತವಾದ ಕಲಶವನ್ನು ಹಿಡಿದು ಜಾಂಬವತಿಯೊಡನೆ ಹೊರಡಲು ಸಿದ್ಧನಾಗಿರುವುದು ನಾರದನಿಗೆ ಗೋಚರಿಸಿತು. ಆತನು ಮೆಲ್ಲನೆ ಅಲ್ಲಿಂದ ಹೊರಟು ಶ್ರೀಕೃಷ್ಣನ ಇತರ ರಾಣಿಯರ ಭವನಗಳಿಗೆ ತೆರಳಿ, ಎಲ್ಲ ಕಡೆಯೂ ಶ್ರೀಕೃಷ್ಣನಿರುವುದನ್ನು ಕಂಡು ನೆಟ್ಟಗೆ ಬಂದು ಋತ್ವಿಜರ ಗುಂಪಿನಲ್ಲಿ ಸೇರಿ ಭಗವಂತನನ್ನು ಸ್ತುತಿಸತೊಡಗಿದನು.

ಎಲ್ಲರೂ ಗಂಗಾತೀರಕ್ಕೆ ಬಂದರು. ವ್ಯಾಸರು ಜಲವನ್ನು ಅಭಿಮಂತ್ರಿಸಿ ಜಲದೇವತೆಗಳನ್ನು ಪೂಜಿಸಿದರು. ಆಮೇಲೆ ಪುಷ್ಪಾಲಂಕೃತವಾದ ಕಲಶದಲ್ಲಿ ಜಲವನ್ನು ತುಂಬಿ ಅನಸೂಯಾದೇವಿಯ ಕೈಗೆ ಕೊಟ್ಟರು. ಅರುಂಧತಿಯು ಜಲಪೂರ್ಣವಾದ ಒಂದು ಸುವರ್ಣಕಲಶವನ್ನೆತ್ತಿ ರುಕ್ಮಿಣಿಯ ತಲೆಯ ಮೇಲಿಟ್ಟಳು. ಸ್ನೇಹದಿಂದ ಹೊರಿಸಿದ ಆ ಕಲಶವನ್ನು ರುಕ್ಮಿಣಿಯು ಸಂತೋಷದಿಂದ ಹೊತ್ತುಕೊಂಡಳು. ಅರುಂಧತಿಯು "ರುಕ್ಮಿಣಿ, ಮನೆಯಲ್ಲಿ ಹೂವನ್ನು ಮುಡಿದರೂ ನಿನ್ನ ತಲೆಗೆ ಭಾರವೆನಿಸಿ ತೊಂದರೆಪಡುತ್ತೀಯೆ! ಅಂತಹ ಕೋಮಲೆಯಾದ ನೀನು ಈಗ ನೀರಿನ ಬಿಂದಿಗೆಯನ್ನು ಸಂತೋಷದಿಂದ ಹೇಗೆ ಹೊತ್ತಿರುವೆ?" ಎಂದು ಕೇಳಿದಳು. ಬಳಿಯಲ್ಲಿದ್ದ ಸುಭದ್ರೆಯು "ತಾಯಿ-ಅರುಂಧತಿ, ಇವಳು ಭಾರವನ್ನು ಹೊರುವುದರಲ್ಲಿ ನಿಪುಣೆ! ಯಾವನು ಗೋವರ್ಧನಗಿರಿಯನ್ನು ಗೋವುಗಳ ಹಿತಕ್ಕಾಗಿ ಕೈಯಲ್ಲಿ ಹಿಡಿದಿದ್ದನೋ ಅವನನ್ನು ಸಹಾ ಹೃದಯದಲ್ಲಿ ಧರಿಸುತ್ತಾಳೆ! ಅಹೋರಾತ್ರವೂ ಅವನನ್ನು ಹೊತ್ತಿದ್ದರೂ ಇವಳಿಗೆ ಖೇದವಾಗುವುದಿಲ್ಲ. ಇವಳಿಗೆ ನೀರಿನ ಬಿಂದಿಗೆ ಒಂದು ಲೆಕ್ಕವೆ! ಪತಿವ್ರತಾಧರ್ಮವನ್ನು ಚೆನ್ನಾಗಿ ಪಾಲಿಸುತ್ತಾಳೆ" ಎಂದು ನುಡಿದಳು. ರುಕ್ಮಿಣಿಯು "ನನ್ನನ್ನು ನೋಡಿ ಈ ಸುಭದ್ರೆಯು ಅರ್ಜುನನನ್ನು ಹೃದಯದಲ್ಲಿ ಹೊರಲು ಆರಂಭಿಸಿ ಬಿಟ್ಟಳು! ಈಗಲೂ ಹೊರೆಯನ್ನು ಹೊರುವುದರಲ್ಲಿಯೇ ಇವಳಿಗೆ ಆನಂದ!" ಎಂದಳು. ಈ ರೀತಿಯಲ್ಲಿ ವಿನೋದದ ನುಡಿಗಳನ್ನಾಡುತ್ತ ಆ ಮಹಿಳೆಯರು ಹೂಗಳಿಂದಲೂ ಮುತ್ತಿನ ಮಾಲೆಗಳಿಂದಲೂ ಅಲಂಕೃತವಾದ ತಮ್ಮ ಶಿರಸ್ಸುಗಳಲ್ಲಿ ಜಲಕಲಶಗಳನ್ನು ಇಟ್ಟುಕೊಂಡು ಪತಿಗಳೊಂದಿಗೆ ಯಜ್ಞಶಾಲೆಗೆ ಆಗಮಿಸಿದರು. ವೀಣೆ, ಭೇರಿ, ಶಂಖ, ಕಹಳೆ ಮುಂತಾದವು ಮಂಗಳಧ್ವನಿಯನ್ನು ಸೂಸುತ್ತಿದ್ದವು. ಆ ಗಂಗಾಜಲದಿಂದ ಯಜ್ಞಾಶ್ವವನ್ನು ಪವಿತ್ರಗೊಳಿಸಲಾಯಿತು. ದ್ರೌಪದಿಯೂ ಧರ್ಮರಾಜನೂ ಅದನ್ನು ಯೂಪಸ್ತಂಭದಲ್ಲಿ ಬಂಧಿಸಿ ಪೂಜಿಸಿದರು.

# ಯಜ್ಞಸಮಾಪ್ತಿಯಲ್ಲಿ ಯುಧಿಷ್ಠಿರಾಭಿಷೇಕ

ಅನಂತರ ಧರ್ಮರಾಜನ ಸೂಚನೆಯಂತೆ ಯಾಗಕಾರ್ಯವು ಆರಂಭಿಸಲ್ಪಟ್ಟಿತು. ಯಜ್ಞವಿದ್ಯೋಕ್ತಕ್ರಮದಿಂದ ಧರ್ಮರಾಜನು ಸ್ನಾನಮಾಡಿದನು. ಶ್ರೀಕೃಷ್ಣನೂ ಭೀಮಾರ್ಜುನಾದಿಗಳೂ ಯಜ್ಞಕರ್ಮವನ್ನು ನೆರವೇರಿಸಲು ಸಹಾಯಕರಾದರು. ಅವರೆಲ್ಲರೂ ಪೂತಾತ್ಮರಾದ ಮುನಿಗಳ ಪಾದಗಳನ್ನು ತೊಳೆದರು. ಶ್ರೀಕೃಷ್ಣನೇ ಬಂದು ಅವರನ್ನು ವಿವಿಧ ಪೀಠಗಳಲ್ಲಿ ಕುಳ್ಳಿರಿಸಿದನು. ಆ ವಿಪ್ರರಿಗೆ ವಸ್ತ್ರ, ಗಂಧ ದಿವ್ಯಾಲಂಕಾರಗಳನ್ನು ಅರ್ಪಿಸಲಾಯಿತು. ಹೂಮಾಲೆಗಳನ್ನು ಕೊರಳಿಗೆ ಹಾಕಿ ಕರ್ಪೂರದ ವೀಳ್ಯಗಳನ್ನು ಕೊಡಲಾಯಿತು. ಸುವರ್ಣಪೀಠಗಳಲ್ಲಿ ಮಂಡಿಸಿದ ಆ ದ್ವಿಜೋತ್ತಮರನ್ನು ಶ್ರೀಕೃಷ್ಣನೂ ಪಾಂಡವರೂ ಸ್ತುತಿಸಿದರು. ಆಮೇಲೆ "ಅನ್ನವನ್ನು ಬಡಿಸಿರಿ" ಎಂಬ ಶಬ್ದವು ಎಲ್ಲೆಲ್ಲಿಯೂ ಮೊರೆಯಿತು. ದ್ವಿಜರಿಗೆ ಅನ್ನದ ಸಂತರ್ಪಣೆಯು ನಡೆಯಿತು. ಆಮೇಲೆ ಧರ್ಮರಾಜನು ಯಜ್ಞಕ್ಕೆ ಆಗಮಿಸಿದ್ದ ಸಕಲವರ್ಗದವರನ್ನು ಅನ್ನಪಾನಾದಿಗಳಿಂದ ತೃಪ್ತಿಪಡಿಸಿ ಯಥೇಷ್ಟವಾಗಿ ದಾನಧರ್ಮಗಳನ್ನು ಮಾಡಿದನು. ಆನೆ, ಕುದುರೆ, ರಥ, ಗೋವು, ಚಂದನ, ಛತ್ರ, ಚಾಮರ, ದಾಸೀದಾಸರ ಸಮುದಾಯ, ಭೂಮಿ, ಮನೆ, ಧನ-ಮುಂತಾದವನ್ನು ಯಾಚಿಸಿದವರಿಗೂ ಯಾಚಿಸದಿದ್ದವರಿಗೂ ಸಂತೃಪ್ತಿಯಾಗುವಂತೆ ದಾನಮಾಡಿದನು. 'ಯಾರು ಯಾವುದನ್ನು ಕೇಳಿದರೂ ಕೊಟ್ಟುಬಿಡಿರಿ' ಎಂದು ಆಜ್ಞೆಮಾಡಿದನು.

ಆಮೇಲೆ ದೀಕ್ಷಿತನಾದ ಯುಧಿಷ್ಠರನು ಸ್ನಾನಮಾಡಿ ಸುವರ್ಣರಾಶಿಯನ್ನು ಹೊರಿಸಿಕೊಂಡು ಯಜ್ಞಾಶ್ವವನ್ನು ಕಟ್ಟಿದ್ದ ಯೂಪಸ್ತಂಭದ ಬಳಿಗೆ ಬಂದನು. ಯಜ್ಞಾಶ್ವವನ್ನು ನೋಡಿ 'ಪಶುರಭೂತ್'...... ಇತ್ಯಾದಿ ಮಂತ್ರವನ್ನು ಪಠಿಸಿ, 'ಎಲೈ ಅಶ್ವವೆ, ಈ ಜಲವನ್ನು ಕುಡಿ. ನಿನಗೆ ಪುಣ್ಯಲೋಕವು ಲಭಿಸುವುದು' ಎಂದನು. ಆ ಮಾತನ್ನು ಕೇಳಿ ಅಶ್ವವು ತಲೆಯನ್ನು ಕೊಡಹುತ್ತ ಶ್ರೀಕೃಷ್ಣನನ್ನು ಪ್ರೀತಿಯಿಂದ ನೋಡಿತು! ಮೂಗಿನ ಸೊಳ್ಳೆಗಳಿಂದ ತನ್ನ ಅಭಿಪ್ರಾಯವನ್ನು ವ್ಯಕ್ತಪಡಿಸಿತು. ಅಶ್ವದ ಅಭಿಪ್ರಾಯವು ನಕುಲನಿಗೆ ತಿಳಿಯಿತು. ಅವನ ಧರ್ಮರಾಜನನ್ನು ನೋಡಿ "ಮಹಾರಾಜ, ಅಶ್ವವು ಹೀಗೆ ಹೇಳುತ್ತಿದೆ. 'ನನಗೆ ಸ್ವರ್ಗವು ಬೇಕಾಗಿಲ್ಲ! ಸ್ವರ್ಗಾರ್ಥವಾದ ಇತರ ಅಶ್ವಮೇಧಗಳಲ್ಲಿ ಅಶ್ವಗಳು ಸ್ವರ್ಗವನ್ನು ಸೇರಿದವು. ಆ ಯಜ್ಞಗಳಲ್ಲಿ ಸಾಕ್ಷತ್ ಶ್ರೀಕೃಷ್ಣನೇ ಕರ್ಮಕಾರಕನಾಗಿರಲಿಲ್ಲ! ಅಂತಹ ಯಜ್ಞಗಳಿಗೆ ಸ್ವರ್ಗವು ಕರ್ತೃಗಳ ಪರಮಪ್ರಯೋಜನ. ಈ ಯಜ್ಞದಲ್ಲಾದರೋ ಶ್ರೀಹರಿಯೇ ಪರಮಪ್ರಯೋಜನ. ಯಾಜ್ಞಿಕರೆ, ನಾನು ಶ್ರೀಕೃಷ್ಣನಲ್ಲಿ ಸೇರಿಕೊಳ್ಳುವೆನು!' ಇದು ಅಶ್ವದ ಅಭಿಪ್ರಾಯ" ಎಂದನು. ಅನಂತರ ಯಾಜ್ಞಿಕರೂ ಶ್ರೀಕೃಷ್ಣನೂ ವಿಹಿತಮಂತ್ರಗಳಿಂದ ಅಶ್ವವನ್ನು ಅಭಿಮಂತ್ರಿಸಿದರು. ಧೌಮ್ಯನು "ಭೀಮ, ಖಡ್ಗವನ್ನು ಹಿರಿದು ನಿಶ್ಚಲಭಾವದಿಂದ ಇಲ್ಲಿ ನಿಲ್ಲು. ನಾನು ಅಶ್ವವನ್ನು ಪರೀಕ್ಷಿಸುವೆನು" ಎಂದು ಹೇಳಿ ಆ ಕುದುರೆಯ ಎಡಕಿವಿಯನ್ನು ಚಿವುಟಿದನು. ಜನಮೇಜಯ, ಏನು ಹೇಳಲಿ! ಕಿವಿಯಿಂದ ಹಾಲಿನ ಧಾರೆ ಚಿಮ್ಮಿತು! ರಕ್ತದ ಹನಿಯೂ ಕಾಣಲಿಲ್ಲ. ಸಕಲರೂ ವಿಸ್ಮಿತರಾದರು. ಧೌಮ್ಯನು

"ಭೀಮಸೇನ, ಪುರಾಣಪುರುಷೋತ್ತಮನಾದ ಜಗನ್ನಾಥನು ಸಂಪ್ರೀತನಾಗಲಿ! ಅಶ್ವದ ಕತ್ತನ್ನು ಕತ್ತರಿಸು!" ಎಂದನು. ವಾದ್ಯಗಳು ಭೋರ್ಗರೆಯುತ್ತಿರಲು ಭೀಮನು ಅಶ್ವದ ಕತ್ತನ್ನು ತುಂಡರಿಸಿದನು. ಜನಮೇಜಯ, ಅಶ್ವದ ಶಿರಸ್ಸು ಕೆಳಗೆ ಬೀಳದೆ ಊರ್ಧ್ವಮುಖವಾಗಿ ನೆಗೆದು ಅಗ್ನಿಸ್ವರೂಪವನ್ನು ತಾಳಿ ಸೂರ್ಯಮಂಡಲವನ್ನು ಪ್ರವೇಶಿಸಿತು! ಅಶ್ವವು ಪರಿಶುದ್ಧವಾಗಿರುವುದನ್ನರಿತು ಶ್ರೀಕೃಷ್ಣನು ಒಂದು ಬಿಲ್ವದ ಮುಳ್ಳಿನಿಂದ ಅಶ್ವದ ಎದೆಯನ್ನು ಚುಚ್ಚಿದನು. ಆದರ ದೇಹದಿಂದ ಕ್ಷೀರಧಾರೆಯು ಹರಿಯಿತು. ಅದನ್ನು ನೋಡಿ ಋಷಿಗಳು "ಧರ್ಮರಾಜ, ಈ ಬಗೆಯಲ್ಲಿ ಪರಿಶುದ್ಧವಾದ ಅಶ್ವವನ್ನು ನಾವು ನೋಡಿಯೇ ಇರಲಿಲ್ಲ!" ಎಂದು ಉದ್ಗರಿಸಿದರು. ಶ್ರೀಕೃಷ್ಣನು "ಧರ್ಮನಂದನ, ಋಷಿಗಳು ಹೀಗೆಂದ ಮೇಲೆ ನಿನ್ನ ಯಜ್ಞವು ಸಾರ್ಥಕವಾಯಿತು" ಎಂದನು. ಅವರು ಹೀಗೆ ಸಂಭಾಷಿಸುತ್ತಿರುವಾಗ ಒಂದು ದಿವ್ಯತೇಜಸ್ಸು ಅಶ್ವದೇಹದಿಂದ ಹೊರಬಂದು ಶ್ರೀಕೃಷ್ಣನ ಮುಖದಲ್ಲಿ ಲೀನವಾಯಿತು. ಅನಂತರ ಆ ದೇಹವು ಕರ್ಪೂರಮಯವಾಗಿ ನೆಲದಲ್ಲಿ ಬಿದ್ದಿತು. ಆ ಕರ್ಪೂರರಾಶಿಯು ರುದ್ರನ ದೇಹದಿಂದ ಉದುರಿದ ವಿಭೂತಿಯೋ ಎಂಬಂತೆ ಗೋಚರಿಸಿತು! ಋಷಿಗಳು ಕರ್ಪೂರದ ರಾಶಿಯನ್ನು ನೋಡಿ ಆಶ್ಚರ್ಯಚಕಿತರಾದರು. ಒಡನೆಯೇ ಆ ಕರ್ಪೂರಖಂಡಗಳಿಂದ ಹೋಮಕುಂಡದಲ್ಲಿ ಹವನವನ್ನಾರಂಭಿಸಿದರು. ಹೋಮಕುಂಡದ ಬಳಿಯಲ್ಲಿ ಪತ್ನೀಸಮೇತನಾದ ಧರ್ಮರಾಜನೂ ಶ್ರೀಕೃಷ್ಣನೂ ಕುಳಿತಿದ್ದರು. ವ್ಯಾಸರು ಸ್ರುವದಲ್ಲಿ ಆ ಕರ್ಪೂರವನ್ನು ತೆಗೆದುಕೊಂಡು "ಹೇ ಪ್ರಭು-ಇಂದ್ರ, ಈ ಮಹಾಯಜ್ಞದಲ್ಲಿ ಅರ್ಪಿಸುತ್ತಿರುವ ಕರ್ಪೂರಾಹುತಿಯನ್ನು ಸ್ವೀಕರಿಸುವುದಕ್ಕೆ ಆಗಮಿಸು. ರಾಜನು ಅರ್ಪಿಸುವ ಇದನ್ನು ಸ್ವೀಕರಿಸು. ಇನ್ನು ಮುಂದೆ ಕಲಿಯುಗದಲ್ಲಿ ಇದು ದುರ್ಲಭ!" ಎಂದರು. ಆಗ ಇಂದ್ರನು ಪ್ರತ್ಯಕ್ಷನಾಗಿ ವ್ಯಾಸಮಹರ್ಷಿಗಳನ್ನು ಕುರಿತು "ಅದನ್ನು ಅಗ್ನಿಮುಖದಲ್ಲಿ ಅರ್ಪಿಸಿರಿ. ನನಗೆ ಅಕ್ಷಯವಾದ ತೃಪ್ತಿಯಾಗುವುದು. ಆಹುತಿದ್ರವ್ಯವನ್ನು ನೋಡಿದ್ದರಿಂದಲೇ ನನಗೆ ಸಂತುಷ್ಟಿಯಾಗಿದೆ. ಅದನ್ನು ಭುಜಿಸಿದರೆ ಸೌಖ್ಯವಾಗುವುದು" ಎಂದನು. ಜನಮೇಜಯ, ಆಗ ವಸಂತಋತುವಿನ ಚೈತ್ರಮಾಸದಲ್ಲಿ ಶುಕ್ಲಪಕ್ಷದ ದಶಮೀ ಗುರುವಾರವಾಗಿತ್ತು. ಆಶ್ಲೇಷಾನಕ್ಷತ್ರ ನಡೆಯುತ್ತಿತ್ತು. ವ್ಯಾಸರು 'ಇಂದ್ರಾಯ ಸ್ವಾಹಾ' ಎಂದು ವಿಧಿವತ್ತಾಗಿ ಆಹುತಿಯನ್ನು ಅಗ್ನಿಯಲ್ಲಿ ಹಾಕಿದರು. ಆಮೇಲೆ ಚಂದ್ರಾದಿ ದೇವತೆಗಳಿಗೂ ದಿಗ್ದೇವತೆಗಳಿಗೂ ಮಂತ್ರಪೂರ್ವಕವಾಗಿ ಕರ್ಪೂರದ ಆಹುತಿಗಳನ್ನು ಅರ್ಪಿಸಿದರು. ಚರಾಚರಾತ್ಮಕವಾದ ಜಗತ್ತೆಲ್ಲವೂ ತೃಪ್ತವಾಯಿತು. ಹೋಮಧೂಮದಿಂದ ಯುಧಿಷ್ಠಿರನು ಪವಿತ್ರನೂ ಸಂಪ್ರೀತನೂ ಆದನು. ಅವನು ಭೀಮನನ್ನು ಆಲಂಗಿಸಿ "ತಮ್ಮ, ದೈವಾನುಗ್ರಹದಿಂದ ಯಾಗವು ನೆರವೇರಿತು. ಯಜ್ಞಾಂತದಲ್ಲಿ ಅವಭೃಥಸ್ನಾನವನ್ನು ಮಾಡುವೆನು" ಎಂದನು.

ಆಮೇಲೆ ಶ್ರೀಕೃಷ್ಣನು ಋಷಿಗಳಿಂದ ಸಮೇತನಾಗಿ ಪತ್ನೀಸಹಿತನಾದ ಯುಧಿಷ್ಠಿರನಿಗೆ ಸ್ನಾನವನ್ನು ಮಾಡಿಸಿದನು. ಆಮೇಲೆ ಭೀಮಾದಿ ಬಂಧುಗಳಿಂದಲೂ ಭೂಪತಿಗಳಿಂದಲೂ ಸಮೇತನಾದ ಧರ್ಮರಾಜನಿಗೆ ಸೋಮಪಾನವನ್ನು ಮಾಡಿಸಿದನು. ಸಕಲರಿಗೂ

ಪುರೋಡಾಶವನ್ನು ಹಂಚಿ ಅವಶಿಷ್ಟವಾದ್ದನ್ನು ತಾನು ಭುಜಿಸಿದನು. ವಾದ್ಯಘೋಷಗಳು ನಡೆದವು. ಬಂದಿಗಳು ಜಯಕಾರಮಾಡಿದರು. ಗಾಯಕರು ಧರ್ಮರಾಜನನ್ನು ಹೊಗಳಿ ಹಾಡಿದರು. ದೇವಕಿಯೇ ಮೊದಲಾದ ಸುಮಂಗಲಿಯರು ಆರತಿ ಎತ್ತಿದರು. ಪೂರ್ಣಾಹುತಿಯನ್ನರ್ಪಿಸಿ ಯುಧಿಷ್ಠಿರಮಹಾರಾಜನು ಪೀಠದಲ್ಲಿ ಕುಳಿತನು. ಶ್ರೀಕೃಷ್ಣನು ಸ್ವತಃ ಆತನನ್ನು ಅಲಂಕರಿಸಿದನು. ಸ್ವರ್ಗದಲ್ಲಿ ದೇವತೆಗಳಿಂದ ಪರಿವೃತನಾದ ದೇವೇಂದ್ರನಂತೆ ಧರ್ಮರಾಜನು ಕಂಗೊಳಿಸಿದನು.

ಅನಂತರ ಧರ್ಮರಾಜನು ವಸ್ತ್ರಾಲಂಕಾರಾದಿಗಳಿಂದ ಶ್ರೀಕೃಷ್ಣನನ್ನು ಅರ್ಚಿಸಿ, ತನ್ನ ಸಕಲರಾಜ್ಯವನ್ನೂ ಆಚಾರ್ಯರಾದ ವ್ಯಾಸಮುನಿಗಳಿಗೆ ಸಂತೋಷದಿಂದ ವಿಧಿವತ್ತಾಗಿ ದಾನಮಾಡಿದನು. ಆಮೇಲೆ ವ್ಯಾಸರು ಆ ರಾಜ್ಯವನ್ನು ಧರ್ಮರಾಜನಿಗೆ ಅರ್ಪಿಸಿದರು. ರಾಜ್ಯದ ಮೂಲ್ಯವಾಗಿ ತೆಗೆದುಕೊಂಡ ಧನವನ್ನು ಅವರು ಬ್ರಾಹ್ಮಣರಿಗೂ ದೀನರಿಗೂ ಹಂಚಿಬಿಟ್ಟರು. ರತ್ನಗಳ ಒಂದು ಬೆಟ್ಟವನ್ನು ನಿರ್ಮಿಸಿ ಅದರ ಮೇಲೆ ಮೇಯುವಂತೆ ಕಾಣುವ ಒಂದು ಸುವರ್ಣವೃಷಭವನ್ನಿರಿಸಿ, ಅದನ್ನು ಧರ್ಮರಾಜನು ಬಕದಾಲ್ಭ್ಯ ಮುನಿಗಳಿಗೆ ದಾನಮಾಡಿದನು. ಒಂದು ರಥ, ಒಂದು ಆನೆ, ಹತ್ತು ಕುದುರೆಗಳು, ಒಂದು ಭಾರತೂಕದ ಚಿನ್ನ, ಸುವರ್ಣಭೂಷಿತಗಳಾದ ನೂರು ಹಸುಗಳು, ಒಂದು ಪ್ರಸ್ಥ ಅಳತೆಯ ಮುತ್ತುಗಳು, ಕಾರ್ಯದಕ್ಷರಾದ ನಾಲ್ವರು ಸೇವಕರು-ಇಷ್ಟನ್ನು ಒಬ್ಬೊಬ್ಬ ಋತ್ವಿಜನಿಗೂ ದ್ವಾರಪಾಲರಾದ ವಿಶ್ವಾಮಿತ್ರಾದಿ ಮುನಿಗಳಿಗೂ ಕೊಟ್ಟನು. ತೋರಿದಂತೆ ಇಚ್ಛಾದಾನಗಳನ್ನು ಇತರ ವಿಪ್ರರಿಗೆ ಕೊಟ್ಟನು. ಬಂದಿದ್ದ ಸಕಲ ಭೂಪಾಲರನ್ನೂ ಆದರಿಸಿ ಅವರಿಗೆ ಸಾವಿರಾರು ಆನೆಗಳನ್ನೂ ಕುದುರೆಗಳನ್ನೂ ಒಡವೆಗಳನ್ನೂ ಕೋಟಿಗಟ್ಟಲೆ ಸುವರ್ಣನಾಣ್ಯಗಳನ್ನೂ ಇತ್ತು ಸಂತೋಷಪಡಿಸಿದನು. ಯಾದವರಿಗೆ ಇನ್ನೂ ಅಧಿಕವಾಗಿ ಕೊಟ್ಟನು. ರುಕ್ಮಿಣೀ ಮೊದಲಾದ ಸ್ತ್ರೀಯರೆಲ್ಲರಿಗೂ ಬಗೆಬಗೆಯ ಒಡವೆಗಳನ್ನಿತ್ತು ಸಂಮಾನಿಸಿದನು. ತರುವಾಯ ಯುಧಿಷ್ಠಿರನು ಉತ್ತಮವಾದ ಪೀಠದಲ್ಲಿ ಶ್ರೀಕೃಷ್ಣನನ್ನು ಕುಳ್ಳಿರಿಸಿ ಯಜ್ಞಜನ್ಯವಾದ ಸಕಲ ಸುಕೃತವನ್ನೂ 'ಶ್ರೀಕೃಷ್ಣಾರ್ಪಣಮಸ್ತು' ಎಂದು ಸಮರ್ಪಿಸಿದನು. ವಾದ್ಯವು ಮೊಳಗಿತು. ಪುಷ್ಪವೃಷ್ಟಿಯು ಸುರಿಯಿತು. ಭೀಮಸೇನಾದಿ ಪಾಂಡವರೆಲ್ಲರೂ ಶ್ರೀಕೃಷ್ಣನ ಅನುಗ್ರಹದಿಂದ ಯಜ್ಞವು ಸಾಂಗವಾಗಿ ನೆರವೇರಿತು ಎಂದು ಹೊಗಳುತ್ತ ಹರ್ಷಿಸಿದರು. ಯೂಪಗಳಿಗೆ ಕಟ್ಟಲ್ಪಟ್ಟಿದ್ದ ಪಶುಗಳೆಲ್ಲವೂ ಮುಕ್ತವಾದವು. ಸಕಲರೂ ಶ್ರೀಕೃಷ್ಣನಿಂದಲೇ ಯಜ್ಞವು ಪೂರ್ಣವಾಯಿತೆಂದು ಅವನನ್ನು ಸ್ತುತಿಸಿದರು. ಜನಮೇಜಯ, ಈ ಯಜ್ಞಪ್ರಕರಣವನ್ನು ಕೇಳಿದವರು ಸಮಸ್ತಪಾತಕಗಳಿಂದಲೂ ಬಿಡುಗಡೆ ಹೊಂದುತ್ತಾರೆ. ಎಲ್ಲರಿಂದಲೂ ಸಂಮಾನಿತರಾಗಿ ದೀರ್ಘಕಾಲ ಬಾಳುತ್ತಾರೆ.

# ಕಲಿಧರ್ಮವರ್ಣನೆ

ಜೈಮಿನಿ ಮುನಿಗಳು "ಜನಮೇಜಯ, ಯಜ್ಞವು ಪೂರ್ಣವಾದ ಮೇಲೆ ಭೀಮಸೇನನು ಸಕಲಮುನಿಗಳಿಗೂ ರಾಜರಿಗೂ ಶ್ರೀಕೃಷ್ಣನಿಗೂ ಔತಣವನ್ನಿತ್ತು ಸತ್ಕರಿಸಿದನು" ಎಂದರು. ಆಗ ಜನಮೇಜಯನು "ಮುನಿಗಳೆ, ಅವರೆಲ್ಲರಿಗೂ ಭೀಮಸೇನನು ಯಾವ ರೀತಿಯಲ್ಲಿ ಔತಣವನ್ನಿತ್ತನು. ಅನ್ನಾದಿ ಭೋಜನ ದ್ರವ್ಯಗಳು ಹೇಗಿದ್ದವು? ಅದನ್ನು ತಿಳಿಯಲು ನನಗೆ ಕುತೂಹಲವಾಗಿದೆ" ಎಂದನು. ಜೈಮಿನಿಮುನಿಗಳು ಹೀಗೆಂದರು: ಮಹಾರಾಜ, ಕೇಳು. ಭೀಮಸೇನನು ಸತ್ಕರಿಸಿದ ವಿವರವನ್ನು ತಿಳಿಸುತ್ತೇನೆ. ಅಡಿಗೆಯೆಲ್ಲವೂ ಭೀಮನ ನೇತೃತ್ವದಲ್ಲಿ ಸಿದ್ಧವಾಗಿತ್ತು. ಸುವರ್ಣಭೂಷಿತವಾದ ಮಂಟಪದಲ್ಲಿ ಶ್ರೀಗಂಧದ ಮಣೆಗಳನ್ನಿಟ್ಟು ರತ್ನಗಂಬಳಿಯನ್ನು ಹೊದಿಸಿ ಕುಳಿತುಕೊಳ್ಳಲು ಏರ್ಪಡಿಸಲಾಗಿತ್ತು. ಆ ಪೀಠಗಳನ್ನು ರತ್ನಗಳಿಂದಲೂ ಹೂಗಳಿಂದಲೂ ಸಿಂಗರಿಸಲಾಗಿತ್ತು. ಒಬ್ಬೊಬ್ಬ ವಿಪ್ರನಿಗೂ ಒಂದು ಚಿನ್ನದ ತಟ್ಟೆಯನ್ನೂ ಅರುವತ್ತು ನಾಲ್ಕು ದೊನ್ನೆಗಳನ್ನೂ ಇಟ್ಟು ಇಕ್ಕೆಲಗಳಲ್ಲಿ ದೀಪವನ್ನು ಹಚ್ಚಲಾಗಿತ್ತು. ಎಲ್ಲೆಲ್ಲಿಯೂ ಕೃಷ್ಣಾಗರುಧೂಪದ ಸುಗಂಧವು ಹರಡಿತ್ತು. ಸುಗಂಧಿಯಾದ ಜಲದಿಂದ ಭೋಜನ ಪಾತ್ರೆಯನ್ನು ತೊಳೆಯಲಾಯಿತು. ಒಂದೊಂದು ಭೋಜನ ಪಾತ್ರೆಯ ಬಳಿಯಲ್ಲಿಯೂ ರತ್ನಕಮಂಡಲುವನ್ನು ಇಡಲಾಯಿತು. ಅನಂತರ ಭೀಮನು ರಸಮಯವಾದ ಪಾಯಸವನ್ನು ತಂದನು. ಪಾಯಸವು ಚಂದ್ರಮಂಡಲದಂತೆ ಶುಭ್ರವಾಗಿತ್ತು. ಪಾಯಸವನ್ನು ಬಡಿಸಿ ಮಲ್ಲಿಗೆಯ ಮೊಗ್ಗಿನಂತಹ ಅನ್ನವನ್ನು ಬಡಿಸಲಾಯಿತು. ನಾನಾಬಗೆಯ ಹೂ, ಎಲೆ, ಬೇರು, ಕಾಂಡ, ತೊಗಟೆ ಮೊದಲಾದವುಗಳಿಂದ ಭೀಮಸೇನನು ಪಲ್ಯ, ಚಟ್ನಿ ಮುಂತಾದ ವ್ಯಂಜನಗಳನ್ನು ತಯಾರಿಸಿದ್ದನು. ಅವೆಲ್ಲವನ್ನೂ ಕ್ರಮವಾಗಿ ಭೋಜನ ಪಾತ್ರೆಗಳಲ್ಲಿ ಬಡಿಸಿದರು. ಜನಮೇಜಯ, ಆಗ ಒಬ್ಬ ಮುನಿಯು ತನ್ನ ತಟ್ಟೆಯಲ್ಲಿ ಹಾಕಿದ ಪೂರಿಗಳನ್ನು ನೋಡಿ ಪಕ್ಕದಲ್ಲಿ ಕುಳಿತವನನ್ನು ಕುರಿತು "ಅಯ್ಯಾ, ಕಾಡಿನಲ್ಲಿ ವಾಸವಾಗಿರುವ ನಾನು ಈ ವಸ್ತುವನ್ನು ನೋಡಿರಲಿಲ್ಲ. ಇದು ಏನು?" ಎಂದು ಕೇಳಿದನು. ಇನ್ನೊಬ್ಬನು ತಾನು ಬುದ್ಧಿವಂತನೆಂದು ತಿಳಿದು "ಭೂಮಿಯಲ್ಲಿ ಚಂದ್ರನ ಒಂದು ತುಂಡು ಬಿದ್ದು ನೂರಾರು ಹೋಳಾಗಿದೆ. ಅದೇ ಇದು" ಎಂದು ತಿಳಿಸಿದನು! ಅಷ್ಟರಲ್ಲಿ ಫೇಣಿಗಳು ಬಂದವು. ವಾಯುಭಕ್ಷನಾದ ಒಬ್ಬ ಮುನಿಯು ಅವನ್ನು ನೋಡಿ "ಓಹೋ! ಧರ್ಮರಾಜನು ಬಿಳಿಯ ಗರಿಯುಳ್ಳ ಹಂಸಗಳನ್ನು ಸಾಕಿದ್ದಾನೆ" ಎಂದುಕೊಂಡನು! ಇನ್ನೊಬ್ಬ ಮುನಿಯು ಹೂರಣದಿಂದ ಮಾಡಿದ ದುಂಡಾಕೃತಿಯ ಕಡಬುಗಳನ್ನು ನೋಡಿ "ನಾನು ಹೇಳುತ್ತೇನೆ, ಇವು ಈ ದೇಶದಲ್ಲಿ ಬೆಳೆಯುವ ಅತ್ತಿ ಹಣ್ಣುಗಳು" ಎಂದು ನಿರ್ಣಯಿಸಿದನು! ತೊವ್ವೆಯಿಂದ ಸಮ್ಮಿಶ್ರವಾದ ಮಲ್ಲಿಗೆ ಹೂವಿನಂತಹ ಅನ್ನವನ್ನು ನೋಡಿ ಒಬ್ಬನು ಕೊಡಸಿನ ಹೂವೆಂದೂ ಇನ್ನೊಬ್ಬನು ಹೊಂಗೆಯ ಹೂವೆಂದೂ ಮತ್ತೊಬ್ಬನು ಪಕ್ವವಾದ ತಾವರೆಯ ಬೀಜವೆಂದೂ ಹೇಳಿದನು! ಹೊಂಬಣ್ಣದ ವಡೆಯನ್ನು ನೋಡಿ ಒಬ್ಬ ಮುನಿಯು 'ಇದೇನು ಸೂರ್ಯನ ರಥದ ಚಕ್ರವೆ!' ಎಂದು ಆಶ್ಚರ್ಯಪಟ್ಟನು. ಕೆಲವರು ದ್ರಾಕ್ಷೆಗಳ ರಸವನ್ನೂ

ಕೆಲವರು ಮಾವಿನ ಹಣ್ಣುಗಳ ರಸವನ್ನೂ ಕುಡಿದರು. ಕೆಲವರು ತುಪ್ಪದಲ್ಲಿ ಅದ್ದಿದ ಬಾಳೆಹಣ್ಣನ್ನು ಸಕ್ಕರೆಯಲ್ಲಿ ಹೊರಳಿಸಿ ತಿಂದರು. ಒಬ್ಬ ಮುನಿಶಿಷ್ಯನು ಸಿಪ್ಪೆಯನ್ನು ತೆಗೆಯದೆ ಇಡಿಯ ಬಾಳೆಹಣ್ಣನ್ನು ಬಾಯಲ್ಲಿ ಎಸೆದುಕೊಂಡನು! ಒಬ್ಬ ಬ್ರಾಹ್ಮಣನು ಮಂಡಿಗೆಯನ್ನು ಸಕ್ಕರೆ ತುಪ್ಪಗಳನ್ನು ಹಾಕಿ ಮಡಿಸಿ ಬಾಯಲ್ಲಿಟ್ಟು ಚಪ್ಪರಿಸಿ ಆನಂದಿಸಿದನು. ಇನ್ನೊಬ್ಬನು ಲಾಡನ್ನು ಚಪ್ಪರಿಸುತ್ತ 'ಈ ಸುಖಕ್ಕೆ ಮೋಕ್ಷ ಸುಖವು ಸಾಟಿಯಾದೀತೆ!' ಎಂದು ಉದ್ಗರಿಸಿದನು. ಈ ಬಗೆಯಲ್ಲಿ, ಜನಮೇಜಯ, ಭೀಮನು ಕ್ಷತ್ರಿಯಾದಿಗಳಿಗೂ ಸಂತರ್ಪಣೆಯನ್ನಿತ್ತು ಸಂತೋಷಪಡಿಸಿದನು. ಆ ಯಜ್ಞಮಹೋತ್ಸವದಲ್ಲಿ ಸಕಲರೂ ತಿಂದು ತೇಗಿ ಆನಂದಿಸಿದರು. ಅನಂತರ ವಿಪ್ರರಿಗೆ ಗಂಧವನ್ನು ಹಚ್ಚಿ ಪಚ್ಚಕರ್ಪೂರ ಸಹಿತವಾದ ತಾಂಬೂಲವನ್ನು ಕೊಡಲಾಯಿತು. ಅವರು 'ವನದಲ್ಲಿ ನಾವು ಒಣ ಎಲೆಗಳನ್ನು ಮೆಲ್ಲುತ್ತಿದ್ದೆವು. ಧರ್ಮರಾಜನು ತಾಂಬೂಲಚರ್ವಣದ ಸುಖವನ್ನು ತೋರಿಸಿಕೊಟ್ಟನು' ಎಂದು ಮಾತಾಡಿಕೊಂಡರು.

ಈ ಪ್ರಕಾರದಲ್ಲಿ ಭೋಜನವಾದ ಮೇಲೆ ಧರ್ಮರಾಜನು ಸಭಾಮಧ್ಯದಲ್ಲಿ ಬ್ರಾಹ್ಮಣರಿಂದಲೂ ಭೂಪಾಲರಿಂದಲೂ ಪರಿವೃತನಾಗಿ ಕುಳಿತನು. ಬಳಿಯಲ್ಲಿ ಶ್ರೀಕೃಷ್ಣನು ಉಪವಿಷ್ಟನಾಗಿದ್ದನು. ಆ ಸಮಯದಲ್ಲಿ ಇಬ್ಬರು ಬ್ರಾಹ್ಮಣರು ಅನ್ಯೋನ್ಯವಾಗಿ ವಾದಿಸುತ್ತ ರಾಜಸಭೆಗೆ ಬಂದು ಧರ್ಮರಾಜನನ್ನು ನೋಡಿ "ಮಹಾರಾಜ, ನಮ್ಮೀರ್ವರಲ್ಲಿ ಒಂದು ವಿವಾದ ಉಂಟಾಗಿದೆ. ಅದನ್ನು ಪರಿಹರಿಸಿಕೊಡು" ಎಂದು ಕೇಳಿದರು. ಧರ್ಮರಾಜನು "ವಿಪ್ರೋತ್ತಮರೆ, ಈ ಸಭೆಯಲ್ಲಿ ಬಕದಾಲ್ಭ್ಯ, ವಸಿಷ್ಠ, ಅತ್ರಿ ಮುಂತಾದ ಮಹಾತ್ಮರಿರುವಾಗ ವಿವಾದವೆಂದರೇನು? ನಿಮ್ಮ ವಿಚಾರವನ್ನು ಒಬ್ಬೊಬ್ಬರಾಗಿ ಸ್ಪಷ್ಟಪಡಿಸಿರಿ" ಎಂದನು. ಆಗ ಒಬ್ಬನು "ಮಹಾರಾಜ, ನಾನು ಈ ವಿಪ್ರನಿಂದ ಒಂದು ಗದ್ದೆಯನ್ನು ಕೊಂಡೆನು. ಅದನ್ನು ಉಳುತ್ತಿರುವಾಗ ನೆಲದಲ್ಲಿ ಒಂದು ನಿಧಿ ಸಿಕ್ಕಿತು. ಆ ನಿಧಿಯನ್ನು ತೆಗೆದುಕೊಳ್ಳಲು ನನಗೆ ಅಧಿಕಾರವೆಲ್ಲಿದೆ? ಗದ್ದೆಯಲ್ಲಿ ಬೆಳೆದ ಧಾನ್ಯವು ಮಾತ್ರವೇ ನನ್ನದು. ನಿಧಿಯನ್ನು ನಾನು ತೆಗೆದುಕೊಳ್ಳಬೇಕೆಂದು ಈತನು ಒತ್ತಾಯ ಪಡಿಸುತ್ತಿದ್ದಾನೆ. ನಾನು ಅದನ್ನು ತೆಗೆದುಕೊಳ್ಳಲಾರೆ. ಅದು ನನ್ನದಲ್ಲ. ಆದರೆ ಈ ವಿಪ್ರನೂ ಇವನ ಬಂಧುಗಳೂ ಬಂದು ನಾನೇ ನಿಧಿಯನ್ನು ತೆಗೆದುಕೊಳ್ಳಬೇಕೆಂದು ಪೀಡಿಸುತ್ತಿದ್ದಾರೆ. ಈ ಪೀಡೆಯಿಂದ ನನ್ನನ್ನು ತಪ್ಪಿಸು!" ಎಂದನು. ಆಗ ಯುಧಿಷ್ಠಿರನು ಇನ್ನೊಬ್ಬ ವಿಪ್ರನನ್ನು ನೋಡಿ "ಪೂಜ್ಯನೆ, ಈತನನ್ನು ಏಕೆ ಪೀಡಿಸುತ್ತೀಯೆ? ಸತ್ಯವನ್ನು ಹೇಳು. ನೆಲದಲ್ಲಿದ್ದ ಧನವನ್ನು ನೀನೇನೂ ಆತನಿಗೆ ಕೊಡಲಿಲ್ಲವಷ್ಟೆ. ಹಾಗಾದಮೇಲೆ ಅದನ್ನು ನೀನು ತೆಗೆದುಕೊಳ್ಳಬೇಕು" ಎಂದನು. ಅದಕ್ಕೆ ಆ ಬ್ರಾಹ್ಮಣನು "ಮಹಾರಾಜ, ಆ ಗದ್ದೆಯನ್ನು ಪೂರ್ತಿಯಾಗಿ ಈತನಿಗೆ ಒಪ್ಪಿಸಿಬಿಟ್ಟಿದ್ದೇನೆ. ಅದರಲ್ಲಿ ಏನು ದೊರಕಿದರೂ ಅದೆಲ್ಲವೂ ಅವನಿಗೇ ಸೇರಬೇಕಲ್ಲದೆ, ನನಗಲ್ಲ" ಎಂದನು. ಈ ವಿವಾದವನ್ನು ಕೇಳುತ್ತಿದ್ದ ಶ್ರೀಕೃಷ್ಣನು ಮುಗುಳುನಗೆಯಿಂದ "ಬ್ರಾಹ್ಮಣೋತ್ತಮರೆ, ಮೂರು ತಿಂಗಳವರೆಗೆ ನೀವು ತಟಸ್ಥರಾಗಿ ಸುಮ್ಮನಿರವುದು ಉತ್ತಮ" ಎಂದನು. ಆ ವಿಪ್ರರು ಶ್ರೀಕೃಷ್ಣನ ಮಾತಿಗೆ ಒಪ್ಪಿ ಆ ನಿಧಿಯನ್ನು

ರಾಜನ ವಶಕ್ಕೆ ಒಪ್ಪಿಸಿ ಹೊರಟು ಹೋದರು. ಆಮೇಲೆ ಧರ್ಮರಾಜನು "ಶ್ರೀಕೃಷ್ಣ, ಈಗಲೇ ಏಕೆ ತೀರ್ಪನ್ನು ಹೇಳಲಿಲ್ಲ? ನಿನ್ನ ಮಾತಿನಿಂದ ನಮಗೆ ವಿಸ್ಮಯವಾಗಿದೆ" ಎಂದು ಕೇಳಿದನು. ಶ್ರೀಕೃಷ್ಣನು ಹೀಗೆಂದನು: ಧರ್ಮನಂದನ, ಈಗ ಋಷಿಗಳೂ ರಾಜರೂ ಸಂತೋಷದಿಂದ ಕುಳಿತಿದ್ದಾರೆ. ಸಕಲರೂ ಆನಂದತುಂದಿಲರಾಗಿದ್ದಾರೆ. ಈ ಸಮಯದಲ್ಲಿ ವಿವಾದವನ್ನೇಕೆ ಎಬ್ಬಿಸಬೇಕು? ಇಂದಿಗೆ ಮೂರನೆಯ ತಿಂಗಳಲ್ಲಿ ಘೋರವಾದ ಕಲಿಯುಗದ ಆರಂಭವಾಗುವುದು. ಆಗ ಈ ಬ್ರಾಹ್ಮಣರೇ ಕಲಿಪ್ರಭಾವದಿಂದ 'ಧನವು ನನ್ನದು, ಧನವು ನನ್ನದು' ಎಂದು ಜಗಳವಾಡಿ, ಮುಷ್ಟಾಮುಷ್ಟಿ ಕೇಶಾಕೇಶಿ ನಖಾನಖಿ ಹೊಡೆದಾಡಿ ನಿನ್ನ ಬಳಿಗೆ ಬರುತ್ತಾರೆ. ಆಗ ನೀನು ಈ ಧನವನ್ನು ಎರಡು ಭಾಗಮಾಡಿ ಅವರಿಗೆ ಕೊಟ್ಟು ವಿವಾದವನ್ನು ಪರಿಹರಿಸುವೆಯೆಂದು ನನಗೆ ತೋರುತ್ತದೆ! ಕಲಿಯುಗದಲ್ಲಿ ವಿಪ್ರರು ಆಚಾರವನ್ನೂ ವೇದಾಧ್ಯಯನವನ್ನೂ ವರ್ಜಿಸುವರು. ರಾಜರು ಧರ್ಮಹೀನರಾಗಿ ಪ್ರಜೆಗಳನ್ನು ಪೀಡಿಸುವರು. ಜನರು ಅಧರ್ಮಾಸಕ್ತರೂ ಧರ್ಮದ್ವೇಷಿಗಳೂ ಅಸೂಯಾ ಸ್ವಭಾವದವರೂ ಆಗಿರುತ್ತಾರೆ. ಜೂಜು ಹೆಂಡಗಳಲ್ಲಿ ನಿರತರಾಗಿ ಒಂದಲ್ಲ ಒಂದು ಚಟವನ್ನು ಕಲಿತಿರುತ್ತಾರೆ. ದೇವಪಿತೃಕಾರ್ಯಗಳಿಗಾಗಲಿ ಪತಿವ್ರತೆಯರಾದ ಪತ್ನಿಯರನ್ನು ಪಾಲಿಸುವುದರಲ್ಲಾಗಲಿ ಬ್ರಾಹ್ಮಣ ಕಾರ್ಯದಲ್ಲಾಗಲಿ ಅಲ್ಪವಾಗಿಯೇ ವೆಚ್ಚಮಾಡುವರು. ಗಣಿಕೆಯರ ಮನೆಯಲ್ಲಿ ವಿನೋದಿಸುವರು. ದ್ಯೂತಾದಿವ್ಯಸನಗಳಿಗೆ ಮಾತ್ರ ವಿಶೇಷವಾಗಿ ವೆಚ್ಚ ಮಾಡುವರು. ತಾಯಿಗೆ ಹರಕು ಸೀರೆಯನ್ನು ಕೊಟ್ಟು ಸೂಳೆಗೂ ವ್ಯಭಿಚಾರಿಣಿಗೂ ರೇಷ್ಮೆಯ ಸೀರೆಗಳನ್ನು ತಂದು ಕೊಡುವರು. ಶಿವದೇವಸ್ಥಾನಗಳಿಗೆ ಹೋಗುವಾಗ ಧತ್ತೂರದ ಹೂವನ್ನೋ ಕರಿವೀರದ ಹೂವನ್ನೋ ಇನ್ನು ಯಾವುದಾದರೂ ಮುಳ್ಳಿನ ಕಾಡುಹೂವನ್ನೋ ಒಯ್ಯುವರು. ತಾವರೆ ನೈದಿಲೆಗಳ ಮಾಲೆಯನ್ನೂ ಕರ್ಪೂರಚಂದನಗಳನ್ನೂ ಸೂಳೆಯರ ಮನೆಗೆ ಒಯ್ಯುವರು. ಧರ್ಮರಾಜ, ಕಲಿಯುಗದಲ್ಲಿ ತಂದೆ-ತಾಯಿಗಳನ್ನು ದೂರಮಾಡಿ, ಹೆಂಡತಿಯರನ್ನು ಪರಿಚಾರಕರಂತೆ ಸೇವಿಸುತ್ತಾರೆ. ಜನರು ತಾಯಿಯನ್ನು ಹೊಡೆಯುವರು, ಹೆಂಡತಿಯರನ್ನು ಲಾಲಿಸುವರು. ಮಹಾರಾಜ, ಸೊಸೆಯರು ಅತ್ತೆ-ಮಾವಂದಿರಿಗೆ ಎದೆಯನ್ನು ಚುಚ್ಚುವ ಕೆಟ್ಟ ಮಾತುಗಳನ್ನಾಡುವರು. ನಾಲ್ಕು ವರ್ಣದ ಜನರೂ ದೇವಬ್ರಾಹ್ಮಣರಲ್ಲಿ ವಿಶ್ವಾಸವನ್ನಿಡದೆ ಕರ್ಮಭ್ರಷ್ಟರಾಗುವರು. ಸ್ವಧರ್ಮವನ್ನು ತ್ಯಜಿಸಿ ಪರಧರ್ಮವನ್ನು ಅವಲಂಬಿಸುವರು. ಈ ರೀತಿಯಲ್ಲಿ ಶ್ರೀಕೃಷ್ಣನು ಕಲಿಯುಗದ ಭೀಕರ ವರ್ತನೆಗಳನ್ನು ಹೇಳಿದನು. ಅನಂತರ ಶ್ರೀಕೃಷ್ಣನೂ ಪಾಂಡವರೂ ವಿವಿಧ ಕಥಾಲಾಪಗಳಲ್ಲಿ ತೊಡಗಿದರು.

# ನಕುಲೋಪಾಖ್ಯಾನ

ಜನಮೇಜಯ, ಅಶ್ವಮೇಧವು ಸಂಪೂರ್ಣವಾದ ಮೇಲೆ ಒಂದು ಆಶ್ಚರ್ಯಕರವಾದ ವೃತ್ತಾಂತವು ನಡೆಯಿತು. ಅದನ್ನು ಹೇಳುವೆನು, ಕೇಳು : ಬ್ರಾಹ್ಮಣೋತ್ತಮರೂ ಬಂಧು ಬಳಗದವರೂ ಬಡವರು ಕುರುಡರು ಮೊದಲಾದ ಸಕಲ ಜನರೂ ಸಂತೃಪ್ತರಾಗಲು ಎಲ್ಲೆಲ್ಲಿಯೂ ಹರ್ಷೋದ್ಗಾರಗಳುಂಟಾದವು. ಧರ್ಮರಾಜನ ಶಿರಸ್ಸಿನ ಮೇಲೆ ಹೂವಿನ ಮಳೆ ಸುರಿಯಿತು. ಆಗ ಧರ್ಮಪುತ್ರನಾದ ಯುಧಿಷ್ಠಿರನಿಗೆ, ತಾನು ಲೋಕೋತ್ತರವಾದ ಮಹಾಕಾರ್ಯವನ್ನೆಸಗಿದೆನೆಂದು ಗರ್ವ ಉಂಟಾಯಿತು. ಆ ಸಮಯದಲ್ಲಿ ಒಂದಾನೊಂದು ನಕುಲವು (ಮುಂಗಸಿ) ಬಿಲದಿಂದ ಹೊರಬಂದಿತು. ಅದರ ಒಂದು ಪಾರ್ಶ್ವವಾದ ಶಿರೋಭಾಗವು ಸುವರ್ಣಮಯವಾಗಿತ್ತು. ಆ ಮುಂಗಸಿಯು ಸಿಡಿಲು ಹೊಡೆದಂತೆ ಒಂದು ಸಲ ಗರ್ಜಿಸಲು ನೆರೆದಿದ್ದ ಸಭಾಸದರು ಭಯಗ್ರಸ್ತರಾದರು. ಅದು ಔದ್ಧತ್ಯದಿಂದ ಮುಂದೆ ಬಂದು ಮಾನುಷವಾಣಿಯಿಂದ "ಎಲೈ ಯುಧಿಷ್ಠಿರ, ಹಿಂದೆ ಕುರುಕ್ಷೇತ್ರದಲ್ಲಿ ಉಂಛವೃತ್ತಿಯಿಂದ ಜೀವಿಸುತ್ತಿದ್ದ ಉದಾರಿಯಾದ ಬ್ರಾಹ್ಮಣನೊಬ್ಬನ ಒಂದು ಸೇರು ಹಿಟ್ಟಿನ ಯೋಗ್ಯತೆಯೂ ನಿನ್ನ ಯಜ್ಞಕ್ಕೆ ಇಲ್ಲ!" ಎಂದು ಘೋಷಿಸಿತು. ಸಭೆಯಲ್ಲಿದ್ದ ವಿಪ್ರರಿಗೆ ಅತ್ಯಾಶ್ಚರ್ಯವಾಯಿತು. ಅವರು ಮುಂಗಸಿಯ ಬಳಿಗೆ ಬಂದು "ಎಲೈ, ಇಲ್ಲಿಗೆ ನೀನು ಎಲ್ಲಿಂದ ಬಂದೆ? ನೀನಿರುವ ಬಿಲ ಯಾವುದು? ನಿನ್ನ ವಿದ್ಯಾರ್ಹತೆಗಳೇನು? ನಮ್ಮ ಯಜ್ಞವನ್ನು ಹಳಿಯುತ್ತಿರುವೆಯಲ್ಲ, ನಿನ್ನ ಮಾತನ್ನು ಹೇಗೆ ನಂಬೋಣ? ಯಜ್ಞವಿದ್ಯೆಯಲ್ಲಿ ನಿಪುಣರಾದ ವೈದಿಕರು ಶಾಸ್ತ್ರೋಕ್ತವಾದ ವಿಧಾನದಲ್ಲಿ ಈ ಯಾಗವನ್ನು ನಡೆಸಿದ್ದಾರೆ. ಯಾವ ನ್ಯೂನತೆಯೂ ನಡೆದಿಲ್ಲ. ಪೂಜಾರ್ಹರಾದವರನ್ನು ವಿಧಿವತ್ತಾಗಿ ಪೂಜಿಸಲಾಗಿದೆ. ಮಂತ್ರಪೂರ್ವಕವಾಗಿ ಹವಿಸ್ಸನ್ನು ಅಗ್ನಿಯಲ್ಲಿ ಅರ್ಪಿಸಿದ್ದೇವೆ. ಮಾತ್ಸರ್ಯವಿಲ್ಲದೆ ಯಥೇಷ್ಟವಾಗಿ ದಾನಕಾರ್ಯಗಳು ನಡೆದಿವೆ. ವಿವಿಧದಾನಗಳಿಂದ ಬ್ರಾಹ್ಮಣೋತ್ತಮರೆಲ್ಲರೂ ಸಂತೃಪ್ತರಾಗಿದ್ದಾರೆ. ಯುದ್ಧದಿಂದ ಕ್ಷತ್ರಿಯರನ್ನೂ ಶ್ರಾದ್ಧಗಳಿಂದ ಪಿತೃಗಳನ್ನೂ ಪಾಲನೆಯಿಂದ ವೈಶ್ಯರನ್ನೂ ಇಷ್ಟಾರ್ಥವನ್ನು ಸಲ್ಲಿಸುವುದರಿಂದ ಶೂದ್ರರನ್ನೂ ಸಂತೋಷಗೊಳಿಸಲಾಗಿದೆ. ಸ್ತ್ರೀಯರನ್ನೂ ಸಹ ಆಭರಣಾದಿಗಳಿಂದ ಸಂತೃಪ್ತರನ್ನಾಗಿ ಮಾಡಲಾಗಿದೆ. ಭಿಕ್ಷುಕರೇ ಮೊದಲಾದ ಸಾಮಾನ್ಯ ಜನರೂ ಸಹ ಧರ್ಮರಾಜನ ಕಾರುಣ್ಯ, ದಾನ, ಶುಭವಚನಗಳಿಂದ ಸಂತುಷ್ಟರಾಗಿದ್ದಾರೆ. ನಮ್ಮ ಮಹಾರಾಜನ ಹೃದಯ ಶುದ್ಧಿಯನ್ನು ಕಂಡು ಬಂಧುಬಳಗದವರೆಲ್ಲರೂ ಆನಂದಿಸಿದ್ದಾರೆ. ಪವಿತ್ರವಾದ ಹವಿರ್ದಾನಗಳಿಂದ ದೇವತೆಗಳೂ ಅಭಯದಾನದಿಂದ ಶರಣಾರ್ಥಿಗಳೂ ಸಂಪ್ರೀತರಾಗಿದ್ದಾರೆ. ಹೀಗಿರುವಾಗ, ನೀನು ಹೇಳುವ ಆ ಬ್ರಾಹ್ಮಣನ ಪುಣ್ಯಕಾರ್ಯಕ್ಕಿಂತ ಈ ಅಶ್ವಮೇಧವು ಯಾವವಿಧದಲ್ಲಿ ನ್ಯೂನವಾಯಿತು? ಹೇಳು. ನೀನು ದಿವ್ಯರೂಪವನ್ನು ಧರಿಸಿದ್ದೀಯೆ, ಪ್ರಾಜ್ಞನಾಗಿದ್ದೀಯೆ. ನಮ್ಮೆಲ್ಲರಿಗೂ ವಿಶ್ವಾಸವು ಹುಟ್ಟುವಂತೆ ಉತ್ತರವನ್ನು ಹೇಳು" ಎಂದರು.

ಜನಮೇಜಯ, ಆಗ ಮುಂಗಸಿಯು ನಕ್ಕು ಹೀಗೆಂದಿತು: "ಎಲೈ ದ್ವಿಜರೆ, ನಾನು ಗರ್ವದಿಂದ ಸುಳ್ಳು ಮಾತನ್ನು ನುಡಿಯಲಿಲ್ಲ. ನಾನು ಹೇಳಿದ್ದೇನು? 'ಹಿಂದೆ ಕುರುಕ್ಷೇತ್ರದಲ್ಲಿ

ಉಂಛವೃತ್ತಿಯಿಂದ ಜೀವಿಸುತ್ತಿದ್ದ ಉದಾರಿಯಾದ ಬ್ರಾಹ್ಮಣನೊಬ್ಬನ ಒಂದು ಸೇರು ಹಿಟ್ಟಿನ ಯೋಗ್ಯತೆಯೂ ನಿನ್ನ ಯಜ್ಞಕ್ಕೆ ಇಲ್ಲ' ಎಂದು ಯುಧಿಷ್ಠಿರನಿಗೆ ಹೇಳಿದ್ದೇನೆ! ಇದನ್ನು ನೀವು ಕೇಳಿದ್ದೀರಿ. ಇದು ಹೇಗೆಂಬುದನ್ನು ವಿವರಿಸುತ್ತೇನೆ. ಒಂದು ಅದ್ಭುತ ವೃತ್ತಾಂತವನ್ನು ನಾನು ಕಣ್ಣಾರೆ ಕಂಡು ಅನುಭವಿಸಿದ್ದೇನೆ. ಏಕಾಗ್ರಚಿತ್ತದಿಂದ ಕೇಳಿರಿ: ಒಬ್ಬ ಬ್ರಾಹ್ಮಣನು ತನ್ನ ಪತ್ನಿ, ಮಗ, ಸೊಸೆಯರೊಂದಿಗೆ ತಪಸ್ಸಿನಲ್ಲಿ ನಿರತನಾಗಿದ್ದನು. ತಾನಾಗಿ ಬಿದ್ದ ಕಾಳುಗಳನ್ನು ಆರಿಸಿ ತಂದು ಉಂಛವೃತ್ತಿಯಿಂದ ಅವರು ಜೀವಿಸುತ್ತಿದ್ದರು. ವೃದ್ಧನಾದ ಆ ಬ್ರಾಹ್ಮಣನು ಧರ್ಮಾತ್ಮನೂ ಜಿತೇಂದ್ರಿಯನೂ ಆಗಿದ್ದನು. ಉಂಛವೃತ್ತಿಯಿಂದ ತಂದ ಧಾನ್ಯವನ್ನು ತಿಂದು ಉಳಿದ ಕಾಲವನ್ನು ಕಠೋರವಾದ ತಪಸ್ಸಿನಲ್ಲಿ ಕಳೆಯುತ್ತಿದ್ದನು. ಹೀಗಿರುವಾಗ ಆ ಪ್ರದೇಶದಲ್ಲಿ ದಾರುಣವಾದ ಬರಗಾಲವು ಸಂಭವಿಸಿತು. ಸಸ್ಯಗಳು ಬೆಳೆಯಲಿಲ್ಲ. ಹೀಗಾಗಿ ಆ ಕುಟುಂಬಕ್ಕೆ ಆಹಾರವು ದೊರೆಯುವುದು ಕಷ್ಟವಾಯಿತು. ಆದರೂ ಹಸಿವಿನಿಂದ ನರಳುತ್ತಲೇ ಆ ಕುಟುಂಬವು ತಪಸ್ಸಿನಲ್ಲಿ ನಿರತವಾಗಿತ್ತು. ಒಂದು ದಿನ ಶುಕ್ಲಪಕ್ಷದಲ್ಲಿ ಸೂರ್ಯನ ತಾಪವು ತೀವ್ರವಾಗಿರಲು, ಆ ಬ್ರಾಹ್ಮಣನಿಗೆ ಆಹಾರವೇ ದೊರೆಯಲಿಲ್ಲ. ಕುಡಿಯುವಷ್ಟು ನೀರು ಸಹ ಸಿಗಲಿಲ್ಲ. ಆದರೂ ವಿಪ್ರನು ತಪೋನಿರತನಾಗಿದ್ದನು. ಆ ದಿನ ಅಪರಾಹ್ಣದಲ್ಲಿ ಒಂದು ಸೇರಿನಷ್ಟು ಗೋಧಿ ದೊರಕಿತು. ಅದನ್ನು ಹಿಟ್ಟುಮಾಡಿದರು. ಆಹ್ನಿಕಜಪಾದಿಗಳನ್ನು ಮುಗಿಸಿ ವಿಧಿವತ್ತಾಗಿ ವೈಶ್ವದೇವವನ್ನು ನಡೆಸಿ, ಆ ಹಿಟ್ಟನ್ನು ನಾಲ್ವರೂ ಹಂಚಿಕೊಂಡರು. ಅಷ್ಟರಲ್ಲಿ ಒಬ್ಬ ಬ್ರಾಹ್ಮಣನು ಅತಿಥಿಯಾಗಿ ಅವರ ಗುಡಿಸಲಿಗೆ ಬಂದನು. ಅತಿಥಿಯನ್ನು ನೋಡಿ ವೃದ್ಧಬ್ರಾಹ್ಮಣನಿಗೆ ಬಹಳ ಆನಂದವಾಯಿತು. ಅವನು ಅತಿಥಿಯನ್ನು ವಿಧಿವತ್ತಾಗಿ ಸ್ವಾಗತಿಸಿ ಮಧುರವಾದ ನುಡಿಯಿಂದ "ದ್ವಿಜೋತ್ತಮ, ನಿನಗೆ ಸ್ವಾಗತವನ್ನು ಬಯಸುತ್ತೇನೆ. ಈ ಗುಡಿಸಲನ್ನು ಅಲಂಕರಿಸು. ದಯವಿಟ್ಟು ಒಳಗೆ ಬಾ. ದಾರಿಯನ್ನು ನಡೆದು ಬಳಲಿದ ನಿನ್ನಂತಹ ಅತಿಥಿಗಳು ಯಾವ ಗೃಹಸ್ಥರ ಮನೆಗಳಿಗೆ ಬಂದು ವಿಶ್ರಮಿಸುವರೋ ಅವೇ ಮನೆಗಳು. ಆಹಾ! ಯಾರು ಅತಿಥಿಗಳನ್ನು ಸತ್ಕರಿಸುವರೋ ಅವರು ಬಡವರಾದರೂ ಭಾಗ್ಯಶಾಲಿಗಳು. ಸಜ್ಜನರಾದ ಯಾರ ಮನೆಯಲ್ಲಿಯೂ ಹುಲ್ಲಿನ ಚಾಪೆ, ನೆಲ, ನೀರು, ಒಳ್ಳೆಯ ಆದರದ ಮಾತು-ಈ ನಾಲ್ಕಕ್ಕೆ ಎಂದಿಗೂ ಕೊರತೆ ಇರುವುದಿಲ್ಲ. ಗೃಹಸ್ಥನಾದವನು ದುಃಖಿತನಾದವನಿಗೆ ಆಶ್ರಯವನ್ನೂ ದಾರಿನಡೆದು ಬಳಲಿದವನಿಗೆ ಆಸನವನ್ನೂ ಬಾಯಾರಿದವನಿಗೆ ನೀರನ್ನೂ ಹಸಿದವನಿಗೆ ಭೋಜನವನ್ನೂ ಅವಶ್ಯವಾಗಿ ನೀಡಬೇಕು. ಅತಿಥಿಯನ್ನು ಕಣ್ಣೆತ್ತಿ ನೋಡಬೇಕು. ಅವನಿಗೆ ಮನಸ್ಸನ್ನರ್ಪಿಸಬೇಕು, ಆದರದ ಮಾತನ್ನಾಡಬೇಕು. ಆತನನ್ನು ಎದ್ದುನಿಂತು ಸ್ವಾಗತಿಸಿ ಅರ್ಚಿಸಿ ಕಳಿಸಿಕೊಡಬೇಕು" ಎಂದು ಹೇಳಿದನು. ಆಮೇಲೆ ಆ ಧರ್ಮಾತ್ಮನು ಅತಿಥಿಯಾದ ವಿಪ್ರನನ್ನು ಒಳಗೆ ಕರೆದುಕೊಂಡು ಹೋಗಿ ಪೂಜಿಸಿ ತನ್ನ ಪಾಲಿನ ಹಿಟ್ಟನ್ನು ಸಂತೋಷದಿಂದ ಭೋಜನಕ್ಕಾಗಿ ಅರ್ಪಿಸಿದನು. ಅತಿಥಿಯು ಅದನ್ನು ಭುಂಜಿಸಿದನು. ಆದರೆ ಅಷ್ಟರಿಂದ ತೃಪ್ತಿಯಾಗಲಿಲ್ಲ. ಆ ಬ್ರಾಹ್ಮಣನ ಪತ್ನಿಯು ವೃದ್ಧೆ. ಹಸಿವಿನಿಂದ ಬಳಲಿದ್ದಳು. ತಪಸ್ಸನ್ನಾಚರಿಸಿ ದಣಿದಿದ್ದಳು. ಅವಳ ಮೈಯಲ್ಲಿ

ಚರ್ಮಮೂಳೆಗಳು ಮಾತ್ರ ಇದ್ದವು. ಕೈಕಾಲುಗಳು ನಡುಗುತ್ತಿದ್ದವು. ಆ ಬ್ರಾಹ್ಮಣಿಯು ಪತಿಯನ್ನು ಕುರಿತು "ಸ್ವಾಮಿ, ನನ್ನ ಪಾಲಿನ ಹಿಟ್ಟನ್ನು ಆ ಅತಿಥಿಗೆ ಬಡಿಸು. ಸ್ವಲ್ಪವೂ ವಿಚಾರಿಸಬೇಡ. ಮನೆಗೆ ಬಂದ ಅತಿಥಿಗೆ ಅನ್ನದಾನ ಮಾಡಿದ್ದರಿಂದ ನಾನು ಧನ್ಯಳಾಗುವೆನು" ಎಂದಳು. ಆಗ ಬ್ರಾಹ್ಮಣನು "ಸೌಮ್ಯೆ, ಹಾಗೆನ್ನಬೇಡ. ಹೆಂಗಸರನ್ನು ಸಲಹುವುದು ಗಂಡಸರ ಧರ್ಮ. ಮೃಗ ಹಕ್ಕಿ ಹುಳುಗಳೂ ಸಹ ಈ ಧರ್ಮವನ್ನು ಪಾಲಿಸುತ್ತವೆ. ಧರ್ಮಕಾಮಾರ್ಥಗಳು, ದೇವಪಿತೃಗಳ ಸೇವೆ, ಸ್ವರ್ಗ, ವಂಶೋದ್ಧಾರ- ಇವೆಲ್ಲವೂ ಪತ್ನಿಯ ನೆರವಿನಿಂದಲೇ ಆಗತಕ್ಕವು. ಆದ್ದರಿಂದ ನೀನು ಸಂಕೋಚವಿಲ್ಲದೆ ಊಟಮಾಡು. ಇದರಿಂದ ಯಾವ ಅಪರಾಧವೂ ಘಟಿಸುವುದಿಲ್ಲ. ಭದ್ರೆ, ನಾನು ಹೇಳಿದಂತೆ ಮಾಡು. ನೀನು ಊಟಮಾಡಲು ನಾನು ಸಂಮತಿಸಿದ್ದೇನೆ. ಯಾವನು ಮಡದಿಗೆ ಕನಿಕರವನ್ನು ತೋರಿಸುವುದಿಲ್ಲವೋ ಅವಳನ್ನು ಪಾಲಿಸುವುದಿಲ್ಲವೋ, ಅವನು ನರಾಧಮನೇ ಸರಿ. ಅವನಿಗೆ ನರಕವೇ ಗತಿ" ಎಂದನು. ಪತಿಯ ನುಡಿಯನ್ನು ಕೇಳಿ ಬ್ರಾಹ್ಮಣಿಯು "ಸ್ವಾಮಿ, ದಂಪತಿಗಳು ಸಹಧರ್ಮಚಾರಿಗಳಾಗಿರಬೇಕೆಂದು ಬ್ರಹ್ಮನು ನಿಯಮಿಸಿದ್ದಾನೆ. ಮಹತ್ತರವಾದ ಈ ಧರ್ಮಕಾರ್ಯದಲ್ಲಿ ನೀನು ಅಡ್ಡಿಪಡಿಸಬಾರದು. ಸ್ತ್ರೀಯರಿಗೆ ಪತಿನಿಷ್ಠೆಯೇ ಧರ್ಮ, ಪತಿಯೇ ದೇವತೆ, ಪತಿಯೇ ಶ್ರೇಷ್ಠನಾದ ಬಂಧು, ಪತಿಯೇ ಪರಮ ಗತಿ. ಧರ್ಮಾರ್ಥಕಾಮಗಳೂ ಕೀರ್ತಿಯೂ ಸದ್ಗತಿಯೂ ಸ್ತ್ರೀಯರಿಗೆ ಪತಿಯು ಪ್ರಸನ್ನನಾದರೆ ದೊರೆಯುತ್ತವೆ. ಯಾವಳು ಮನೋವಾಕ್ಕಾಯಗಳಿಂದ ಗಂಡನನ್ನು ಸೇವಿಸುತ್ತ ನಿಷ್ಠೆಯಿಂದಿರುವಳೋ ಅವಳೇ ಭಾಗ್ಯಶಾಲಿನಿ. ಅವಳನ್ನು ದೇವತೆಗಳೂ ಪೂಜಿಸುತ್ತಾರೆ. ಇದುವರೆಗೆ ನೀನು ಊಟ ಮಾಡದೆ ಹಸಿದಿರುವಾಗ, ನಾನು ಊಟಮಾಡಿದ್ದು ಯಾವ ಸಂದರ್ಭದಲ್ಲಿಯೂ ಇಲ್ಲ. ಇದು ನನ್ನ ವ್ರತ. ಆದ್ದರಿಂದ ಈ ಹಿಟ್ಟನ್ನು ಅತಿಥಿಯಾದ ಬ್ರಾಹ್ಮಣನಿಗೆ ಬಡಿಸು" ಎಂದಳು. ಆ ಬ್ರಾಹ್ಮಣನು ನಿರ್ವಾಹವಿಲ್ಲದೆ ಅದನ್ನು ಅತಿಥಿಗೆ ಕೊಟ್ಟನು. ಅದರಿಂದಲೂ ಅತಿಥಿಗೆ ತೃಪ್ತಿಯಾಗಲಿಲ್ಲ. ಆಗ ಧರ್ಮಜ್ಞನಾದ ಬ್ರಾಹ್ಮಣಪುತ್ರನು ವಿನಯದಿಂದ ತಂದೆಯನ್ನು ಕುರಿತು "ಅಪ್ಪ, ನನ್ನ ಭಾಗವನ್ನೂ ಅತಿಥಿಗೆ ಅರ್ಪಿಸು. ಅವನು ತೃಪ್ತನಾಗಲಿ. ಆಹಾರವು ದೊರೆಯುವುದೆಂಬ ಆಸೆಯಿಂದ ಅತಿಥಿಯು ಮನೆಗೆ ಬರುತ್ತಾನೆ. ನಿರ್ಜನವಾದ ಗೃಹದಿಂದ ಹಿಂದಿರುಗುವಂತೆ ಅವನು ನಿರಾಶನಾಗಿ ದೈನ್ಯದಿಂದ ಹೊರಟು ಹೋಗುವುದಾದರೆ, ಆ ಮನೆಯ ಜನರು ಬದುಕಿದ್ದು ಫಲವೇನು? ತಮಗೆ ಆಹಾರವಿಲ್ಲದೆ ತೊಂದರೆಯಾದರೂ ಭಗವಂತನು ಸಂಪ್ರೀತನಾಗಲೆಂದು ಯಾರು ಅತಿಥಿಗೆ ಅನ್ನವನ್ನು ನೀಡುವರೋ ಅವರು ವಿಷ್ಣುಲೋಕದಲ್ಲಿ ದೇವತೆಗಳಿಂದಲೂ ಪೂಜಿಸಲ್ಪಡುವರು. ಯಾರ ಗೃಹದಲ್ಲಿ ಅತಿಥಿಯು ನಿರಾಶನಾಗುವನೋ ಅಂಥ ದುಷ್ಟರು ಸಂಪಾದಿಸಿದ ದ್ರವ್ಯವು ವ್ಯರ್ಥವೇ ಸರಿ. ಆದ್ದರಿಂದ ಈ ದ್ವಿಜನಿಗೆ ನನ್ನ ಭಾಗದ ಹಿಟ್ಟನ್ನೂ ಅರ್ಪಿಸುವುದು ಯುಕ್ತವಾಗಿದೆ. ತನ್ನ ಕುಟುಂಬಕ್ಕೆ ಪೀಡೆಯಾದರೂ ಯಾವನು ಮಾತ್ಸರ್ಯವಿಲ್ಲದೆ ಲೋಭವನ್ನು ತ್ಯಜಿಸಿ ಅತಿಥಿಗೆ ಅನ್ನವನ್ನು ನೀಡುವನೋ ಅವನು ಸದ್ಗತಿಯನ್ನು ಪಡೆಯುವನು" ಎಂದನು. ಆಗ ತಂದೆಯು "ವತ್ಸ, ನಿನಗೆ

ನೂರುವರ್ಷಗಳಾದರೂ ನನ್ನ ದೃಷ್ಟಿಯಲ್ಲಿ ಬಾಲಕನೇ. ಬಾಲಕರಿಗೆ ಹಸಿವು ತೀವ್ರವಾಗಿರುತ್ತದೆ. ಆದ್ದರಿಂದ, ಮಗು ನೀನು ಊಟ ಮಾಡು. ಪುತ್ರನಿಂದ ಉತ್ತಮಲೋಕವು ಲಭಿಸುತ್ತದೆಯೆಂದು ವೇದವು ಸಾರುತ್ತದೆ. ನೀನು ಬದುಕಿದ್ದರೆ ಸಕಲಲೋಕಗಳನ್ನೂ ನಾನು ಜಯಿಸಿದಂತೆಯೇ. ಆದ್ದರಿಂದ ನಿನ್ನ ಹಿತವನ್ನು ನೋಡಿಕೊಳ್ಳಬೇಕಾದ್ದು ನನ್ನ ಧರ್ಮ. ನಿನ್ನಂತಹ ಸುಪುತ್ರನಿರುವಾಗ ನಾನು ಮರಣಕ್ಕೆ ಅಂಜುವುದಿಲ್ಲ. ಸಾಮಾನ್ಯವಾಗಿ ಪಾಪಿಗಳು ಮಾತ್ರವೇ ಸಾವಿಗೆ ಹೆದರುತ್ತಾರೆ. ಈ ಲೋಕದಲ್ಲಿ ತಮ್ಮ ಕರ್ತವ್ಯವನ್ನು ನಿರ್ವಹಿಸಿದ ಕೃತಕೃತ್ಯರು, ಪ್ರಿಯನಾದ ಅತಿಥಿಯನ್ನು ಸ್ವಾಗತಿಸುವಂತೆ, ಮೃತ್ಯುವನ್ನು ಸ್ವಾಗತಿಸುತ್ತಾರೆ" ಎಂದು ಹೇಳಿದನು. ಆಗ ಪುತ್ರನು "ಅಪ್ಪ, ಮಗನು ಚಿಕ್ಕವನಾದಾಗ ತಂದೆಯು ಅವನನ್ನು ಪೋಷಿಸುವನೆಂದೂ ವಯಸ್ಸಾದ ಮೇಲೆ ಮಗನೇ ತಂದೆಯನ್ನು ಪೋಷಿಸಬೇಕೆಂದೂ ಶ್ರುತಿಯು ಸಾರುತ್ತದೆ. ಆದ್ದರಿಂದ ನನ್ನ ಭಾಗವನ್ನೂ ಅರ್ಪಿಸಿಬಿಡು" ಎಂದನು. ಆ ವೃದ್ಧಬ್ರಾಹ್ಮಣನು ಮಗನ ಪಾಲಿನ ಹಿಟ್ಟನ್ನೂ ಅತಿಥಿಗೆ ಬಡಿಸಿದನು. ಆಗಲೂ ಅತಿಥಿಗೆ ತೃಪ್ತಿಯಾದಂತೆ ಕಾಣಲಿಲ್ಲ. ಆಗ ಸೊಸೆಯು ಸಂತೋಷದಿಂದ ಮುಂದೆ ಬಂದು ವಿನಯಪೂರ್ವಕವಾಗಿ ಮಾವನನ್ನು ಕುರಿತು ತನ್ನ ಭಾಗವನ್ನೂ ಅತಿಥಿಗೆ ಬಡಿಸಬೇಕೆಂದು ನಿವೇದಿಸಿದಳು. ಆ ವೃದ್ಧನು "ಅಮ್ಮ ನೀನು ಇನ್ನೂ ಹುಡುಗಿ. ನನ್ನ ಸೊಸೆ. ಸಾಧ್ವಿಯಾದ ನೀನು ನಿಯಮಗಳನ್ನು ಪಾಲಿಸಿ ಕೃಶಳಾಗಿದ್ದೀಯೆ. ನನ್ನ ವಂಶವು ನಿನ್ನಿಂದ ಬೆಳೆಯಬೇಕಾಗಿದೆ. ನಿನ್ನನ್ನು ಪೋಷಿಸುವುದು ನನ್ನ ಹೊಣೆ. ಗುರುಶುಶ್ರೂಷೆಯಲ್ಲಿ ಸದಾ ನಿರತಳಾಗಿದ್ದೀಯೆ. ಪತಿವ್ರತೆಯಾದ ನಿನ್ನ ಮುಖವು ಹಸಿವಿನಿಂದ ಬಾಡಿರುವುದನ್ನು ನೋಡಿ ನನಗೆ ಸಂಕಟವಾಗುತ್ತಿದೆ" ಎಂದನು. ಸೊಸೆಯು "ಪೂಜ್ಯನೆ, ನೀನು ನನ್ನ ಸ್ವಾಮಿಗೆ ಸ್ವಾಮಿಯಾಗಿದ್ದೀಯೆ. ನನ್ನ ದೇವರಿಗೆ ದೇವನಾಗಿದ್ದೀಯೆ. ನನ್ನ ಗುರುವಿಗೆ ಗುರು. ಸರ್ವಪೂಜ್ಯನಾದ ನೀನು ಹೀಗೆ ಹೇಳಬಹುದೇ? ನನ್ನಲ್ಲಿ ಮರುಕವಿರುವುದಾದರೆ, ನಾನು ನಿಮ್ಮ ಭಕ್ತಳಾದರೆ, ಹೇ ಭಗವನ್, ಈ ಹಿಟ್ಟನ್ನು ಅತಿಥಿಗೆ ಅರ್ಪಿಸಿ ನನ್ನನ್ನು ಅನುಗ್ರಹಿಸಬೇಕು" ಎಂದು ಬೇಡಿಕೊಂಡಳು. ಆ ಬ್ರಾಹ್ಮಣನು ಸೊಸೆಯ ಪಾಲಿನ ಹಿಟ್ಟನ್ನೂ ಅತಿಥಿಗೆ ಬಡಿಸಿಬಿಟ್ಟನು. ಆಗಲೂ ಆ ವೃದ್ಧನ ಮನಸ್ಸಿಗೆ ಸ್ವಲ್ಪವೂ ಬೇಸರವಾಗಲಿಲ್ಲ. ಅತಿಥಿಯು ಬಂದು ಭೋಜನ ಮಾಡಿದ್ದೇ ತನಗೆ ಒಂದು ಅನುಗ್ರಹವೆಂದು ಭಾವಿಸಿದನು. ಧರ್ಮನಿಷ್ಠನಾದ ಆ ತಪಸ್ವಿಯ ಮನಸ್ಸು ಪರ್ವತದಂತೆ ನಿಶ್ಚಲವಾಗಿ ಏಕಾಗ್ರವಾಗಿತ್ತು. ಅತಿಥಿಯ ಭೋಜನವಾಯಿತು. ಅನಂತರ ವೃದ್ಧಬ್ರಾಹ್ಮಣನ ಪರಿಶುದ್ಧವಾದ ಅಂತರಂಗವನ್ನರಿತು ಅತಿಥಿಯು ಹೀಗೆಂದನು: "ಅಯ್ಯಾ-ತಪಸ್ವಿಯೆ, ನಾನು ಧರ್ಮದೇವತೆ. ನಿನ್ನನ್ನು ಪರೀಕ್ಷಿಸುವುದಕ್ಕಾಗಿ ದ್ವಿಜವೇಷದಿಂದ ಆಗಮಿಸಿದೆನು. ನನಗೆ ದಮ, ತಪಸ್ಸು, ದಯೆ, ದಾನ, ಶೌಚ, ಇಂದ್ರಿಯನಿಗ್ರಹ, ಸತ್ಯ, ಕ್ಷಮೆ, ಆರ್ಜವ, ಜ್ಞಾನ-ಎಂಬ ಹತ್ತು ಮಂದಿ ಮಕ್ಕಳು. ಯಾವ ಮನುಷ್ಯನು ಈ ಪುತ್ರರನ್ನು ಭಕ್ತಿಯಿಂದ ನಿತ್ಯವೂ ಆರಾಧಿಸುವನೋ ಅವನಿಗೆ ಇಷ್ಟವಾದ ಸದ್ಗತಿಯನ್ನು ನಾನು ಕರುಣಿಸುತ್ತೇನೆ. ನೀನು ಉಂಛವೃತ್ತಿಯಿಂದ ಆರ್ಜಿಸಿದ ಆಹಾರವನ್ನು ಶುದ್ಧಭಾವದಿಂದ ನನಗೆ

ಅರ್ಪಿಸಿದ್ದೀಯೆ. ಹಸಿವಿನಿಂದ ತಪಿಸುತ್ತಿದ್ದರೂ ನೀನು ಲೆಕ್ಕಿಸದೆ ಸರ್ವವನ್ನೂ ನನಗೆ ಬಡಿಸಿದ್ದೀಯೆ. ನೀನು ಬ್ರಹ್ಮಲೋಕವನ್ನು ಪಡೆಯುವೆ. ಸ್ವರ್ಗದಲ್ಲಿರುವ ದೇವತೆಗಳೂ ಬ್ರಹ್ಮರ್ಷಿಗಳೂ ನಿನ್ನ ದಾನವನ್ನು ವಿಸ್ಮಯದಿಂದ ಕೊಂಡಾಡುವರು. ಒಂದು ಸೇರು ಹಿಟ್ಟನ್ನು ಶ್ರದ್ಧೆಯಿಂದ ದಾನ ಮಾಡಿರುವೆಯೆಂದು ಅವರೆಲ್ಲರೂ ನಿನ್ನ ದಾನವನ್ನು ಪ್ರಶಂಸಿಸುವರು. ನಿನ್ನ ಕೀರ್ತಿಯು ಜಗತ್ತಿನಲ್ಲಿ ಹರಡಿತೆಂದು ತಿಳಿ. ಎಲೈ ವಿಪ್ರನೆ, ನಿನ್ನ ಅಗ್ನಿಹೋತ್ರವೂ ವೇದಾಧ್ಯಯನವೂ ಯಜ್ಞವೂ ತಪಸ್ಸೂ-ಎಲ್ಲವೂ ಇಂದು ಫಲಿಸಿದವು. ಪ್ರಾಣಿಮಾತ್ರದಲ್ಲಿ ದುರ್ಲಭವಾದ ಈ ಚಿತ್ತಶುದ್ಧಿಯು ನಿನಗೆ ಲಭಿಸಿತು." ಹೀಗೆ ಆ ಧರ್ಮಪುರುಷನು ಹೇಳುತ್ತಿರುವಾಗ ಗಗನದಿಂದ ಪುಷ್ಪವೃಷ್ಟಿಯು ವೃದ್ಧನ ಮೇಲೆ ಸುರಿಯಿತು. ಮತ್ತೆ ಆ ಧರ್ಮಪುರುಷನು "ಭೋ ವಿಪ್ರ, ಹಸಿವೆಂಬುದು ಜನರ ತೇಜಸ್ಸು, ಪ್ರಜ್ಞೆ, ಬಲ, ಧೈರ್ಯಗಳನ್ನು ನಾಶಮಾಡಿಬಿಡುತ್ತದೆ. ಹಸಿವನ್ನು ಜಯಿಸುವುದು ಬಹು ಕಠಿಣ. ಯಾವನು ಅದನ್ನು ಜಯಿಸುವನೋ ಅವನು ಸ್ವರ್ಗವನ್ನೂ ಜಯಿಸಬಲ್ಲನು. ನಿನ್ನ ಪತ್ನಿ, ಪುತ್ರ, ಸಾಧ್ವಿಯಾದ ಸೊಸೆ, ನಿನ್ನ ದೇಹ-ಇವೆಲ್ಲವನ್ನೂ ಧರ್ಮಪಾಲನೆಗಾಗಿ ಹುಲ್ಲಿನಂತೆ ಕಂಡಿರುವೆ. ಎಲೈ ಬ್ರಾಹ್ಮಣನೆ, ಶ್ರೀಮಂತರು ಶ್ರದ್ಧೆಯಿಲ್ಲದೆ ಬೇಕಾದಷ್ಟು ದಾನಮಾಡಿದರೂ ಈ ಧರ್ಮದೇವತೆಯು ಪ್ರಸನ್ನನಾಗುವುದಿಲ್ಲವೆಂದು ತಿಳಿ! ನ್ಯಾಯದಿಂದ ಸಂಪಾದಿಸಿದ ವಸ್ತುವನ್ನು ಶ್ರದ್ಧೆಯಿಂದ ದಾನಮಾಡಿದರೆ, ಅದು ಅಲ್ಪವಾಗಿದ್ದರೂ ನಾನು ಸಂತೃಪ್ತನಾಗುತ್ತೇನೆ. ಅಶ್ರದ್ಧೆಯು ಪಾಪಕರವಾದದ್ದು. ಶ್ರದ್ಧೆಯು ಪಾಪವನ್ನು ನಾಶಮಾಡುವುದು. ಸರ್ಪವು ಪೊರೆಯಿಂದ ವಿಮುಕ್ತವಾಗುವಂತೆ, ಶ್ರದ್ಧಾವಂತನು ಪಾಪದಿಂದ ಬಿಡುಗಡೆ ಹೊಂದುತ್ತಾನೆ. ಶ್ರದ್ಧಾರಹಿತವಾದದ್ದು ಬಹಳವಾಗಿದ್ದರೂ ನಷ್ಟವೆಂದೇ ವಿದ್ವಾಂಸರು ಹೇಳುತ್ತಾರೆ. ಶ್ರದ್ಧೆಯಿಂದ ನೀರನ್ನು ದಾನಮಾಡಿದರೂ ಅಕ್ಷಯವಾಗುತ್ತದೆ. ಹಿಂದೆ ರಂತಿದೇವನೆಂಬ ಪುಣ್ಯಾತ್ಮನು ಬಡವನೇ ಆಗಿದ್ದನು. ಆದರೆ ಶ್ರದ್ಧೆಯಿಂದ ಆತನು ಪೂತನಾಗಿ ಸ್ವರ್ಗವನ್ನು ಪಡೆದನು. ಔಶೀನರನಾದ ಶಿಬಿಯು ತನ್ನ ಮಾಂಸವನ್ನೇ ದಾನಮಾಡಿದ್ದರಿಂದ ಪರಿಶುದ್ಧನಾಗಿ ದೇವತೆಯಂತೆ ಚಿರಕಾಲ ಆನಂದವನ್ನನುಭವಿಸಿದನು. ಓ ತಪಸ್ವಿಯೆ, ಅಲ್ಲಿ ನೋಡು; ದೇವವಿಮಾನವು ಆಕಾಶಮಾರ್ಗದಲ್ಲಿ ಬಂದಿತು! ಪತ್ನಿ ಪುತ್ರ ಸೊಸೆಯರೊಡನೆ ಅದನ್ನೇರಿ ಸ್ವರ್ಗಕ್ಕೆ ಹೋಗು!" ಎಂದು ತಿಳಿಸಿದನು.

ಎಲೈ ವಿಪ್ರರೆ, ಈ ಪ್ರಕಾರವಾಗಿ ಸಾಕ್ಷಾತ್ ಧರ್ಮಪುರುಷನು ನುಡಿಯಲಾಗಿ, ಆ ಬ್ರಾಹ್ಮಣನು ತನ್ನ ಕುಟುಂಬದೊಡನೆ ವಿಮಾನವನ್ನೇರಿ ಸ್ವರ್ಗಕ್ಕೆ ಹೋದನು. ಅವರೆಲ್ಲರೂ ಹೊರಟು ಹೋದ ಮೇಲೆ ನಾನು ಬಿಲದಿಂದ ಹೊರಗೆ ಬಂದು, ದಿವ್ಯಪುಷ್ಪಗಳು ಉದುರಿದ ಸ್ಥಳದಲ್ಲಿ-ಹಿಟ್ಟು ನೀರು ಸಂಮಿಶ್ರವಾದ ಎಡೆಯಲ್ಲಿ-ಯಥೇಚ್ಛೆಯಾಗಿ ಅಲೆದಾಡಿದೆನು. ಧರ್ಮದೇವತೆಯ ಅನುಗ್ರಹದಿಂದಲೂ ಆ ತಪಸ್ವಿಯ ಮಹಿಮೆಯಿಂದಲೂ ನನ್ನ ದೇಹದ ಒಂದು ಪಾರ್ಶ್ವವು (ಶಿರೋಭಾಗ) ಸುವರ್ಣವಾಯಿತು! ಆಮೇಲೆ ಎರಡನೆಯ ಪಾರ್ಶ್ವವೂ ಸುವರ್ಣಮಯವಾಗಲೆಂಬ ಬಯಕೆ ಹುಟ್ಟಿತು. ಆಗ ನಾನು ತಪೋವನಗಳನ್ನೂ

ದಿವ್ಯತೀರ್ಥಗಳನ್ನೂ ಸಕಲಯಜ್ಞಗಳನ್ನೂ ಅರಸುತ್ತ ಅಲೆಯುತ್ತಿದ್ದೇನೆ. ಎಲ್ಲಿ ಹೋದರೂ ಇನ್ನೊಂದು ಭಾಗವು ಚಿನ್ನವಾಗಲಿಲ್ಲ. ಹೀಗಿರಲು ಧೀಮಂತನಾದ ಈ ಧರ್ಮರಾಜನು ಅಶ್ವಮೇಧಯಾಗವನ್ನು ನಡೆಸುತ್ತಾನೆಂದು ತಿಳಿದು ಇಲ್ಲಿಗೆ ಬಂದೆನು. ಇಲ್ಲಿ ಇನ್ನೊಂದು ಭಾಗವು ಚಿನ್ನವಾಗಿಯೇ ತೀರುವುದೆಂಬ ಮಹತ್ತರವಾದ ಆಸೆಯಿತ್ತು. ಆದರೆ ಚಿನ್ನವಾಗಲಿಲ್ಲ!" ಜನಮೇಜಯ, ಈ ರೀತಿಯಲ್ಲಿ ಆ ಮುಂಗಸಿಯು ಹೇಳಿ, ಆ ದ್ವಿಜರು ನೋಡುತ್ತಿರುವಾಗಲೇ ತನ್ನ ಪಾಡಿಗೆ ಹೊರಟುಹೋಯಿತು!

ಮಹಾರಾಜ, ಅಶ್ವಮೇಧಯಾಗದ ವಿಷಯವಾಗಿ ನೀನು ಕೇಳಿದುದೆಲ್ಲವನ್ನೂ ತಿಳಿಸಿದ್ದೇನೆ. ಆ ಸಂದರ್ಭದಲ್ಲಿ ನಡೆದ ಈ ಅಚ್ಚರಿಯ ಪ್ರಸಂಗವನ್ನೂ ಹೇಳಿದ್ದೇನೆ. ಆದ್ದರಿಂದ ನೀನು ನಡೆಸುವ ಈ ಯಾಗದಲ್ಲಿ ಎಂದಿಗೂ ಗರ್ವವನ್ನು ಅವಲಂಬಿಸಬೇಡ. ಮುನಿಗಳು ಯಾವ ಯಾಗವನ್ನೂ ಮಾಡದೆ ಶ್ರದ್ಧೆಯ ಬಲದಿಂದಲೇ ಪೂತರಾಗಿ ಸ್ವರ್ಗವನ್ನು ಪಡೆದಿದ್ದಾರೆ. ಮುಖ್ಯವಾಗಿ ಯಾವ ಪ್ರಾಣಿಗೂ ಕೇಡನ್ನು ಬಯಸದಿರುವುದು, ಸಂತೋಷ, ಸತ್ಯ, ಆರ್ಜವ, ಇಂದ್ರಿಯಜಯ ಮತ್ತು ತಪಸ್ಸು-ಇವು ಸ್ವರ್ಗಕ್ಕೆ ಸಾಧನಗಳು.

# ನಕುಲೋಪಾಖ್ಯಾನಸಮಾಪ್ತಿ

ಆಗ ಜನಮೇಜಯರಾಜನು ಜೈಮಿನಿಮುನಿಗಳನ್ನು ಕುರಿತು, "ಮಹಾತ್ಮರೆ, ಸುವರ್ಣದ ಶಿರಸ್ಸಿನಿಂದ ಕೂಡಿ ಮುಂಗಸಿಯ ರೂಪದಿಂದ ಬಂದು ಮನುಷ್ಯನಂತೆ ಮಾತಾಡಿದ ಆ ಮುಂಗಸಿಯು ವಾಸ್ತವವಾಗಿ ಯಾರು? ದಯವಿಟ್ಟು ತಿಳಿಸಬೇಕು" ಎಂದು ಕೇಳಿದನು. ಜೈಮಿನಿಮುನಿಗಳು ಹೀಗೆಂದರು: ಮಹಾರಾಜ, ಆ ವಿಷಯವನ್ನು ಹೇಳುತ್ತೇನೆ, ಕೇಳು. ಹಿಂದೊಮ್ಮೆ ಜಮದಗ್ನಿ ಮುನಿಯು ಶ್ರಾದ್ಧವನ್ನು ಮಾಡಬೇಕೆಂದು ಸಂಕಲ್ಪಿಸಿದನು. ಆಗ ಸ್ವರ್ಗಲೋಕದಿಂದ ಹೋಮಧೇನುವು ಅಲ್ಲಿಗೆ ಆಗಮಿಸಿತು. ಆ ಕಾಮಧೇನುವಿನ ಹಾಲನ್ನು ಜಮದಗ್ನಿಯು ದೃಢವಾದ ಒಂದು ಹೊಸ ಗಡಿಗೆಯಲ್ಲಿ ತುಂಬಿಟ್ಟನು. ಆಗ ಕ್ರೋಧ ಪುರುಷನು ಸರ್ಪರೂಪದಿಂದ ಬಂದು ವಿಷವನ್ನು ಹಾಲಿನಲ್ಲಿ ಕಾರಿ ಅದನ್ನು ಕೆಡಿಸಿಬಿಟ್ಟನು! ಜಮದಗ್ನಿಯು ಕೋಪಿಸಿಕೊಳ್ಳುವನೋ ಇಲ್ಲವೋ ಎಂದು ಪರೀಕ್ಷೆ ಮಾಡುವುದೇ ಆ ದುರ್ಬುದ್ಧಿಯ ಉದ್ದೇಶವಾಗಿತ್ತು. ಹಾಲು ಕೆಟ್ಟುಹೋದರೂ ಜಮದಗ್ನಿ ಮುನಿಯು ಕೋಪಿಸಿಕೊಳ್ಳಲಿಲ್ಲ. ಆಗ ಕ್ರೋಧಪುರುಷನು ಪ್ರತ್ಯಕ್ಷನಾಗಿ ಕೈಮುಗಿದುಕೊಂಡು "ಮುನಿಶ್ರೇಷ್ಠನೆ, ನಾನು ಪರಾಜಿತನಾದೆನು! ಭೃಗುವಂಶೀಯರು ಬಹಳ ಕೋಪಿಷ್ಠರೆಂದು ಲೋಕದಲ್ಲಿ ಆಡಿಕೊಳ್ಳುವುದು ಮಿಥ್ಯಾಪವಾದವೆಂದು ಸಿದ್ಧವಾಯಿತು. ಏಕೆಂದರೆ, ನೀನು ನನ್ನನ್ನು ಜಯಿಸಿದೆ! ಕ್ಷಮಾಶೀಲನೂ ಮಹಾತ್ಮನೂ ಆದ ನಿನ್ನನ್ನು ನಾನು ಪರೀಕ್ಷಿಸಲು ಬಂದು ಅಪರಾಧವನ್ನು ಮಾಡಿದೆನು. ನನ್ನಲ್ಲಿ ಕೃಪೆಯಿಟ್ಟು ಮನ್ನಿಸು" ಎಂದು ಬೇಡಿದನು. ಆಗ ಜಮದಗ್ನಿಯು "ಎಲೈ ಕ್ರೋಧ, ನಾನು ಹೇಳುತ್ತಿದ್ದೇನೆ, ನೀನು ನಿಶ್ಚಿಂತೆಯಿಂದ ಹೊರಟುಹೋಗು! ನೀನು ನನಗೆ ಯಾವ ಅಪರಾಧವನ್ನೂ ಮಾಡಿಲ್ಲ. ನಿನ್ನ ಮೇಲೆ ನನಗೆ ಅಸಮಾಧಾನವೂ ಇಲ್ಲ. ಆದರೆ ಯಾವ ಪಿತೃದೇವತೆ ಗಳಿಗೋಸ್ಕರ ನಾನು ಹಾಲನ್ನು ಮೀಸಲಾಗಿಟ್ಟಿದ್ದೆನೋ ಆ ಮಹಾತ್ಮರಿಂದ ನಿನಗೆ ತೊಂದರೆಯಾಗಬಹುದು ಎಂದು ತಿಳಿ. ಇನ್ನು ಹೊರಡು" ಎಂದು ಹೇಳಿದನು. ಕ್ರೋಧಪುರುಷನು ಹೆದರಿ ನಡುಗುತ್ತ ಅಂತರ್ಹಿತನಾದನು. ಅವನು ಪಿತೃದೇವತೆಗಳ ಶಾಪದಿಂದ ಮುಂಗಸಿಯಾದನು. ಆಮೇಲೆ ಶಾಪದ ಪರಿಹಾರಕ್ಕಾಗಿ ಪಿತೃಗಳನ್ನು ಪ್ರಾರ್ಥಿಸಿಕೊಳ್ಳಲು, ಅವರು "ಎಲೈ ಕ್ರೋಧ, ಧರ್ಮರಾಜನ ಸಭೆಯಲ್ಲಿ ಶ್ರೀಕೃಷ್ಣನಿರುವಾಗ ನೀನು ಈ ಉಂಛವೃತ್ತಿಯಲ್ಲಿದ್ದ ಬ್ರಾಹ್ಮಣನ ಕಥೆಯನ್ನು ಯಾವಾಗ ಹೇಳುವೆಯೋ ಆಗ ಈ ಶಾಪವು ನೀಗುವುದು" ಎಂದು ಹೇಳಿದರು. ಆದ್ದರಿಂದ ಆ ಮುಂಗಸಿಯು ಯಜ್ಞಸಭೆಗಳನ್ನೂ ಧರ್ಮಾರಣ್ಯಗಳನ್ನೂ ಪ್ರವೇಶಿಸಿ ಅಲೆಯುತ್ತ ಕಡೆಗೆ ಶ್ರೀಕೃಷ್ಣನ ದರ್ಶನಕ್ಕಾಗಿ ಧರ್ಮರಾಜನ ಸಭೆಗೆ ಬಂದಿತು. ಅಲ್ಲಿ ಸೇರು ಹಿಟ್ಟಿನ ಕಥೆಯನ್ನೆತ್ತಿ ಯುಧಿಷ್ಠಿರನನ್ನು ಆಕ್ಷೇಪಿಸಿ ಶಾಪದಿಂದ ವಿಮುಕ್ತವಾಯಿತು. ಈ ಪ್ರಕಾರವಾಗಿ ಆ ಮಹಾತ್ಮನ ಕಥೆಯನ್ನೂ ಹೇಳಿ ನಮ್ಮೆಲ್ಲರೆದುರಿಗೆ ಅಂತರ್ಹಿತವಾಯಿತು. ಜನಮೇಜಯ, ಶಂಖಚಕ್ರಗದಾಧರನಾದ ಭಗವಾನ್ ಶ್ರೀಕೃಷ್ಣನು ಸಮಾಪ್ತಿಪರ್ಯಂತವಾಗಿಯೂ ಅಶ್ವಮೇಧಯಾಗವನ್ನು ರಕ್ಷಿಸಿ ನೆರವೇರಿಸಿ ಕೊಟ್ಟನು. ಆ ಜಗನ್ನಾಥನು ಪಾಂಡವರಿಂದ ಪೂಜಿತನಾಗಿ ಹಸ್ತಿನಾಪುರದಲ್ಲಿ ಬಹಳ ದಿನಗಳವರೆಗೆ ಇದ್ದನು.

# ಅಶ್ವಮೇಧ ಪರ್ವದ ಫಲಶ್ರುತಿ

ಜೈಮಿನಿಮುನಿಗಳು ಹೇಳಿದರು : ಜನಮೇಜಯ, ಶ್ರೀಕೃಷ್ಣನೇ ಮೊದಲಾದ ಸಕಲಯಾದವರನ್ನೂ ಯಾಗಕ್ಕಾಗಿ ಬಂದಿದ್ದ ಸಮಸ್ತಭೂಪಾಲರನ್ನೂ ಧರ್ಮರಾಜನು ಆದರದಿಂದ ಗೌರವಿಸಿ ಸತ್ಕರಿಸಿದನು. ರಾಜ್ಯದ ನಿಖಿಲಪ್ರಜೆಗಳೂ ಧರ್ಮರಾಜನ ಆಳ್ವಿಕೆಯಲ್ಲಿ ಆನಂದದಿಂದ ಬಾಳಿದರು. ಈ ಪ್ರಕಾರವಾಗಿ ಅಶ್ವಮೇಧಿಕ ಪರ್ವದ ವೃತ್ತಾಂತವನ್ನು ನಿನಗೆ ತಿಳಿಸಿದ್ದೇನೆ. ಮಹಾರಾಜ, ಈ ಪರ್ವದ ಮಹಿಮೆಯನ್ನು ಕೇಳು. ಒಂದು ಸಾವಿರ ಗೋವುಗಳನ್ನು ದಾನಮಾಡಿದರೆ ಯಾವ ಫಲವಿದೆಯೋ, ಆ ಫಲವು ಈ ಪರ್ವವನ್ನು ಸಮಗ್ರವಾಗಿ ಕೇಳಿದವನಿಗೆ ಲಭಿಸುತ್ತದೆ. ಇದನ್ನು ಶ್ರವಣ ಮಾಡಿಸಿದವನಿಗೆ ಅದರ ನೂರರಷ್ಟು ಫಲವು ದೊರೆಯುತ್ತದೆ. ಯಾರು ಈ ಪುಸ್ತಕವನ್ನೂ ಗೋವನ್ನೂ ಧನವನ್ನೂ ಬ್ರಾಹ್ಮಣನಿಗೆ ದಾನ ಮಾಡುವನೋ ಮತ್ತು ಎಂಟು ವರ್ಷದ ಗೌರೀಕನ್ಯೆಯನ್ನು ಮದುವೆ ಮಾಡಿ ನೀಲವೃಷಭವನ್ನು ಉತ್ಸರ್ಗಮಾಡುವನೋ ಆತನಿಗೂ ಈ ಅಶ್ವಮೇಧಿಕ ಪರ್ವವನ್ನು ಶ್ರವಣ ಮಾಡುವವನಿಗೂ ಸಮವಾದ ಫಲವು ದೊರೆಯುತ್ತದೆ. ಇದನ್ನು ಶ್ರವಣಮಾಡತಕ್ಕ ಬ್ರಾಹ್ಮಣನಿಗೆ ವಿದ್ಯೆಯೂ ಧನಾರ್ಥಿಗೆ ಧನವೂ ಲಭಿಸುತ್ತವೆ. ಕ್ಷತ್ರಿಯನು ಶೂರನಾಗುವನು. ಅವನಿಗೆ ಎಂದಿಗೂ ಸೋಲು ಸಂಭವಿಸುವುದಿಲ್ಲ. ಈ ಪರ್ವವನ್ನು ಭಕ್ತಿಯಿಂದ ಆಲಿಸಿದರೆ, ಪುತ್ರಹೀನನಿಗೆ ಪುತ್ರಲಾಭವಾಗುವುದು. ರೋಗಿಯು ರೋಗದಿಂದ ಬಿಡುಗಡೆ ಹೊಂದುವನು. ಹದಿನೆಂಟು ಪುರಾಣಗಳನ್ನು ಪಠಿಸಿದರೆ ಯಾವ ಫಲಉಂಟೋ ಅದು ಭಾರತದ ಶ್ರವಣದಿಂದ ಪ್ರಾಪ್ತವಾಗುವುದು. ಜನಮೇಜಯ, ಭಕ್ತಿಯಿಂದ ಅಶ್ವಮೇಧಪರ್ವವನ್ನು ಶ್ರವಣಮಾಡಿದರೆ ಸಮಗ್ರಭಾರತಶ್ರವಣದಿಂದಾದ ಫಲವು ಲಭಿಸುತ್ತದೆ. ಮಹಾರಾಜ, ಈ ಪರ್ವದ ಸಮಾಪ್ತಿಯಲ್ಲಿ ಬ್ರಾಹ್ಮಣರಿಗೆ ಭಕ್ಷ್ಯಭೋಜ್ಯ ಗಳಿಂದ ಸಂತರ್ಪಣೆಯನ್ನು ಮಾಡಿಸಿ ವಸ್ತ್ರಭೂಷಣಗಳನ್ನು ದಾನಮಾಡಬೇಕು. ಹತ್ತು ಕರ್ಷ ಪ್ರಮಾಣದ ಸುವರ್ಣಾಶ್ವವನ್ನು ದಾನಮಾಡಬೇಕು ಮತ್ತು ನಿಜವಾದ ಒಂದು ವೃಷಭವನ್ನೂ ಕೊಡಬೇಕು. ಇದರಿಂದ ಈ ಪರ್ವಶ್ರವಣದ ಫಲವು ಪುಷ್ಕಳವಾಗುತ್ತದೆ. ಅಷ್ಟು ಸಾಮರ್ಥ್ಯವಿಲ್ಲದಿದ್ದರೆ ತನ್ನ ಶಕ್ತ್ಯನುಸಾರವಾಗಿ ದಾನಧರ್ಮಗಳನ್ನು ಮಾಡಬೇಕು. ಹೀಗೆ ದಾನ ಮಾಡಿದರೆ ಮಾತ್ರವೇ ಸಂಪೂರ್ಣವಾದ ಫಲವು ದೊರಕುತ್ತದೆ. ಜನಮೇಜಯ ಮಹಾರಾಜ, ಇದುವರೆಗೆ ಭಾರತದ ಹದಿನಾಲ್ಕು ಪರ್ವಗಳನ್ನು ನಿನಗೆ ಹೇಳಿದ್ದೇನೆ. ಇನ್ನು ಮುಂದೆ ಆಶ್ರಮವಾಸವೆಂಬ ಪರ್ವವಿದೆ, ಅದನ್ನು ಕೇಳು.



ಪ್ರಿಯ ಕನ್ನಡ ಬಂಧುಗಳೆ,

೧೯೧೫ರಲ್ಲಿ ಸ್ಥಾಪನೆಗೊಂಡ ಕನ್ನಡ ಸಾಹಿತ್ಯ ಪರಿಷತ್ತು ೯೫ನೇ ವರ್ಷದ ಹೊಸ್ತಿಲಲ್ಲಿದೆ. ಸ್ಥಾಪನೆಗೊಂಡಂದಿನಿಂದ ಇಂದಿನವರೆಗೂ ಕನ್ನಡ-ಕನ್ನಡಿಗ-ಕರ್ನಾಟಕದ ಒಳಿತಿಗೆ ಶ್ರಮಿಸುತ್ತಾ, ಕನ್ನಡಿಗರಲ್ಲಿ ಸಾಹಿತ್ಯ ಮತ್ತು ಸಾಂಸ್ಕೃತಿಕ ಎಚ್ಚರ ಮೂಡಿಸುವಲ್ಲಿ ಪರಿಷತ್ತಿನ ಪ್ರಕಟಣೆಗಳು ಮಹತ್ವದ ಪಾತ್ರ ವಹಿಸುತ್ತಾ ಬಂದಿವೆ. ನಮ್ಮ ಪ್ರಕಟಣೆಗಳು ಓದುಗರ ಜೇಬಿಗೆ ಭಾರವೆನಿಸುವಂಥವಲ್ಲ, ಆದಷ್ಟೂ ಕಡಿಮೆ ಬೆಲೆಯಲ್ಲಿ ಮೌಲಿಕ ಕೃತಿಗಳನ್ನು ಸಹೃದಯರಿಗೆ ಕೊಡಬೇಕೆನ್ನುವ ನೀತಿಗೆ ಪರಿಷತ್ತು ಈಗಲೂ ಬದ್ಧವಾಗಿದೆ. ಕನ್ನಡಿಗರನ್ನು ಪ್ರಜ್ಞಾವಂತರಾಗಿ, ಅಭಿಮಾನಧನರಾಗಿ, ವಿಶ್ವಮಾನವರಾಗಿ ರೂಪಿಸಲು ಪರಿಷತ್ತು ಪ್ರಕಟಿಸುವ ಸಾಹಿತ್ಯವು ಪೂರಕವಾಗಿರಬೇಕೆನ್ನುವ ಆಶಯ ನನ್ನದು.

ಪರಿಷತ್ತು ಈಗಾಗಲೇ ಪ್ರಕಟಿಸಿ ಅತ್ಯಂತ ಜನಪ್ರಿಯವಾಗಿರುವ ಹಾಗೂ ಹೊಸ ಪುಸ್ತಕಗಳನ್ನು ಚಿತ್ರದುರ್ಗದಲ್ಲಿ ನಡೆಯುತ್ತಲಿರುವ ಅಖಿಲ ಭಾರತ ೭೫ನೆಯ ಅಮೃತ ಮಹೋತ್ಸವ ಕನ್ನಡ ಸಾಹಿತ್ಯ ಸಮ್ಮೇಳನದ ಸಂದರ್ಭದಲ್ಲಿ ಮುದ್ರಣಗೊಳಿಸಿ ಕನ್ನಡಿಗರ ಕೈಗೊಪ್ಪಿಸುವುದಕ್ಕೆ ನಮಗೆ ಹೆಮ್ಮೆಯೆನಿಸುತ್ತದೆ. ಸಹೃದಯರು ಈ ಪುಸ್ತಕಗಳನ್ನು ಎಂದಿನ ಪ್ರೀತ್ಯಾದರಗಳಿಂದ ಬರಮಾಡಿಕೊಳ್ಳುವರೆಂಬ ಭರವಸೆ ನನಗಿದೆ.

**ಡಾ. ನಲ್ಲೂರು ಪ್ರಸಾದ್. ಆರ್.ಕೆ.**
ಅಧ್ಯಕ್ಷರು
ಕನ್ನಡ ಸಾಹಿತ್ಯ ಪರಿಷತ್ತು



**ಕನ್ನಡ ಸಾಹಿತ್ಯ ಪರಿಷತ್ತು**
ಪಂಪಮಹಾಕವಿ ರಸ್ತೆ, ಚಾಮರಾಜಪೇಟೆ
ಬೆಂಗಳೂರು-೫೬೦ ೦೧೮